# ನರಸಿಂಹ ಪದಾರ್ಥ - 2

## (ನೂರೆಂಟು ನೆಲೆಗಳು)

ಕೆ.ಆರ್. ನರಸಿಂಹನ್

ಕೋಲಾರ ಪತ್ರಿಕೆ ಪ್ರಕಾಶನ,
ಕೋಲಾರ

PLACED ON THE SHELF
Date ..............................

**Narasimha Padartha** - a religious book written by K.R. Narasimhan, Principal, Govt. First Grade College, Shirahatti & Published by: Kolara Patrike Prakashana, 2nd Cross, Gowripet, Kolar-563 101

Copies : 1000
First Edition : 2001
Pages : 8+208+24 Colour Pages (Photos)
Price : Rupees **Hundred (100/-)**

SRI VENKATESWARA CENTRAL LIBRARY & RESEARCH CENTRE,
Acc. No 56012
Date ..............................
TIRUPATI.



Published with the financial assistance of
**TIRUMALA TIRUPATHI DEVASTHANAMS**
under their scheme
AID TO PUBLISH RELIGIOUS BOOKS

ಪುಟಗಳು : 8+208+24

ಬೆಲೆ : **100** ರೂ.

ಪ್ರತಿಗಳಿಗೆ ವಿಚಾರಿಸಿ: ಕೋಲಾರ ಪತ್ರಿಕೆ ಕಾರ್ಯಾಲಯ
2ನೇ ರಸ್ತೆ, ಗೌರಿಪೇಟೆ
ಕೋಲಾರ - 563 101

ಮುದ್ರಣ : ಸುಮನ ಆಫ್‌ಸೆಟ್, ಕೋಲಾರ

# ಅರಿಕೆ

ನರಸಿಂಹ ಸ್ವಾಮಿಯನ್ನು ಪುರಾಣ ಕಥೆಗಳಿಂದಾಗಲೀ, ರಹಸ್ಯ ತತ್ತ್ವಗಳಿಂದೊಡಗೂಡಿದ ಉಪನಿಷತ್ ಸೂಕ್ತಗಳಿಂದಾಗಲೀ, ಶಾಸ್ತ್ರನಿಷ್ಠ ಪ್ರಮೇಯಗಳಂತಹ ಪದ್ಯಗಳಿಂದಾಗಲೀ, ಸುಲಲಿತವಾದ ಕೀರ್ತನೆ ಹಾಡುಗಳಿಂದಾಗಲೀ, ಭಕ್ತನ ಅಂತರಂಗದ ಗುಣ-ಸ್ವಭಾವಗಳನ್ನು ಪ್ರತಿಬಿಂಬಿಸುವಂತಹ ಸ್ತೋತ್ರಗಳಿಂದಾಗಲೀ ಅರಿತೆವೆಂಬುದು ಅಸಾಧ್ಯವಾದ ಮಾತಾದೀತು. ಆತನ ವಿವಿಧ ರೂಪಗಳನ್ನು, ಆರಾಧಿಸುತ್ತಿರುವ ನೆಲೆಗಳನ್ನು, ಅಲ್ಲಿನ ಆಚಾರ ವಿಚಾರಗಳನ್ನು ಆ ಸಾಮಾಜಿಕರ ಧಾರ್ಮಿಕ ಶ್ರದ್ದೆ ಉತ್ಸಾಹಗಳನ್ನು ಅರಿಯಬೇಕಾದರೆ ಆಯಾ ಸ್ಥಳಗಳಿಗೆ ಹೋಗಬೇಕು. ಈ ಪುಸ್ತಕದಲ್ಲಿ ಇವೆಲ್ಲದರ ವಿವರಗಳನ್ನು ಕಾಣಬಹುದು. ಎರಡೂ ಕೃತಿಗಳನ್ನೂ ಒಂದಕ್ಕೊಂದು ಪೂರಕವಾಗಿ ಅಭ್ಯಾಸ ಮಾಡುವುದು ಸೂಕ್ತ.

ನರಸಿಂಹ ವಿರಾಡ್ರೂಪಿ. ಆತನ ತ್ರಿವಿಕ್ರಮತೆಯನ್ನು ಕಂಡ ಆಚಾರ್ಯ ಮಧ್ವರು ನಖ ಮಾತ್ರ ಸ್ತುತಿ ಮಾಡಿದರು. ಅಂತಹ ಪದಾರ್ಥವನ್ನು ಎರಡು ಪುಸ್ತಕಪಾತ್ರೆಗಳಲ್ಲಿ ಹಿಡಿದು ಇಡುವುದು ಅಸಾಧ್ಯದ ಕೆಲಸ. ಸೌಟು ಹಿಡಿದು ಸಮುದ್ರಕ್ಕೆ ಹೊರಟವನು ಎಷ್ಟು ನೀರನ್ನು ತಾನೆ ಎತ್ತಿಯಾನು.

ಸಂಸ್ಕೃತದ ಮೇರುಕವಿಯಾದ ಕಾಳಿದಾಸನು ರಘುವಂಶದವರ ಕಥೆಯನ್ನು ನಿರೂಪಿಸುವ ತನ್ನ ಕಾವ್ಯವಾದ ರಘುವಂಶದಲ್ಲಿ "ತಿತೀರ್ಷುರ್ ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಂ" - ಎಂದಿದ್ದಾನೆ. ಸಾಗರವನ್ನು ದಾಟುವವನಿಗೆ ತೆಪ್ಪ ವರವಾಗಬಲ್ಲದೆ?

ಇಲ್ಲಿ ಬಿಟ್ಟಿರುವುದು ಬೆಟ್ಟದಷ್ಟು. ಶಿಲ್ಪಶಾಸ್ತ್ರ, ಆಧುನಿಕ ಸಾಹಿತ್ಯ, ಶತಕ ಸಾಹಿತ್ಯ ನರಸಿಂಹ ಪೂಜಾವಿಧಾನ, ಯಂತ್ರವಿವರ, ಶಾಸನಗಳಲ್ಲಿ ಕಂಡುಬರುವ ನರಸಿಂಹ, ಜಾನಪದ ಹಿನ್ನೆಲೆಯಲ್ಲಿ ನರಸಿಂಹ ಮೊದಲಾದ ವಿವಿಧ ರಂಗಗಳಲ್ಲಿ ಕೃಷಿನಡೆದು ಪುಸ್ತಕರೂಪದಲ್ಲಿ ಬರಬೇಕಾಗಿದೆ. ಈ ಎರಡು ಪುಸ್ತಕಗಳ ಆಧಾರದಲ್ಲಿ -ಅಧ್ಯಯನ ಆಧಾರದಲ್ಲಿ- ಮುಂದೆ ಮತ್ತಷ್ಟು ಬರೆಯಲು ಪ್ರಯತ್ನಿಸಲಾಗುತ್ತದೆ.

ಪದಾರ್ಥ, ಪಾತ್ರೆ, ಸಟ್ಟುಗ ಎಲ್ಲ ಪದಗಳು ಎಷ್ಟು ಪಕ್ವವಾಗಿವೆ ಎಂಬುದನ್ನು ಓದುಗ ಊಟಗಾರರು ಹೇಳಬೇಕಷ್ಟೆ. ಲೇಖಕನ ಪ್ರಾರ್ಥನೆಗೆ ಉತ್ಸಾಹಿ ಯಾತ್ರಾರ್ಥಿಗಳು, ಅಧ್ಯಾತ್ಮ ಬಂಧುಗಳು ಪ್ರೋತ್ಸಾಹಕರವಾದ ಪ್ರತಿಕ್ರಿಯೆಯನ್ನು ತೋರಬಹುದೆಂಬ ನಂಬಿಕೆ ಹೊಂದಿದ್ದೇನೆ. ಓದುಗರ ಅಭಿಪ್ರಾಯ ಸಲಹೆ ಸೂಚನೆಗಳನ್ನು ಸದಾ ಸ್ವಾಗತಿಸುತ್ತ ವಿರಮಿಸುತ್ತೇನೆ.

ವೃಷ ನಾಮ ಸಂವತ್ಸರ
ಯುಗಾದಿ

**ಕೆ.ಆರ್. ನರಸಿಂಹನ್**
ಗ್ರಂಥಕರ್ತ



# ಕೃತಜ್ಞತೆಗಳು

ಸದಾ ನನ್ನ ಅಭ್ಯುದಯವನ್ನು ಹಾರೈಸುವ ತಂದೆ-ತಾಯಿಗಳಿಗೆ.

ಆಯಾ ಸ್ಥಳಗಳ ಸಂದರ್ಶನದ ಸಮಯದಲ್ಲಿ ಸಹಕರಿಸಿದ

ದೇವಾಲಯಗಳ ಸಮಿತಿ, ಅರ್ಚಕರು, ಸ್ಥಳೀಯ ವ್ಯಕ್ತಿಗಳಿಗೆ.

ವರ್ಣ ಚಿತ್ರಗಳನ್ನು ನೀಡಿದ ಕೆ.ಎಸ್. ನಾಗರಾಜ್ ಅವರಿಗೆ.

ಇನ್ನೂ ಕೆಲವು ಛಾಯಾಚಿತ್ರಗಳನ್ನು ನೀಡಿದ ಕೆ.ಆರ್. ಶಂಕರ್ ಅವರಿಗೆ

ಪ್ರವಾಸದ ಗೀಳನ್ನು ಅಧಿಕಗೊಳಿಸಿದ ದಿವಂಗತ ಜಿ. ಸೋಮಶೇಖರ್ ಅವರಿಗೆ

ಈ ಎರಡು ಕೃತಿಗಳ ರಕ್ಷಾಪುಟದ ರೂಪುರೇಷೆಗಳನ್ನು ಕ್ರಮಬದ್ಧಗೊಳಿಸಿದ

ವರ್ಣ ಕಮ್ಯುನಿಕೇಷನ್ ಚಂದ್ರಶೇಖರ್ ಗುಬ್ಬಿ ಅವರಿಗೆ

ಗೆಜೆಟಿಯರ್ ಸಂಪಾದಕ ಜಗನ್ನಾಥ್ ಅವರಿಗೆ,

ಮಾರ್ಗದರ್ಶಕರಾದ ಡಾ. ಕೆ.ಆರ್. ಗಣೇಶ್ ಅವರಿಗೆ

ನನ್ನ ಸಹಧರ್ಮಿಣಿ ನಾಗರತ್ನಳಿಗೆ,

ನನ್ನ ಅತ್ತೆ, ಮತ್ತು, ಅವರ ಕುಟುಂಬದವರಿಗೆ

ಈ ಗ್ರಂಥ ಹೊರಬರಲು ಕಾರಣರಾದ ಸಕಲರಿಗೆ.


ಪರಿವಿಡಿ



ಅಹೋಬಿಲ ಉತ್ಸವ ಮೂರ್ತಿ



ದಾರು ನರಸಿಂಹ, ತಿರುಮಲೆ ಮೆಟ್ಟಿಲು ದಾರಿ



ದಾರು ನರಸಿಂಹ, ಮಧುರೈ ಸಂಗ್ರಹಾಲಯ



ನಾಮಕ್ಕಲ್ ನರಸಿಂಹ



ಪಟ್ಟಿಕೆಯಲ್ಲಿನ ನರಸಿಂಹ ಸ್ವಾಮಿ, ನುಗ್ಗೇಹಳ್ಳಿ.

# ನರಸಿಂಹ ಪದಾರ್ಥ-2

## (ನೂರೆಂಟು ನರಸಿಂಹ ನೆಲೆಗಳು)

## ಉಪಕ್ರಮಣಿಕೆ

### ಆಲಯಗಳ ಅಗತ್ಯ

ದೇವರಿಲ್ಲದ ಸಂಸ್ಕೃತಿಯಾಗಲೀ, ಜನಾಂಗವಾಗಲೀ ಕಂಡುಬರದು ಎಂದು ಗಂಟಾಘೋಷವಾಗಿ ಹೇಳಬಲ್ಲಷ್ಟು ಅಲ್ಲದಿದ್ದರೂ ಸಾಮಾನ್ಯತಃ ಈ ಮಾತು ನಿಜ. (ವಿನಾಯಿತಿ ಇಲ್ಲದಿಲ್ಲ) ಮನುಷ್ಯನು ಸುಖದ ಅನ್ವೇಷಣೆಯಲ್ಲಿ, ತನ್ನ ಕಷ್ಟಗಳನ್ನು ಪರಿಹಾರ ಮಾಡಿಕೊಂಡು ತನ್ನ ನೆಮ್ಮದಿಗೆ ಸಾಧನವಾಗುವ ಮಾರ್ಗವನ್ನು ಹುಡುಕುವಾಗ, ಸುತ್ತಲ ಪ್ರಕೃತಿಯ ಶಕ್ತಿಗಳು ತನ್ನ ಸಹಾಯಕ್ಕೆ ಬರಬಲ್ಲವು ಎಂಬುದನ್ನು ತಿಳಿದುಕೊಂಡು, ಪ್ರಕೃತಿಗೇ ಮೊದಲು ಪರಮಾತ್ಮಪಟ್ಟವನ್ನು ಕಟ್ಟಿದರೂ, ಬುದ್ಧಿ ಬೆಳೆದಂತೆಲ್ಲ, ಅಂತರ್ಮಥನ ಹೆಚ್ಚಾಗಿ ಹೊರಗೆ ಕಾಣುವ ಜಗತ್ತಿನ ಶಕ್ತಿಗಳ ಒಳ ಮರ್ಮವನ್ನು ಕುರಿತು ಯೋಚಿಸುತ್ತ ತನ್ನ ಒಳಗೂ, ಜಗತ್ತಿನ ಒಳಗೂ ಇದ್ದುಕೊಂಡೇ, ತನ್ನನ್ನೂ ಜಗತ್ತನ್ನೂ ಆವರಿಸಿ ಬೆಳೆದ ಶಕ್ತಿಗಳನ್ನು ಸೂತ್ರೀಕರಿಸುತ್ತ ವ್ಯಷ್ಟಿಯ ಹಂತದಲ್ಲಿ ಮೇಲೇರುತ್ತ ನಡೆದು, ತಾನು ಕಂಡುಕೊಂಡ ಸತ್ಯವನ್ನು, ಸೌಖ್ಯವನ್ನು, ಸಂಕಟವನ್ನು ತನ್ನ ಸುತ್ತಲಿನವರಿಗೂ ತಿಳಿಸಿ ಹಂಚಿಕೊಂಡು ನಡೆಯಲು ಬಯಸಿದಾಗ ಧರ್ಮದ ಉಗಮವಾಯಿತು. ಪಂಥಗಳು ಪ್ರಾರಂಭವಾದವು. ಅದಕ್ಕೆ ಅನುಗುಣವಾಗಿ ವ್ಯಕ್ತಿಯ ಭಕ್ತಿಯ ಅಭಿವ್ಯಕ್ತಿ ಸಮಾಜದ ಭಕ್ತಿಯಾದಾಗ ಸಾರ್ವತ್ರಿಕ ಆರಾಧನೆಯ-ಪೂಜೆಯ, ನೆಲೆಗಳುಂಟಾಗತೊಡಗಿದವು ಎಂದರೆ ಅಚ್ಚರಿಯೇನಿಲ್ಲ. ತನಗೆ ತಾನು ಬಯಸಿದುದನ್ನು ನೀಡಲೂ, ಅನಿಷ್ಟವಾದುದನ್ನು ತೊಡೆಯಲೂ ಅವನು ದೇವರಲ್ಲಿ ಪ್ರಾರ್ಥಿಸುವುದು ಮೊದಲಿಗೆ ವ್ಯಕ್ತಿಗತವೇ ಆದರೂ ಕ್ರಮೇಣ ಮನೆಯೆಲ್ಲ ತುಂಬಿ, ಮಠವಾಗಿ, ಗುಡಿಯಾಗಿ, ಆಲಯ ಸಮುದಾಯವಾಗಿ, ಬೆಳೆಯಿತೆಂದರೆ ಮಾನವ ಜೀವನದ ಆರೋಹಣದ ಅರಿವಾಗಬಹುದು.

ಭಾರತದಲ್ಲಿಯಂತೂ ಧರ್ಮದ ಪರಿಕಲ್ಪನೆಯೇ ಬೇರೆಯಾಯಿತು. ಸನಾತನ ಧರ್ಮದಲ್ಲಿ ಭಗವಂತ ಭೂಮಿಗಿಳಿದು ಬಂದು ತಾನು ಸೃಷ್ಟಿಸಿದ ಸಮಾಜಗಳಲ್ಲಿ

ಂಯಿತು. ಕೋಯಿಲ್ ಎಂಬುದು ಪ್ರತ್ಯೇಕವಾಗಿ ಸ್ವಾಮಿ ಮಲಗಿರುವ ಶ್ರೀರಂಗಕ್ಕೆ ಂರ್ಯಾಯ ನಾಮವಾದರೂ ಒಡೆಯ, ದೇವರು, ರಾಜ, ಇರುವ ಎಲ್ಲ ದೇವಾಲಯಗಳೂ ೋವಿಲ್‌ಗಳೇ. ಒಟ್ಟಿನಲ್ಲಿ ದೇವಾಲಯಗಳೆಂದರೆ ಭೂಮಿಯಲ್ಲಿ ಭಗವಂತನ ನೆಲೆ ವಾಸ ಸ್ಥಳ ಎಂದು ತೀರ್ಮಾನಿಸಬಹುದು.

ಆಲಯಗಳನ್ನು ಪ್ರಾಸಾದಗಳೆಂದೂ ಕರೆಯುವುದುಂಟು. ಸಾಮಾನ್ಯವಾಗಿ ಅರಸನ ಮನೆಯನ್ನು ಈ ಹೆಸರಿನಿಂದ ಕರೆಯುವುದುಂಟು. ಅರಸನ ಮನೆ-ಅರಮನೆಯನ್ನು ಜನತೆ ಂದು ರೀತಿಯ ನಿರೀಕ್ಷೆಯಿಂದ ನೋಡುತ್ತಾರೆ. ಅಲ್ಲಿನ ಜನ-ಪ್ರಭುಗಳಾಗಿ ತಮ್ಮನ್ನು ಶ್ರಯಿಸಿದ ಸಾಮಾನ್ಯರನ್ನು ರಕ್ಷಿಸುತ್ತಾರೆ. ಜನರ ಪೊರೆಯುವ ಹೊಣೆ ಪ್ರಭುವಿಗಿರುವುದಾದರೆ ರ್ವ ಜನರನ್ನು ಪೊರೆವ ಪರಿ ಪರಮಾತ್ಮನದು. ಒಡೆಯ, ಉಡೈಯರ್, ಒಡೆಯರ್ ಂಬುವು ತಮಿಳು, ಕನ್ನಡಗಳಲ್ಲಿ ರಾಜರಿಗೆ ಅನ್ವಯವಾಗುವ ಪದಗಳು. ದೇವರಿಗೂ ಪದ ಅನ್ವಯವಾಗುತ್ತದೆ. ಭೂಮಿಯಲ್ಲಿ ಭಗವಂತನನ್ನು ರಾಜನು ಪ್ರತಿನಿಧಿಸುವನೆಂಬ ಾವನೆಯನ್ನೂ ಗಮನಿಸಬೇಕು. ಹಾಗಾಗಿ ರಾಜನಿಗೆ ಒಪ್ಪತಕ್ಕ ಎಲ್ಲಾ ಭೋಗ ವೈಭವಗಳನ್ನು ೇವರಿಗೆ ಅರ್ಪಿಸಿ ಆನಂದಿಸುವುದೇ ಸಾಮಾನ್ಯರ ಭಕ್ತಿಯ ಅಭಿವ್ಯಕ್ತಿಯ ಮಾರ್ಗ ನ್ನಬಹುದು.

ದೇವಾಲಯಗಳು ಪರಮಾತ್ಮ ಹಾಗೂ ಮಾನವನ ನಡುವಣ ದೂರವನ್ನು ಕಮೆ ಮಾಡಲೆಂದು ನಿರ್ಮಾಣವಾಗುತ್ತವೆ ಎಂದು ಹೇಳಬಹುದು. ತನಗೆ ಸುಖ ಂತೋಷಗಳನ್ನು ಕರುಣಿಸುವ ತನ್ನ ಉದ್ಧಾರಕ್ಕೆ ಕಾರಣವಾದವನಿಗೆ ಆತನ ವೈಭವವನ್ನೂ ್ರತಿನಿಧಿಸುವಂತಿರುವ ಸುಂದರವಾದ ಪ್ರಾಸಾದವನ್ನು ಅರ್ಥಾತ್ ದೇವಾಲಯವನ್ನು ರ್ಮಿಸುವುದು ಮನುಷ್ಯನ ಪರಮ ಕರ್ತವ್ಯ.

## ಆಲಯ ನಿರ್ಮಾಣ

ಆಲಯ ನಿರ್ಮಾಣವನ್ನು ತಮ್ಮ ಸೇವಾಕಾರ್ಯವೆಂದು ರಾಜ-ರಾಣಿ, ಮಂತ್ರಿ-ಂಡನಾಯಕ, ಮಾಂಡಲಿಕ-ಮನ್ನೆಯ, ಸಾಮಂತ-ಶ್ರೀಮಂತ, ವ್ಯಾಪಾರಿ-ಕೃಷಿಕ ಎಲ್ಲರೂ ಮ್ಮ ಸೀಮೆಯಲ್ಲಿ, ತಮ್ಮ ಹತೋಟಿಯ ಸ್ಥಳದಲ್ಲಿ-ಹಲವು ಬಾರಿ ಬೇರೆಯವರ ಳ್ವಿಕೆಯಿದ್ದ ಕಡೆಗಳಲ್ಲಿಯೂ ಆಲಯಗಳ ನಿರ್ಮಾಣ ಮಾಡಿದ ಉದಾಹರಣೆಗಳಿವೆ. ಿವರನ್ನು ಭಕ್ತಿಯಿಂದ ಬಗೆಯಲು ಆರಾಧಿಸಲು ಅನುಕೂಲವಾಗುವ ಸಾಧನ ಸಂಪತ್ತಿಯನ್ನು ದಗಿಸಿದ್ದಾರೆ. ವೈಕುಂಠ ಕೈಲಾಸಗಳ ಪ್ರತೀಕಗಳನ್ನು ಭೂಮಿಯ ಮೇಲೆ ಅರಳಿಸಿದ್ದಾರೆ. ದರಿಂದಾಗಿ ಕ್ಷೇತ್ರ ಸಂಪತ್ತು ವೃದ್ಧಿಯಾಗಿದೆ. ಮಹಾತ್ಮೆ ಇಮ್ಮಡಿ ಮುಮ್ಮಡಿ ಹೆಚ್ಚಿದೆ. ದರಿಂದ ಪುರಾಣ, ಪುಣ್ಯಕಥೆಗಳಿಗೆ ಒಂದು ಸುಭದ್ರವಾದ ನೆಲೆ ದೊರೆತಿದೆ. ಈ ಲಯ ನಿರ್ಮಾಣ ಕಾರ್ಯವೇ ಹಲವಾರು ಸಾಹಿತ್ಯ ನಿರ್ಮಾಣದ ವಸ್ತುವೂ ಪ್ರೇರಣೆಯೂ ಗಿದೆ.

## ಆರಂಭಕಾಲ

ಆರಂಭಕಾಲದಲ್ಲಿ ಆಲಯಗಳನ್ನು ಮಣ್ಣು ಮರಗಳಿಂದ ನಿರ್ಮಿಸಲಾಗುತ್ತಿದ್ದಿತು. ಇಟ್ಟಿಗೆಯ ಕಟ್ಟಡಗಳು ನಂತರ ಬೆಳಕು ಕಂಡಂತಹವುಗಳು. ಎಂತಲೇ ಪ್ರಾಗೈತಿಹಾಸಿಕವಾದ ಆಲಯಗಳು ನಮ್ಮವರೆಗೆ ಬರುವಲ್ಲಿ ವಿಫಲವಾದವು-ಬರುವುದರೊಳಗೆ ಜೀರ್ಣವಾದವು. ಇಟ್ಟಿಗೆಯ ನಿರ್ಮಾಣದೊಡನೆಯೇ ಕಲ್ಲು ಕೊರೆದು ಮಾಡಲಾದ ಗುಹಾಂತರ್ದೇವಾಲಯಗಳು ಪ್ರಕಟವಾದವು. ದೇವಾಲಯದ ಸುಂದರ ನಮೂನೆಗಳು ಪಲ್ಲವ, ಚಾಲುಕ್ಯರ ಕಾಲದಲ್ಲಿ ಹೊರಬಂದವು. ಆಲಯ ನಿರ್ಮಾಣಕ್ಕೆ ಅಗಾಧವಾದ ಪ್ರೋತ್ಸಾಹ ಇವರ ಕಾಲದಲ್ಲಿ ದೊರೆಯಿತು. ಮಹೇಂದ್ರವರ್ಮನಂತಹ ಕುಶಲ ಕೆಲಸಗಾರ, ಸಾಹಿತಿಯಿಂದಾಗಿ ಕಲ್ಲುಗಳು ಆಲಯಗಳಾಗಿ ಅರಳಿದವು ಎಂದರೆ ಅತಿಶಯೋಕ್ತಿಯಲ್ಲ. ವಿಚಿತ್ರ ಚಿತ್ತನೆಂದು ಹೆಸರಾದ ಈತ 'ಮಟ್ಟವಿಲಾಸ'ವನ್ನು ಬರೆದ. ಆಲಯಗಳನ್ನು ಕಟ್ಟಿಸಿದ. ದ್ರಾವಿಡ ಶೈಲಿಯೆಂಬ ಪ್ರತ್ಯೇಕ ಶಿಲ್ಪಕಲಾ ಶೈಲಿಯೇ ಬೆಳೆದು ಬಂದಿತು.

ಇದೇ ಕಾಲದಲ್ಲಿ ಉತ್ತರಭಾರತದಲ್ಲಿ ಹೊರಗಣ ಪ್ರಭಾವದಿಂದಾಗಿ ಹೊರದರ್ಶನಕ್ಕೆ ತುಸುವೇ ಬೇರೆಯಾದಂತಹ ನಾಗರ ಶೈಲಿಯ ದೇವಾಲಯಗಳು ಪ್ರಕಟಗೊಳ್ಳತೊಡಗಿದವು. ಎರಡೂ ಅಂತರ್ಯದಲ್ಲಿ ಒಂದೇ ಆಗಿದ್ದಿತು. ಭಾರತೀಯ ಸನಾತನ ಧರ್ಮದ ಮೂರ್ತಿಮತ್ತಾದ ರೂಪವಾಗಿದ್ದಿತು ಎಂಬುದು ಎರಡರ ಸಂಯುಕ್ತವಾದ ವೇಸರ ಶೈಲಿಯ ಅಧ್ಯಯನದಿಂದ ತಿಳಿಯಬಹುದಾಗಿದೆ.

## ಕ್ರಿ.ಶ. ೫-೬ನೇ ಶತಮಾನಗಳು

ಭಾರತದಲ್ಲಿ ಕ್ರಿಸ್ತ ಶಕದ ನಾಲ್ಕು ಐದನೆಯ ಶತಮಾನಗಳಲ್ಲಿ ನಿರ್ಮಿಸಿದ ಆಲಯಗಳು ನಮ್ಮವರೆಗೆ ಬಾರದಾದವು ಎಂದು ಹೇಳಲಾಗಿದೆ. ದಕ್ಷಿಣದಲ್ಲಿ ಗುಡಿಗಳ ನಿರ್ಮಾಣದಲ್ಲಿ ಎದ್ದು ಕಾಣುವ ಸ್ಥಳವೆಂದರೆ ಮಾಮಲ್ಲಪುರವೆಂದು ಖ್ಯಾತವಾದ ಮಹಾಬಲಿಪುರ. ಪಲ್ಲವ ನರಸಿಂಹವರ್ಮನೂ ಆಲಯ ನಿರ್ಮಾಣ ಚರಿತ್ರೆಯಲ್ಲಿ ಮೊದಲಿಗೇ ಬರುವ ವ್ಯಕ್ತಿ. ಮಾಮಲ್ಲಪುರದ ವೈಶಿಷ್ಟ್ಯವೆಂದರೆ ಇಲ್ಲಿನವೆಲ್ಲ ರಥಗಳೆಂದು ಕರೆಯಲಾಗುವ ಏಕಶಿಲಾ ಶಿಲ್ಪಗಳು. ಇವನ್ನು ಪಾಂಡವ ರಥಗಳೆಂದೇ ಕರೆಯಲಾಗಿದೆ.

ಎಲ್ಲೋರದ ಕೈಲಾಸನಾಥ ದೇವಾಲಯ ಅಪೂರ್ವವಾದ ಏಕಶಿಲಾ ರಚನೆಯ ಗುಹಾಂತರ ದೇವಾಲಯ. ದೊಡ್ಡ ಕಲ್ಲಿನ ಮೊರಡಿಯನ್ನು ಕೊರೆದು ದ್ರಾವಿಡ ಶೈಲಿಯಲ್ಲಿ ನಿರ್ಮಾಣ ಮಾಡಿರುವ ಈ ಆಲಯ ನಿರ್ಮಾಣದಲ್ಲಿ ಅಪಾರವಾದ ಮಾನವ ಸಂಪನ್ಮೂಲ ಬಳಕೆಯಾಗಿದೆ. ಅತ್ಯಂತ ಪ್ರಾಚೀನವೆನ್ನಬಹುದಾದ ಈ ಆಲಯ ಒಂದು ಉತ್ತಮ ಮಾದರಿಯೂ ಆಗಿದೆ. ಕಂಚಿಯ ಕೈಲಾಸನಾಥ ವೈಕುಂಠನಾಥ ದೇವಾಲಯಗಳು ಇಟ್ಟಿಗೆಯ ರಚನೆಗಳಾಗಿ ತಮ್ಮ ವೈಶಿಷ್ಟ್ಯವನ್ನು ಪ್ರಾಚೀನತೆಯನ್ನು ಉಳಿಸಿಕೊಂಡು ಬಂದಿವೆ.

ದಕ್ಷಿಣ ಭಾರತದಲ್ಲಿ ಪ್ರಸಿದ್ಧರಾಗಿ ಪ್ರಜ್ವಲಿಸಿದ ಕದಂಬರು, ಪಲ್ಲವರು, ಚಾಲುಕ್ಯ ರಾಷ್ಟ್ರಕೂಟರು, ಗಂಗರು, ಚೋಳರು, ಹೊಯ್ಸಳ, ವಿಜಯನಗರದ ಅರಸರು, ಮೈಸೂರು ಒಡೆಯರು, ಪಾಳಯಗಾರರು-ಎಲ್ಲರೂ ಆಲಯ ರಚನೆಗಾಗಿ ಶ್ರಮಿಸಿದವರಾಗಿದ್ದಾರೆ. ತಮ್ಮ ತಮ್ಮಲ್ಲಿಯೇ ಸ್ಪರ್ಧಾತ್ಮಕವಾದ ನಿರ್ಮಾಣಗಳನ್ನು ಮಾಡಿ ಅಭೂತಪೂರ್ವವಾದ ಆಲಯಗಳನ್ನುಂಟಾಗಿಸಿ ಕಲಾಭಿಜ್ಞತೆಯನ್ನು ಮೆರೆದಿದ್ದಾರೆ. ಕರ್ನಾಟಕವಂತೂ ಹತ್ತು ಹಲವು ಪಂಥಗಳ ಸೌಹಾರ್ದ ಕ್ಷೇತ್ರ. ಇಲ್ಲಿಯವರೇ ಆದ ಗಂಗ, ಕದಂಬ, ಚಾಲುಕ್ಯ ಹೊಯ್ಸಳ, ರಾಷ್ಟ್ರಕೂಟರು ಇತರ ರಾಜ ಮನೆತನಗಳಾದ ಪಲ್ಲವ, ಚೋಳ, ಪಾಂಡ್ಯ ಚೇರರೊಡನೆ ಬೆರೆತು ಅವರ ನೆರವನ್ನೂ ಪಡೆದು ನೂರಾರು ದೇವಾಲಯಗಳನ್ನು ನಿರ್ಮಿಸಿದರು. ಕನ್ನಡದ ನೆಲದಲ್ಲಿ ತಮಿಳು-ತೆಲುಗುಗಳೂ ಬೆರೆತವು. ಸ್ವಂತ ನೆಲದ ಬೇರು-ನೀರುಗಳನ್ನು ಹೊಂದಿ ಇತರ ರಾಜವಂಶಗಳ ಸತ್ವಗುಣಗಳನ್ನು ಮೇಳೈಸಿಕೊಂಡು ಮೈದಳೆದು ನಿಂತಿರುವಂತಹ ಅನೇಕ ಸದೃಢ ಮತ್ತು ಸುಂದರ ದೇವಾಲಯಗಳನ್ನು ನಾವಿಂದು ಕಾಣಬಹುದು.

ಬನವಾಸಿಯಲ್ಲಿ ನಿರ್ಮಾಣವಾಗಿರುವ ಇಟ್ಟಿಗೆಯ ಆಲಯಗಳು ಪ್ರಾಚೀನವಾದವು. ಐಹೊಳೆ ಮತ್ತು ಬಾದಾಮಿಯ ಗುಹಾಂತರ್ದೇವಾಲಯಗಳು ಒಂದು ಚಿಕ್ಕ ಗರ್ಭಗೃಹ, ದಪ್ಪ ಕಂಬಗಳನ್ನೊಳಗೊಂಡ ಹಜಾರ, ಇತರ ಮೂರ್ತಿಶಿಲ್ಪಗಳನ್ನೊಳಗೊಂಡವುಗಳಾಗಿವೆ. ಹಲಸಿಯ ಜೈನ ಬಸದಿಯು ಈಗಿರುವ ನಿರ್ಮಾಣಗಳಲ್ಲಿಯೇ ಅತ್ಯಂತ ಪ್ರಾಚೀನವೆಂದು ಹೇಳಲಾಗಿದೆ.

## ಹೊಯ್ಸಳರ ಆಲಯ

ಆಲಯ ಶಿಲ್ಪಗಳು ಹೆಚ್ಚು ಸುಂದರವಾಗಿರುವಂತೆ, ಸಂಪದ್ಭರಿತ ಆಗಿರುವಂತೆ ನೋಡಿಕೊಂಡ ಕೀರ್ತಿಗೆ ಹೊಯ್ಸಳ ಅರಸು ಮನೆತನದವರು ಕಾರಣರು. ಇವರ ಕಾಲ ದಲ್ಲಿ ನಕ್ಷತ್ರ ವಿನ್ಯಾಸದ ತಳ ಜನಪ್ರಿಯವಾಯಿತು. ತಳ ವಿನ್ಯಾಸಕ್ಕೆ ಎತ್ತರವಾದ ಜಗಲಿ ಯನ್ನು ಇವರು ಬಳಸಿಕೊಂಡರು. ಇದರಿಂದಾಗಿ ಗರ್ಭಗುಡಿಯ ಒಳಗಿನ ಆಲಯ ಮೂರ್ತಿಯೂ ನೆಲದಿಂದ ಎತ್ತರದಲ್ಲಿರುವಂತೆ ಆಯಿತು. ನಕ್ಷತ್ರಾಕಾರದ ತಲವಿನ್ಯಾಸದಿಂದಾಗಿ ಭಿತ್ತಿಗಳ ವೈಶಾಲ್ಯ ಹೆಚ್ಚಾಗಿ ಶಿಲ್ಪಿಗಳಿಗೆ ತಮ್ಮ ಕಾರ್ಯಕೌಶಲವನ್ನು ಪ್ರಕಟಿಸಲು ಅಧಿಕ ಅವಕಾಶ ದೊರೆತಂತೆ ಆಯಿತು. ಮೃದುಲವಾದ ಬಳಪದ ಕಲ್ಲಿನ ಬಳಕೆಯ ಕಾರಣದಿಂದ ಅಡಿಯಿಂದ ಮುಡಿಯವರೆಗೆ ಸೌಂದರ್ಯ ಸುಖವಾಗಿ ಅರಳಿದಂತಾಯಿತು. ಹೊಯ್ಸಳ ದೇವಾಲಯಗಳಲ್ಲಿ ಕಂಬಗಳಿಗೆ ಒಂದು ಹೊಸ ರೂಪ ಬರುವಂತೆ ಆಯಿತು. ತಿರುಗಣೆಗಳನ್ನು ಬಳಸಿ ಇವುಗಳನ್ನು ನುಣುಪುಗೊಳಿಸಲಾಯಿತು. ಇವುಗಳ ಮುಖಗಳಲ್ಲಿ ವಿನೂತನ ಶಿಲ್ಪಗಳು ಮೂಡಿಬಂದವು. ಈ ಆಲಯ ಭಿತ್ತಿಗಳು ಆನೆ, ಕುದುರೆ ಮುಂತಾದ ಪ್ರಾಣಿ ಪಕ್ಷಿಗಳನ್ನು ಹೊಂದಿರುವುದಲ್ಲದೆ ರಾಮಾಯಣ, ಮಹಾಭಾರತ ಪ್ರಸಂಗಗಳನ್ನೂ ಹೊತ್ತು ನಿಂತಿವೆ.

ಗರ್ಭಗೃಹಗಳ ರಚನೆಯ ದೃಷ್ಟಿಯಿಂದಲೂ ಸಹ ಹೊಯ್ಸಳರ ಕಾಲದ ದೇವಾಲಯ ಗಳಿಗೆ ಮಹತ್ವ ದೊರೆತಿದೆ. ತ್ರಿಕೂಟಾಚಲಗಳನ್ನಿವರು ನಿರ್ಮಿಸಿದ್ದಾರೆ. ದೇವಾಲಯಕ್ಕೆ ಒಂದು ಗರ್ಭಗುಡಿ ಎಂಬ ತತ್ವವನ್ನು ವಿಸ್ತರಿಸಿಕೊಂಡು ಪ್ರಧಾನ ದೇವತೆಯ ಮೂರು ಪ್ರತ್ಯೇಕ ರೂಪಗಳಿಂದ ಕೂಡಿದ ಭಗವಂತನ ವಾಸಸ್ಥಳಗಳನ್ನು ಎಂದರೆ ಮೂರು ಗರ್ಭಗುಡಿಗಳನ್ನು ನಿರ್ಮಿಸಿದರು. ಇದರಿಂದಾಗಿ ಕೆಲವು ಕಡೆ ಶೈವ-ವೈಷ್ಣವ ಸಮನ್ವಯವನ್ನು ಸಾಧಿಸಿದಂತಾಯಿತು. ಸಹಿಷ್ಣು ಸಮಾಜವನ್ನು ನಿರ್ಮಿಸಲು ಈ ರೀತಿಯ ಹೊಸ ಆಲೋಚನೆಗಳು ಅಂದಿನ ರೂವಾರಿಗಳಿಗೆ ಹೊಳೆದಿರಬೇಕು.

ಹೊಯ್ಸಳರ ಕಾಲದಲ್ಲಿ ಮೂರ್ತಿಶಿಲ್ಪವು ಉನ್ನತ ಹಂತಕ್ಕೆ ತಲುಪಿತು. ಬೇಲೂರು, ಹಳೇಬೀಡು, ಸೋಮನಾಥಪುರಗಳಂತಹ ಪ್ರಸಿದ್ಧ ಸ್ಥಳಗಳಲ್ಲಿ ಮಾತ್ರವೇ ಅಲ್ಲದೆ ನುಗ್ಗೆಹಳ್ಳಿ, ಜಾವಗಲ್, ಭದ್ರಾವತಿ ಮುಂತಾದ ಸ್ಥಳಗಳಲ್ಲಿ ಇವರ ಶಿಲ್ಪ ವೈಭವದ ಜೀವಂತ ಸಾಕ್ಷಿಗಳನ್ನು ಕಾಣಬಹುದು. ಇವರ ಕಾಲದಲ್ಲಿ ಕೆತ್ತಲಾದ ಮೂರ್ತಿಗಳಲ್ಲಿ ಪ್ರಮಾಣಗಳು ಖಚಿತವಾಗಿದ್ದು, ಸೌಂದರ್ಯ ತತ್ತ್ವ ಪ್ರಕಟವಾಗಿರುತ್ತದೆ.

ಭುವನೇಶ್ವರಿಗಳ ರಚನೆ ಹೊಯ್ಸಳರ ಕಾಲದ ಮತ್ತೊಂದು ವಿಶೇಷ. ನಂದಿಯ ಭೋಗ ನಂದೀಶ್ವರ ದೇವಾಲಯ, ಸೋಮನಾಥಪುರ ಹಾಗೂ ಬೇಲೂರು ಕೇಶವಾಲಯ ಗಳಲ್ಲಿ ಭುವನೇಶ್ವರಿಗಳ ರಚನಾ ಕೌಶಲದ ಉತ್ತುಂಗತೆಯನ್ನು ಕಾಣಬಹುದು.

ಹೊಯ್ಸಳರ ಆಲಯಗಳ ಅರ್ಚಾಮೂರ್ತಿಗಳು ಸೊಗಸಿಗೆ ನಿದರ್ಶನಗಳು. ಬೇಲೂರಿನ ಚೆನ್ನಕೇಶವ, ಸೋಮನಾಥಪುರದ ಕೇಶವಗಳಲ್ಲದೆ ಇತರ ಆಲಯಗಳಲ್ಲಿನ ವಿಜಯ ನಾರಾಯಣ, ಚೆಲುವ ನಾರಾಯಣ, ಲಕ್ಷ್ಮೀನಾರಾಯಣ, ವೇಣುಗೋಪಾಲ ಮೂರ್ತಿಗಳು ನಮ್ಮ ಮುಂದಿವೆ. ಇಲ್ಲೆಲ್ಲ ಲೋಕ ಮೋಹಕ ಎಂಬ ಸಮಾಸ ಪದ ಸಾರ್ಥಕವಾಗುತ್ತದೆ.

ಹೊಯ್ಸಳರ ಕಾಲದ ನರಸಿಂಹಸ್ವಾಮಿ ದೇವಾಲಯಗಳನ್ನು ತ್ರಿಕೂಟಾಚಲಗಳಾಗಿಯೇ ಕಾಣುತ್ತೇವೆ. ಈ ಗರ್ಭಗುಡಿಗಳು ಬೇರೆಬೇರೆಯಾಗಿದ್ದರೂ ಇವೆಲ್ಲಕ್ಕೂ ಒಂದೇ ಹಜಾರ ನವರಂಗಗಳಿರುವಂತೆ ನಿರ್ಮಿಸಲಾಗಿದೆ. ಈ ರೀತಿಯಲ್ಲಿ ಒಂದು ಸಮತೋಲನವನ್ನು ಕಾಪಾಡಿಕೊಂಡು ಬರಲಾಗಿದೆ.

## ವಿಜಯನಗರ ಕಾಲ

ವಿಜಯನಗರದ ಅರಸರೂ ಸಹ ದ್ರಾವಿಡ ಶೈಲಿಯನ್ನು ಅನುಸರಿಸಿಯೇ ಆಲಯ ನಿರ್ಮಾಣ ಮಾಡಿದ್ದಾರೆ. ಇವರು ಬಳಸಿದ ಗಟ್ಟಿಕಲ್ಲಿನಿಂದಾಗಿ ಈ ಆಲಯಗಳು ಬಹುಕಾಲ ಬಾಳುವಂತಹವಾಗಿವೆ. ಆದರೆ ಈ ಆಲಯಗಳು ಚಾಲುಕ್ಯ ಹೊಯ್ಸಳ ದೇವಾಲಯಗಳ ನಯ ನಾಜೂಕು, ಕುಸುರಿಗೆಲಸವನ್ನು ಕಡಮೆಗೊಳಿಸಿಕೊಂಡು, ಚೋಳರ ದೇವಾಲಯಗಳ

ರೀತಿಯಲ್ಲಿ ಬೃಹತ್ ಆಕಾರವನ್ನು ವೈಶಾಲ್ಯವನ್ನು ಪಡೆದವುಗಳಾದವು ಎಂಬುದು ಮುಖ್ಯ ವಾಗುತ್ತದೆ. ಸಂಖ್ಯೆಯಲ್ಲಿಯೂ ವಿಜಯನಗರದ ಆಲಯಗಳು ಹೆಚ್ಚಾದವು.

## ಮಲೆನಾಡಿನ ಆಲಯಗಳು

ಮಲೆನಾಡಿನ ದೇವಾಲಯಗಳಿಗೆ ಪ್ರತ್ಯೇಕವಾದೊಂದು ಬೆಳವಣಿಗೆಯಿರುವುದನ್ನು ಹೊರನೋಟದಲ್ಲಿಯೇ ಗುರುತಿಸಬಹುದು. ಇವು ಕೇರಳದಿಂದ ಹಿಡಿದು ಕೊಂಕಣದವರೆಗೆ ಎತ್ತರವಾಗಿರುವ ಅಷ್ಟೇ ಅಲ್ಲದೆ ಇಳಿಜಾರಾಗಿರುವ ಮೇಲ್ಛಾವಣಿಗಳನ್ನು ಹೊಂದಿರುತ್ತವೆ. ಹೊರಗಡೆಯಿಂದ ನೋಡಿದರೆ ದೇವಾಲಯವೆಂಬ ಗುರುತೇ ದೊರೆಯದಂತೆ ಇರುತ್ತವೆ. ಅಧಿಕ ಮಳೆ ಸುರಿಯವ ಪ್ರದೇಶವಾದುದರಿಂದಲೂ, ಶೀಘ್ರ ಜೀರ್ಣವಾಗುವ ಮರಮಟ್ಟುಗಳ ಅಧಿಕ ಉಪಯೋಗದಿಂದಲೂ ಕೂಡಿದ ಈ ಆಲಯಗಳಲ್ಲಿನ ಭಿತ್ತಿಗಳಲ್ಲಿ ಅಲಂಕಾರದ ಶಿಲ್ಪಗಳ ಕೊರತೆ ಎದ್ದು ಕಾಣುತ್ತದೆ. ಕ್ವಚಿತ್ತಾಗಿ ಕಂಬಗಳನ್ನು ಬಳಸಿದರೂ ಅಲಂಕಾರಗಳು ಅಪರೂಪ. ಇಂತಲ್ಲಿಯೂ ಕೆಲವೆಡೆ-ಶೃಂಗೇರಿಯ ವಿದ್ಯಾಶಂಕರ ದೇವಾಲಯದಂತಹವುಗಳಲ್ಲಿ ಹೊಯ್ಸಳರ ಕಾಲದ ಕುಸುರಿಗೆಲಸವೂ, ವಿಜಯನಗರ ಕಾಲದ ವೈಶಾಲ್ಯವೂ ಕಂಡು ಬರುವುದುಂಟು.

## ಆಲಯದ ಸಾಮಾನ್ಯ ರೂಪ

ದೇವಾಲಯದ ಮುಖ್ಯಭಾಗವಾಗಿ ಗರ್ಭಗೃಹವಿರುತ್ತದೆ. ಇದು ಚತುರಸ್ರ, ಗಜಪೃಷ್ಠ, ನಕ್ಷತ್ರ ಮುಂತಾದ ಆಕಾರಗಳಿಂದ ಕೂಡಿರುತ್ತದೆ. ಮುಖದ್ವಾರದಿಂದಲೇ ಬೆಳಕು. ಅಲ್ಲಲ್ಲಿ ಗರ್ಭಗುಡಿಗೆ ಬೇರೆ ದಿಕ್ಕುಗಳಿಂದ ಬೆಳಕು ಬರುವಂತೆ ಜಾಲಂದ್ರಗಳ ಏರ್ಪಾಡು ಇರಬಹುದು.

ಗರ್ಭಗುಡಿಯ ಮಧ್ಯದಲ್ಲಿ ಪೂಜಾಮೂರ್ತಿಯಿರುತ್ತದೆ. ಇದನ್ನು ಮೂಲವಿಗ್ರಹ ಎಂದು ಕರೆಯಲಾಗಿದೆ. ಇದಕ್ಕೆ ಧ್ರುವ ಬೇರವೆಂಬ ಮತ್ತೊಂದು ಹೆಸರೂ ಉಂಟು. ಇದು ಪ್ರತಿಷ್ಠಾಪಿತವಾಗುವಂತಹ ಅಥವಾ ಸ್ವಯಂಭುವಾಗಿ ಸ್ವಯಂವ್ಯಕ್ತವಾಗಿರುವ ಅಥವಾ ಸಿದ್ಧಗೊಳಿಸಿರುವ, ಸುತ್ತ ಗೋಡೆಕಟ್ಟಿರುವ ಮೂರ್ತಿ. ಹಾಗಾಗಿ ಇದು ಅಚಲ ಮೂರ್ತಿ. ಇದರ ತದ್ರೂಪವಾಗಿ ಅಥವಾ ಇದರ ಪ್ರತಿನಿಧಿ ರೂಪಿಯಾಗಿ ಹೊರಗೆ ಮೆರವಣಿಗೆಯಲ್ಲಿ ಬರತಕ್ಕದ್ದು. ಗರ್ಭಗುಡಿಯಲ್ಲಿಯೇ ಇರುವ ಇನ್ನೊಂದು ಚರಮೂರ್ತಿ ಅಥವಾ ಚಲಮೂರ್ತಿಯನ್ನು ಉತ್ಸವ ಮೂರ್ತಿಯೆನ್ನುವರು. ಧ್ರುವ ಬೇರದ ಮೇಲಿರುವ ಕಟ್ಟಡದ ಮೇಲಿನ ಗೋಪುರಕ್ಕೆ ಆಲಯವಿಮಾನ ಎಂದು ಹೆಸರು. ಮಂಟಪದ ಮೇಲಿನ ಗೋಪುರ ಎನ್ನಬೇಕು. ದೇವರು ವೈಕುಂಠದಿಂದ ಇಳಿದು ಬಂದು ಈ ಮಂಟಪದಲ್ಲಿ-ಗರ್ಭಗುಡಿಯಲ್ಲಿ ನೆಲೆಸುವುದರಿಂದ ಇದರ ಮೇಲಿನ ಗೋಪುರ ಚಲಿಸತಕ್ಕಂತಹದ್ದಾಗಿ ವಿಮಾನ-ವ್ಯೋಮಗಾಮಿ- ಆಯಿತು. ಇದರ ಸೇವೆಯಲ್ಲಿ ಇದರ ಅಲಂಕಾರ, ಕುಸುರಿಗೆಲಸ, ಬೆಳ್ಳಿ ಬಂಗಾರದ ತಗಡು ಹೊದಿಸುವಿಕೆ, ಮುಲಾಮೀಕರಿಸುವಿಕೆ, ಎತ್ತರಿಸುವಿಕೆ, ಜೀರ್ಣೋ

ಚಂಡಿಕೇಶ್ವರ, ದಕ್ಷಿಣಾ ಮೂರ್ತಿಗಳಿಗೆ ಪ್ರಾಧಾನ್ಯ ನೀಡಲಾಗುತ್ತದೆ. ವಿಷ್ಣ್ವಾಲಯಗಳಲ್ಲಿ ಹನುಮಂತ, ಗರುಡ, ವಿಷ್ವಕ್ಸೇನ, ಲಕ್ಷ್ಮಿಯರ ಉಪಾಲಯಗಳಿರುತ್ತವೆ. ಕೆಲವೊಮ್ಮೆ ಈ ಉಪದೇವತೆಗಳು ಪ್ರಧಾನ ದೇವತೆಗಳ ಪ್ರಭಾವ ಹೊಂದಿರುವುದುಂಟು. ಶೋಲಿಂಗರ್‌ನ ಲಕ್ಷ್ಮೀನರಸಿಂಹ ಆಲಯದ ಎದುರಿನ ಚಿಕ್ಕಬೆಟ್ಟದ ಮೇಲಿರುವ ಹನುಮಂತ ಪ್ರಸಿದ್ಧವಾಗಿದ್ದಾನೆ. ಪ್ರಯೋಗ ಚಕ್ರವನ್ನು ಕೈಯಲ್ಲಿ ಹಿಡಿದಿದ್ದಾನೆ.

ಆಲಯಗಳ ಪ್ರಾಕಾರಗಳಲ್ಲಿಯೇ ಯಾಗಶಾಲೆ, ಪಾಠಶಾಲೆಗಳಿರುತ್ತವೆ. ದೇವರ ಪೂಜಾವಿಧಾನ ಇವುಗಳಿಲ್ಲದೆ ಪೂರ್ತಿಯಾಗುವುದಿಲ್ಲ. ಉಗ್ರಾಣ ಉದ್ಯಾನಗಳನ್ನೂ ಇಲ್ಲಿ ಬೆಳೆಸುವುದುಂಟು. ಪ್ರಸಿದ್ಧ ದೇವಾಲಯಗಳಲ್ಲಿ ಅಮೂಲ್ಯವಾದ ಸಂಪತ್ತು ಸಂಗ್ರಹವಾಗಿ ಶ್ರೀಭಂಡಾರಗಳಲ್ಲಿ ಸುರಕ್ಷಿತವಾಗಿರುತ್ತವೆ. ಉದ್ಯಾನ ವನಗಳು, ತುಲಸೀ ತೋಟಗಳು, ಬಿಲ್ವವನಗಳು ಸ್ವಾಮಿಯ ಅರ್ಚನೆಗೆ ಅಗತ್ಯವಾದ ಹೂ ಹಣ್ಣುಗಳನ್ನು ಎಲೆ ಬಳ್ಳಿಗಳನ್ನು ಒದಗಿಸುತ್ತವೆ. ಆಲಯರಚನೆಗೆ ಕಳಶವಿಟ್ಟಂತೆ ಆವರಣದಲ್ಲಿ ವಾಪಿ ಕೂಪಗಳು. ಹೊರಗೆ ಪುಷ್ಕರಿಣಿಯ ಏರ್ಪಾಡು. ಇಂತಹ ಸಾಮಾನ್ಯ ಲಕ್ಷಣಗಳಿಂದ ನಮ್ಮ ದೇಶದ ಆಲಯಗಳು ಪ್ರಸಿದ್ಧವಾಗಿವೆ.

## ಅರ್ಚಾ ಮೂರ್ತಿ

ಆಲಯಗಳ ಹಾಗೂ ಮೂರ್ತಿಶಿಲ್ಪಗಳ ಪ್ರಸ್ತಾಪವನ್ನು ವೇದಗಳಲ್ಲಿಯೂ ಕಾಣಬಹುದು ಎಂಬ ಅಭಿಪ್ರಾಯವಿದೆ. ಪೂಜಾರ್ಹವಾದ ವಿಗ್ರಹಗಳು ಮೂರು ರೀತಿಯವಾಗಿರುತ್ತದೆ. ಇವುಗಳನ್ನು ಶಾಕ್ತ, ಶೈವ, ವೈಷ್ಣವಗಳೆಂದು ವಿಂಗಡಿಸುತ್ತಾರೆ. ಈ ಮೂರ್ತಿಗಳನ್ನು ಗರ್ಭಗೃಹದಲ್ಲಿಟ್ಟು ಪೂಜಿಸುತ್ತಾರೆ. ಹೊರಗಿನ ಉತ್ಸವಾದಿಗಳಿಗೂ ಪ್ರತಿಮೆಗಳನ್ನು ಬಳಸಲಾಗುತ್ತದೆ. ಪಂಚ ಬೇರ ಪದ್ಧತಿಯನ್ನು ಆಲಯಗಳಲ್ಲಿ ಅಳವಡಿಸಬೇಕೆಂಬ ಸಂಪ್ರದಾಯವಿದೆ. ಗರ್ಭಗೃಹದಲ್ಲಿ ಸ್ಥಿರವಾಗಿರುವ ಮೂರ್ತಿಗೆ ಮೂಲಮೂರ್ತಿ ಎಂಬ ಹೆಸರು. ಇದೇ ಧ್ರುವ ಬೇರ. ಉಳಿದವು ಕೌತುಕ ಬೇರ, ಉತ್ಸವ ಬೇರ, ಸ್ನಪನ ಬೇರ ಹಾಗೂ ಬಲಿ ಬೇರಗಳು. ಧ್ರುವ ಬೇರವು ಮಾತ್ರ ಬಹುತೇಕ ಶಿಲಾ ನಿರ್ಮಿತವಾಗಿದ್ದು ಉಳಿದವು ಲೋಹ ಮೂರ್ತಿಗಳಾಗಬಹುದು. ನರಸಿಂಹನ ಆರಾಧನೆ ನಡೆಯುತ್ತಿದೆಯೆಂದು ಭಾವಿಸಲಾದ ಪುರಿಯ ಜಗನ್ನಾಥ ದೇವಾಲಯದ ಮೂಲಮೂರ್ತಿಗಳೂ, ಉತ್ಸವ ಮೂರ್ತಿಗಳೂ ಮರದಿಂದಲೇ ಆಗಿದೆಯೆಂಬುದು ವಿಶೇಷ ಎನ್ನಬೇಕು.

ಅರ್ಚಾಮೂರ್ತಿಗೆ ಆರು ಲಕ್ಷಣಗಳು. ಇವುಗಳೆಂದರೆ ಮುದ್ರೆ, ಆಸನ, ಚಿಹ್ನೆ ವಸನ, ಆಯುಧ ಮತ್ತು ಆಭರಣಗಳು. ಮುದ್ರೆಗಳಲ್ಲಿ ಅಭಯ ವರದ ಮುದ್ರೆಗಳಿರುವಂತೆ ಧ್ಯಾನ ಮುದ್ರೆ, ಉಪದೇಶ ಮುದ್ರೆಗಳೂ, ಇರುವುದುಂಟು. ಪದ್ಮಾಸನ, ಯೋಗಾಸನಗಳು ಸಾಮಾನ್ಯ ಲಕ್ಷಣಗಳು. ಶೈವ ವಿಗ್ರಹಗಳ ಕೈಯಲ್ಲಿ ಡಮರು, ಪಾಶ, ಶೂಲಗಳು ಕಂಗೊಳಿಸಿದರೆ ವಿಷ್ಣು ವಿಗ್ರಹಗಳಲ್ಲಿ ಶಂಖ ಚಕ್ರ ಗದಾ, ಪದ್ಮಗಳು, ಬಿಲ್ಲು ಬಾಣಗಳಿಂದ

ಕೂಡಿದಂತಿರುತ್ತವೆ. ಹರಿಯ ಮೂರ್ತಿಗಳಲ್ಲಿ ಶ್ರೀವತ್ಸ ಚಿಹ್ನೆಯೂ ಇರುತ್ತದೆ. ವಸ್ತ್ರಗಳು ಒಂದೊಂದು ರೀತಿಯ ದೇವರಿಗೆ ಒಂದೊಂದು ರೀತಿಯಲ್ಲಿರುತ್ತದೆ. ವಸ್ತ್ರವರ್ಣ ಕೆಂಪು, ಬಿಳುಪು, ಹಳದಿ ಬಣ್ಣದ್ದು, ಸಾಮಾನ್ಯ ಅಲಂಕಾರಗಳು ಆಯಾಕಾಲದ ಅಭಿರುಚಿ ಆಲೋಚನೆಗಳಿಗೆ ಸಂವಾದಿಯಾಗಿರುತ್ತದೆ. ಈ ಎಲ್ಲ ಗುಣಸಂಪನ್ನತೆಯಿಂದ ಕೂಡಿದ ಪ್ರತಿಮೆಗಳನ್ನು ಅರ್ಚಾವತಾರಿ ರೂಪಗಳೆಂದು ಆರಾಧಿಸಬೇಕೆಂದು ಸಂಪ್ರದಾಯವಿದೆ.

ಆಲಯಗಳ ಶಿಲ್ಪಗಳಲ್ಲಿ ಕಾಣುವ ವೈವಿಧ್ಯಕ್ಕೆ ಅವುಗಳನ್ನು ನಿರ್ಮಿಸಿದವರ ಭಕ್ತಿ ಗೌರವಗಳು, ಸಾಧನ ಸಾಮಗ್ರಿಗಳು, ಮನಸ್ಸಿನ ಏಕಾಗ್ರತೆಗಳು ಮುಖ್ಯಕಾರಣವಾಗುತ್ತದೆ. ಜೊತೆಗೇ ಆಲಯ ನಿರ್ಮಾಣದಲ್ಲಿ ಬಳಸುವ ಸಾಧನ ಪರಿಕರ ಸಾಹಿತ್ಯಗಳಿಗೆ ಅನುಗುಣವಾಗಿ ಅವುಗಳ ಸೌಂದರ್ಯ, ಬಾಳಿಕೆಗಳು ಹೆಚ್ಚುವಂತಿರುತ್ತವೆ. ಗುಹಾಲಯಗಳ ನಿರ್ಮಾಪಕರಲ್ಲಿ ಅಖಂಡ ಏಕದೇವತೋಪಾಸನೆಯ ಆಸಕ್ತಿಗಳು ಮನೆಮಾಡಿಕೊಂಡಿದ್ದವು. ಆಲಯದ ವಿವಿಧ ವಿಭಾಗಗಳೂ ಇಲ್ಲಿವೆಯಾಗಿ ಇವುಗಳೆಲ್ಲ ಸೇರಿದ ಏಕಶಿಲಾ ಆಲಯಗಳಾಗಿದ್ದವು.

ದೇವಾಲಯದಲ್ಲಿ ಬೇರೆ ಬೇರೆ ಭಾಗಗಳಿರಬೇಕೆಂದು ವಿಭಾಗೀಕರಣ ವಿಜ್ಞಾನ ನಂತರದ ಕಾಲದಲ್ಲಿ ಬೆಳೆದು ಬಂದದ್ದು. ಇದರ ಪರಿಣಾಮವಾಗಿ ತೆರೆದ ಮಂಟಪದಂತಿದ್ದ ಭಾಗಗಳನ್ನು ಕಲ್ಲಿನ ಇಟ್ಟಿಗೆಯ ಗೋಡೆಗಳಿಂದ ಮುಚ್ಚಲಾಯಿತು. ತಿರುಮಲೆಯ ಸ್ವಾಮಿ ಮೊದಲಿಗೆ ಬಯಲಿನಲ್ಲಿ ನಿಂತವನೆಂದೂ, ನಂತರ ಅಲ್ಲಿಯೇ ಒಂದು ಮಂಟಪವಾಗಿ, ಆಮೇಲೆ ಗರ್ಭಗುಡಿಯಾಗಿ, ನಂತರದ ಕಾಲದಲ್ಲಿ ಮೂರು ಪ್ರಾಕಾರಗಳ ವಿಶಾಲ ಆಲಯವಾಯಿತೆಂಬುದು ಸಾಹಿತ್ಯ ಶಾಸನಗಳ ವಸ್ತುವಾಗಿದೆ ಎಂಬುದನ್ನಿಲ್ಲಿ ಗಮನಿಸಬಹುದು. ಕಲ್ಲಿನ ಗೋಡೆಗಳಿಗೆ ಕಲಾತ್ಮಕ ವೈಭವವನ್ನು ತೊಡಿಸಲಾಯಿತು. ಹಲವು ಮುಖಗಳ ಕಂಬಗಳು ನಿರ್ಮಾಣಗೊಂಡವು. ಇದರಿಂದ ವಿಧ ವಿಧವಾದ ಶಿಲ್ಪಗಳನ್ನು ಕೊರೆಯಲಾಯಿತು. ರೂವಾರಿಯ ಪ್ರತಿಭಾ ವಿಶೇಷದ ಅಭಿವ್ಯಕ್ತಿಗೆ ಅನುಕೂಲವಾದ ಸಾಧನಗಳಾಗಿ ಕೆಲಸಕ್ಕೆ ಬಂದವು. ಪ್ರಸ್ತುತದಲ್ಲಿ ಕಂಬಕ್ಕೂ ನರಸಿಂಹನಿಗೂ ಇರುವ ಸಂಬಂಧವನ್ನು ನೆನೆಯಬಹುದು.

ಆಲಯದ ಆಕರ್ಷಕ ಭಾಗಗಳಾಗಿ ಮೂರ್ತಿ ಶಿಲ್ಪಗಳನ್ನು ನಾವು ಗಮನಿಸಬೇಕು. ಇವು ಆಯಾ ಧರ್ಮ, ಪಂಥಗಳಿಗೆ ಅನುಗುಣವಾಗಿವೆ. ಇದರ ಬೆಳವಣಿಗೆ ಬಾದಾಮಿ ಚಾಲುಕ್ಯರ ಕಾಲದಿಂದಲೇ ಆರಂಭವಾಯಿತೆನ್ನಬೇಕು. ಕಲ್ಲಿನಿಂದ ಕೊರೆದು ಬಿಡಿಸಿದ ಈ ಶಿಲ್ಪಗಳು ಒಂದರಿಂದ ಹಿಡಿದು ಹಲವಾರು ಅಂಗುಲಗಳವರೆಗೆ, ಹಲವು ಅಡಿಗಳವರೆಗೂ ಬೆಳೆಯುವುದುಂಟು.

ಪಟ್ಟದಕಲ್ಲಿನ ದಕ್ಷಿಣದ ಮುಖ ಮಂಟಪದಲ್ಲಿನ ಹಿರಣ್ಯ ನರಸಿಂಹ ಸಂಗ್ರಾಮವು ಸುಮಾರು ಏಳೆಂಟು ಅಡಿಗಳಷ್ಟು, ಎಲ್ಲೋರದಲ್ಲಿನ ದಶಾವತಾರ ಗುಹೆಯು ಹೊಂದಿರುವ ಶಿಲ್ಪಗಳು ಸ್ಮರಣಯೋಗ್ಯವಾಗಿವೆ. ನರಸಿಂಹ ರೂಪ ವಿಕಸನದಲ್ಲಿ ಈ ಎರಡು ಪ್ರತಿಮಾ ರೂಪಗಳಿಗೆ ವಿಶೇಷ ಮನ್ನಣೆಯಿದೆ. ಬಾದಾಮಿಯಲ್ಲಿನ ಗುಹೆಯಲ್ಲಿನ ನರಸಿಂಹನ ಭವ್ಯವಾದ ಶಿಲ್ಪವು ಇದರೊಂದಿಗೇ ಸ್ಮರಣೀಯವಾದದ್ದು.

## ಪ್ರತಿಮಾ ಸ್ಥಾನ

ಅರ್ಚಾ ಮೂರ್ತಿಗಳನ್ನು ಗರ್ಭಗುಡಿಯಲ್ಲಿಟ್ಟು, ಉಪದೇವತೆಗಳನ್ನು ಹೊ ಆವರಣದಲ್ಲಿ ಪ್ರತಿಷ್ಠೆ ಮಾಡುವ ಸಂಪ್ರದಾಯಕ್ಕೆ ವ್ಯೂಹ ಮೂರ್ತಿಗಳನ್ನು ಸ ಸೇರಿಸಬಹುದಾಗಿದೆ. ಇವುಗಳಲ್ಲಿ ಚತುರ್ವ್ಯೂಹ ಮೂರ್ತಿಗಳಿಗೆ ಪ್ರಾಧಾನ್ಯವಿರುವುದಾಗಿ ವಿಷ್ಣು ದೇವಾಲಯಗಳಲ್ಲಿ ಪೂರ್ವಕ್ಕೆ ಮನುಷ್ಯ ರೂಪವಾದ ವಾಸುದೇವನನ್ನು ಪ್ರತಿಷ ಮಾಡಿದ್ದರೆ ದಕ್ಷಿಣದಲ್ಲಿ ಸಿಂಹರೂಪಿಯಾದ ಸಂಕರ್ಷಣನಿಗೆ ಸ್ಥಾನವಿರುತ್ತದೆ. ಪಶ್ಚಿಮದಲ್ಲಿ ಕಪಿಲರೂಪನಾದ ಅನಿರುದ್ಧನನ್ನು ಮತ್ತು ಉತ್ತರದಲ್ಲಿ ವರಾಹ ರೂಪಿಯಾದ ಪ್ರದ್ಯುಮ್ನನನ ಸ್ಥಾಪನೆ ಮಾಡಿರುತ್ತಾರೆ. ಚತುರ್ವ್ಯೂಹ ಮೂರ್ತಿಗಳಲ್ಲಿ ಪೂರ್ವ ಪಶ್ಚಿಮ ರೂಪಗಳನ ಪುರುಷ ಪ್ರಕೃತಿಗಳ ಪ್ರತೀಕವೆಂದು ಹೇಳಬಹುದಾದರೆ, ಉಳಿದವೆರಡು ವರಾಹ-ನರಸಿಂಹ ಅವತಾರಗಳನ್ನು ಸೂಚಿಸುತ್ತವೆ. ವಿಷ್ಣು ಆಲಯಗಳಲ್ಲಿ ನರಸಿಂಹನನ್ನು ವ್ಯೂಹದಲ್ಲಿ ಮುಖ್ಯ ದೈವವಾಗಿ ಗುರುತಿಸಿರುವುದು ಗಮನಾರ್ಹ ಸಂಗತಿಯಾಗಿದೆ.

## ಅರ್ಚಾ ವಿಧಾನ

ದೇವಾಲಯಗಳಲ್ಲಿ ನಡೆಯುವ ಪೂಜಾದಿಗಳನ್ನು ಪರಿಶೀಲಿಸಬೇಕು. ಮೂರು ಬಗೆಯ ಪೂಜಾ ಪದ್ಧತಿಗಳನ್ನು ವೈಷ್ಣವ ಪದ್ಧತಿಯಲ್ಲಿ ವಿಶೇಷವಾಗಿ ಮಾನ್ಯ ಮಾಡಲಾಗಿದೆ. ವೈಖಾನಸ ಪಾಂಚರಾತ್ರಾಗಮಗಳು ಇದನ್ನು ಪ್ರತಿಪಾದಿಸಿವೆ. ಯಾಮುನಾಚಾರ್ಯರಿಂದಲೂ ರಾಮಾನುಜರಿಂದಲೂ ಪುರಸ್ಕೃತವಾದ ಪಾಂಚರಾತ್ರಕ್ಕೆ ಮಹತ್ವವಿರುತ್ತದೆ. ಮಾಧ್ವ ಮನೆ ಮಠ ಗುಡಿಗಳಲ್ಲಿ ತಂತ್ರಸಾರೋಕ್ತ ಪೂಜಾ ಪದ್ಧತಿಯಿದೆ.

ವಿಷ್ಣುವಿನ ವ್ಯೂಹ ಕಲ್ಪನೆ ಆಗಮಗಳಿಂದಲೇ ಆರಂಭವಾಗಿದ್ದಿರಬೇಕು. ಕೇಶವಾದಿ ಇಪ್ಪತ್ನಾಲ್ಕು ರೂಪಗಳಿಗೆ ಪ್ರಚಾರ ದೊರೆತದ್ದು ಪಾಂಚರಾತ್ರದ ಮೂಲಕವಾಗಿ ಎಂದು ಹೇಳಲು ಅಡ್ಡಿಯಿಲ್ಲ. ಮಹಾಭಾರತದ ಅನುಶಾಸನಪರ್ವದಲ್ಲಿರುವ ವಿಷ್ಣು ಸಹಸ್ರನಾಮದ ಇಪ್ಪತ್ನಾಲ್ಕು ಹೆಸರುಗಳು ಮುಂದೆ ಪ್ರಸಿದ್ಧವಾದವು. ದ್ವಿಬಾಹು ಮನುಷ್ಯಾಕಾರದ ಆರಾಧನೆಯೂ ಉಂಟಾಯಿತು. ಇದಕ್ಕೆ ಮುಂಚೆ ಟಗರು, ಎತ್ತು, ಹುಲಿ ಮೊದಲಾದ ಪ್ರಾಣಿರೂಪದ ಪರದೈವದ ಪೂಜೆ ನಡೆಯುತ್ತಿದ್ದಿತು. ಮಾನವಾಕೃತಿಯ ಚಾರಿತ್ರಿಕ ಪುರುಷರು ಆರಾಧನೆಯ ಕೇಂದ್ರವಾದರು. ಒಂದು ಸಂದರ್ಭದಲ್ಲಿ ಈ ಎರಡು ಬೆಳವಣಿಗೆಗಳ ನಡುವೆ ಮನುಷ್ಯ ಪ್ರಾಣಿಗಳ ಸಂಯುಕ್ತ ಚಿತ್ರಕ್ಕೆ ಪ್ರಾಧಾನ್ಯ ದೊರೆತಿರಬೇಕು. ಇದರ ಕಾಲಗತಿಯನ್ನು ಇಂದು ಗುರುತಿಸಲಾಗಿದೆ. ಮಾನವಶಾಸ್ತ್ರದಲ್ಲಿನ ಕಳಚಿದ ಕೊಂಡಿಯಂತಹ ಪರಿಸ್ಥಿತಿ ಇಲ್ಲಿಯೂ ಉಂಟಾಗಿರುವುದನ್ನು ಗಮನಿಸಬಹುದಾಗಿದೆ. ತಪ್ಪಿದ ಎಳೆಯನ್ನು ನರಸಿಂಹಾವತಾರದ ಸುಂದರವಾದ ಬಲೆಯಲ್ಲಿ ಗುರುತಿಸಿ ಬಣ್ಣ ಹಚ್ಚಿ ಮೇಲೆತ್ತಬೇಕಾದ ಅನ್ವೇಷಣಾಕಾರ್ಯ ಇಂದು ಪ್ರಸ್ತುತವಾಗಿದೆ. ಆರಾಧನೆಯ ಪ್ರಥಮ ಹಂತದಲ್ಲಿ ಶೋಭಿಸು ತ್ತಿರುವ ನರಸಿಂಹನ ಪೂಜಾದಿಗಳಿಗೆ ಆಲಯಗಳು ನೀಡಿದ ಮಹತ್ವವನ್ನು ಮುಂದಿನ ಪುಟಗಳಲ್ಲಿ ಕಾಣಬಹುದಾಗಿದೆ.

## ಆಲಯ ತತ್ವ

*ದೇಹೋ ದೇವಾಲಯಃ ಪ್ರೋಕ್ತಃ ಜೀವೋ ದೇವಃ ಸನಾತನಃ||*

ಮನುಷ್ಯನ ದೇಹವನ್ನೇ ದೇವಾಲಯವೆನ್ನಲಾಯಿತು. ಜೀವನೇ ಸನಾತನನಾದ ದೇವರೆಂದೂ ಜಾನಪದದಲ್ಲಿ ನಂಬಿಕೊಂಡು ಬರಲಾಗಿದೆ. ಇದರಿಂದಾಗಿ ಆಲಯವನ್ನು ದೇಹದ ಅಂಗಾಂಗಗಳಿಗೆ ಅನುಗುಣವಾಗಿ ಚಿತ್ರಿಸಲಾಯಿತು. ಹಾಗಾಗಿ ಉತ್ತಮಾಂಗವಾದ ತಲೆಯ ಭಾಗವೆಂದು ಹೇಳುವಲ್ಲಿ ಗರ್ಭಗುಡಿ ಉಂಟಾಯಿತು. ಹೃದಯದ ಸ್ಥಾನದಲ್ಲಿ ಮುಖಮಂಟಪ ಅಥವಾ ನವರಂಗವಿರುವುದು ಸಹಜವಾಯಿತು. ಪಾದಗಳ ಸ್ಥಾನದಲ್ಲಿ ಆಲಯದ ಮುಖದ್ವಾರವನ್ನು ಮಹಾದ್ವಾರ ಗೋಪುರವನ್ನು ಭಾವಿಸಲಾಯಿತು. ಸ್ವಾರಸ್ಯವೆಂದರೆ ಕಂಬವಿನ್ಯಾಸಗಳ ಭಾಗಗಳಿಗೆ ದೇಹದ ಅಂಗಾಂಗಗಳ ಹೆಸರುಗಳನ್ನೇ ನೀಡಿದರು- ಗ್ರೀವ, ಕಂಧರ, ಕುಕ್ಷಿ ಮೊದಲಾಗಿ. ಸುಖನಾಸಿ, ಗರ್ಭಗೃಹ ಮೊದಲಾದ ಭಾಗಗಳ ಹೆಸರುಗಳು ಮನುಷ್ಯ ದೇಹದ ಅಂಗಾಂಗಗಳ ಹೆಸರುಗಳ ಆಧಾರದಲ್ಲಿಯೇ ನಿರ್ಮಿತವಾದವು.

ಬಸವಣ್ಣನವರು 'ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡಲಿ' ಎಂದು ಕೇಳುತ್ತ ಎನ್ನ ಕಾಲೇ ಕಂಭ ಎಂದು ದೇಹ ದೇವಾಲಯವನ್ನು ವಿವರಿಸಿದ್ದಾರೆ. ಅವರ ಪ್ರಕಾರ ಶಿರವೇ ಹೊನ್ನ ಕಳಸವಯ್ಯ. ಈ ದೇವಾಲಯದಲ್ಲಿ ಭಗವಂತ ಬಂದು ವಾಸ ಮಾಡಬೇಕೆಂದು ಅವರ ಅಪೇಕ್ಷೆ. ಅದೇ ಭಕ್ತನ ಅಪೇಕ್ಷೆಯೂ ಆದೀತು.

ದೇವಾಲಯಗಳು ವಿಶ್ವದ ಪ್ರತಿಮಾ ರೂಪಗಳು ಎಂದೂ ಹೇಳುವುದುಂಟು. ಭಗವಂತನ ಸೃಷ್ಟಿಯಲ್ಲಿರುವ ಎಲ್ಲವನ್ನು ಮಾನವನ ಸೃಷ್ಟಿಯ ಆಲಯದಲ್ಲಿ ಕಾಣಬಹುದೆಂಬ ಒಂದು ತತ್ವವೂ ಆಲಯ ನಿರ್ಮಾಣದಲ್ಲಿ ಅವಧಾರಿತವಾಗುತ್ತದೆ. ಎಂತಲೇ ಇಲ್ಲಿ ಎಲ್ಲ ರೀತಿಯ ಪ್ರಾಣಿ,ಪಶು,ಪಕ್ಷಿ, ತರು, ಲತೆಗಳು ಚಿತ್ರಗಳು ಯಕ್ಷ ಕಿನ್ನರರ ಪ್ರತಿಮೆಗಳು, ಸಂಗೀತ ನೃತ್ಯಗಳ ಗುರುತುಗಳು ಪರಿವಾರ ದೇವತೆಗಳ ಒಟ್ಟು ಸಂಸಾರ. ಸೃಷ್ಟಿಯನ್ನು ಆದಿಶೇಷ ಹೊತ್ತಂತೆಯೇ ಆಲಯ ಶಿಲ್ಪವನ್ನು ಶೇಷ, ಕೂರ್ಮರು ಹೊತ್ತಿರುತ್ತಾರೆ.

ಆಲಯಶಿಲ್ಪಗಳಲ್ಲಿ ಮೊದಲಿಗೆ ನಿರ್ಮಾಣವಾಗಿ ಇಂದಿಗೂ ಉಳಿದು ಬಂದಿರುವುದು ಮಹಾಬಲಿಪುರದ ಏಕಶಿಲಾ ರಥಗಳು ಎಂದು ಹಿಂದೆ ಹೇಳಲಾಗಿದೆ. ಇವುಗಳು ಗುಡಿಗಳೇ ಆದರೂ ರಥಗಳೆಂದು-ಪಾಂಡವರ ರಥಗಳೆಂದು-(ಇಲ್ಲಿ ದ್ರೌಪದಿಯ ರಥವೂ ಇದೆ) ಗುರುತಿಸಲಾಗಿದೆ. ಗಹನವಾದತತ್ವವೆಂದರೆ ದೇಹವನ್ನು ರಥವೆಂದೇ ಹೇಳುವುದು. ದೇಹರಥಕ್ಕೆ ಆತ್ಮ ರಥಿಕ. ಆಲಯವನ್ನು ನಿರ್ಮಿಸುವವ ರಥಕಾರ ಎಂದು ಕರೆಯಲ್ಪಡುತ್ತಿದ್ದನಂತೆ. ಒಟ್ಟಿನಲ್ಲಿ ದೇಹ ರಥ ಚಲಿಸುತ್ತದೆ. ದೇವಾಲಯ ಚಲನೆಯಿಲ್ಲದ್ದು ಅಚಲವಾದದ್ದು. ಹಾಗಾಗಿಯೇ ಚರಮೂರ್ತಿ ಸ್ಥಿರಮೂರ್ತಿಗಳ ಪ್ರಭೇದ ಉಂಟಾಗಿರಬೇಕು. ಜಂಗಮ ಸ್ಥಾವರಗಳ ವ್ಯತ್ಯಾಸವನ್ನು ತಿಳಿಯುವಂತೆಯೂ ಆಯಿತು. ಚರಮೂರ್ತಿ ನರಸಿಂಹನಿಗೆ ಸ್ಥಿರವಾದ ಆಲಯಗಳನ್ನು ನಿರ್ಮಿಸುವಂತೆ ಆಯಿತು.

## ಅಧ್ಯಾಯ-1

# ನರಸಿಂಹ ನೆಲೆಗಳು

ಭಾರತದಲ್ಲಿ ನರಸಿಂಹಾರಾಧನೆಯನ್ನು ಪ್ರಾಚೀನ ಕಾಲದಿಂದಲೂ ಮಾಡಿಕೊಂಡು ಬಂದಿದ್ದರೂ ಸಹ ಕಾಲದ ಉಲ್ಲೋಲ ಕಲ್ಲೋಲ ಕ್ರಿಯೆಗಳ ನಡುವೆ ಉತ್ತರ ಭಾರತದ ಹತ್ತು ಹಲವು ದೊಂಬಿ ಧಾಳಿಗಳಿಂದಾಗಿ ಪರಿವರ್ತನಾಶೀಲತೆ ಹೆಚ್ಚಾಗಿ, ಇಲ್ಲಿನ ಆಲಯಶಿಲ್ಪಗಳಲ್ಲಿ ಜೀರ್ಣ ಶೀರ್ಣವಾಗಿ ನಡುಗಾಲದಲ್ಲಿಯೇ ಕಾಲಗರ್ಭ ಸೇರಿರುವುದು ಹೆಚ್ಚಾಗಿ, ಪ್ರಾಚೀನಕಾಲದ ಆಲಯಗಳು ಉಳಿದು ಬಂದಿರುವುದು ಕಡಮೆ. ಹಿಂದೂ ಪದಪಾದಶಾಹಿಯನ್ನು ಸ್ಥಾಪಿಸಿದ ಛತ್ರಪತಿ ಶಿವಾಜಿ ಮಹಾರಾಜನ ನಂತರ ಹೆಚ್ಚು ಕಡಮೆ ಶಾಂತಿ ನೆಲೆಸಿದಂತಾಗಿ ಮರಾಠರ ಪೇಶ್ವೆಗಳು, ನಂತರದ ಕಾಲದ ಅಹಲ್ಯಾಬಾಯಿ ಹೋಳ್ಕರರಂತಹ ಹಿರಿಯ ಧರ್ಮಾಭಿಮಾನಿಗಳ ಕಾಲದಲ್ಲಿ ಆಲಯನಿರ್ಮಾಣ, ಜೀರ್ಣೋದ್ಧಾರ ಮೊದಲಾದ ಆಲಯಕಾರ್ಯಗಳು ಹೆಚ್ಚಾದರೂ ದಕ್ಷಿಣದಲ್ಲಿ ಕಂಡುಬರುವಷ್ಟು ಆಲಯ ಸಂಖ್ಯಾಸಾಂದ್ರತೆ ಉತ್ತರ ಭಾರತದಲ್ಲಿ ಕಂಡುಬರುವುದಿಲ್ಲ. ಗುಪ್ತರ ಕಾಲದಲ್ಲಿ ಮೊದಲನೆಯ ಸ್ಥಂಭಶಾಸನ ಕಂಡುಬರುವುದಾದರೂ ಆ ಕಾಲದ ಆಲಯಗಳು ಹುಡುಕಿ ನೋಡಬೇಕಾದಷ್ಟು ಕ್ವಚಿತ್ ಪ್ರಮಾಣದಲ್ಲಿವೆ. ನಂತರದ ಹರ್ಷವರ್ಧನದ ಕಾಲದಲ್ಲಿ ಗುಡಿಗೋಪುರಗಳೆಲ್ಲೂ ಕಂಡುಬರದಾದರೂ ನಲಂದಾ ಇತ್ಯಾದಿ ವಿಶ್ವವಿದ್ಯಾನಿಲಯಗಳು ಅಲ್ಲಿನ ವಿಹಾರಗೋಷ್ಠಿಗಳ, ಸಭಾಭವನಗಳ, ಪುಸ್ತಕಭಂಡಾರಗಳ ವಿಷಯಗಳನ್ನು ಸಾಹಿತ್ಯಾಧಾರದಲ್ಲಿ ತಿಳಿಯಬಹುದು. ಪುರಾತತ್ತ್ವ ಸಂಶೋಧನೆಗಳಿಂದ ಇವೆಲ್ಲ ಕಟ್ಟಡಗಳ ಅವಶೇಷಗಳು ಸಿಕ್ಕುವಂತಿದ್ದರೂ ಆಲಯಗಳ ಅವಶೇಷ ಅಷ್ಟಾಗಿ ಕಂಡುಬರುವುದಿಲ್ಲ. ಕುಂಭಮೇಳದಂತಹ ಸಾರ್ವಜನಿಕ ಸಾಮೂಹಿಕ ಸಂಘಟನೆಯ ಯಾತ್ರೆಯ ಉಲ್ಲೇಖಗಳು ಇದ್ದರೂ ಅಲ್ಲಿ ಆಲಯ ನಿರ್ಮಾಣಕ್ಕಾಗಲೀ, ಮೂರ್ತಿಪೂಜೆಯ ಪುರಾತತ್ವ ಆಧಾರವಾಗಲೀ ಅಷ್ಟಾಗಿ ಕಂಡುಬರುವುದಿಲ್ಲ. ಮುಂದೆ ಯವನರ ದಾಳಿಗಳು ಆರಂಭವಾಗುವ ಹೊತ್ತಿಗೆ ಸಾಹಿತ್ಯಾಧಾರದಲ್ಲಿ ಗುಡಿಗೋಪುರಗಳ, ಆಲಯ, ಚೈತ್ಯಗಳ ಪ್ರಮಾಣಗಳು ಕಂಡುಬರುತ್ತವೆ. ಅವುಗಳನ್ನು ಭಂಜಿಸಿದ ನಿದರ್ಶನಗಳು ಅನೇಕ. ಈ ಒಂದು ಹಿನ್ನೆಲೆಯಲ್ಲಿ ಉತ್ತರ ಭಾರತದ ಆಲಯೇತಿಹಾಸವನ್ನು ಒಂದು ಇಕ್ಕಟ್ಟಾದ ಸಂಕಷ್ಟ ಕಾಲದಲ್ಲಿಯೇ ದರ್ಶಿಸಬೇಕಾದಂತಹ ಪರಿಸ್ಥಿತಿ ಉಂಟಾಗುತ್ತದೆ. ದೆಹಲಿಯನ್ನು ಆಳಿದ ಐದಾರು ರಾಜಮನೆತನಗಳು ಹೊರಧರ್ಮದವರೇ ಆಗಿ ಹೈಂಧವ ಶಿಲ್ಪಕಲೆಗೆ ಹೆಚ್ಚು ಪ್ರೋತ್ಸಾಹ ದೊರೆಯಲಿಲ್ಲವೆಂಬುದ

ಸ್ಪಷ್ಟವೇ ಇದೆ. ಆದಕ್ಕಾಗಿಯೂ ಶಿಲ್ಪಿಗಳು, ಆಚಾರ್ಯರು, ಆಗಮಕೋವಿದರು ದಕ್ಷಿಣ ಭಾಗದತ್ತ ಹೊರಳಬೇಕಾದ ಪರಿಸ್ಥಿತಿ ಉಂಟಾಗಿದ್ದಿತು.

ಬಿಹಾರ, ಮಹಾರಾಷ್ಟ್ರ, ಗುಜರಾತ್ ಮೊದಲಾದ ಮುಖ್ಯಮೈದಾನದಿಂದ ದೂರವಾದ ಕಡೆಗಳಲ್ಲಿ ರಾಜಮಾರ್ಗದಿಂದ ದೂರವಾದ ಸ್ಥಳಗಳಲ್ಲಿ ಹತ್ತು ಹಲವು ದೇವಾಲಯಗಳು ಕಂಡುಬರುತ್ತವೆಯಾದರೂ ಪ್ರತ್ಯೇಕ ಅಧ್ಯಾಯವೆಂದು ವಿಂಗಡಿಸಿ ಅಧ್ಯಯನ ಮಾಡುವಷ್ಟಿಲ್ಲ.

ಮಿಕ್ಕಂತೆ ದಕ್ಷಿಣ ಭಾರತದ ರಾಜ್ಯಗಳ ಗುಂಪಿನಲ್ಲಿ ಕರ್ನಾಟಕ, ಆಂಧ್ರ, ತಮಿಳು ನಾಡು, ಮಹಾರಾಷ್ಟ್ರಗಳಲ್ಲಿ ನರಸಿಂಹನ ಆರಾಧನೆ ವಿಶೇಷವಾಗಿ ನಡೆಯುತ್ತ ಬಂದಿದೆ. ಕಾಲದಿಂದಲೂ ಈ ರಾಜ್ಯಗಳು ನರಸಿಂಹ ಸಾಹಿತ್ಯಕ್ಕೆ ಮನ್ನಣೆ ಮರ್ಯಾದೆ ನೀಡಿ ದೊಡ್ಡಮಣೆಯನ್ನು ಹಾಕಿ ತಮ್ಮ ನಡುವೆ ನರಸಿಂಹಾಲಯಗಳನ್ನು ಕಟ್ಟಿಕೊಂಡು ನಮ್ಮೊಳಗಿನ ಹಿರಣ್ಯಸಮಾನ ಅಹಂಕಾರವನ್ನು ಕಳೆದುಕೊಳ್ಳಲು ಪ್ರಯತ್ನ ಪಡುತ್ತಿರುವುದು ಇತಿಹಾಸಪೂರ್ವ ಕಾಲದ ಪ್ರಸಿದ್ಧವಾದ ವಿಷಯವಾಗಿದೆ. ನರಸಿಂಹನ ರೂಪನಿಷ್ಪತ್ತಿ ಮತ್ತು ವಿವೇಚನೆಗಳಲ್ಲಿ ಈ ರಾಜ್ಯಗಳಲ್ಲಿನ ದೇವಾಲಯಗಳು ನಮಗೆ ಅಪಾರವಾದ ನೆರವು ನೀಡುತ್ತವೆ.

## ಕರ್ನಾಟಕ

ನರಸಿಂಹಾರಾಧನೆಯ ಬಗ್ಗೆ ಸ್ಪಷ್ಟಚಿತ್ರವನ್ನು ಮನದಲ್ಲಿ ಮೂಡಿಸಿಕೊಳ್ಳುವ ಹಂತದಲ್ಲಿ ಕರ್ನಾಟಕದಲ್ಲಿರುವ ಶಿಲ್ಪಗಳಿಗೆ ಸಿಂಹಪಾಲು ದೊರೆತಿದೆ. ಈ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಆಯಾ ಪ್ರದೇಶದ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ಆರ್ಥಿಕ ಸನ್ನಿವೇಶಗಳಿಗೆ ತಕ್ಕಂತೆ ಆಲಯ ನಿರ್ಮಾಣವಾಗಿದೆ. ಬೇರೆ ಬೇರೆ ರೀತಿಯ ಆಲಯಗಳ ನಿರ್ಮಾಣವಾಗಿ ಅವುಗಳಲ್ಲಿ ವಿವಿಧ ಬಗೆಯ ನರಸಿಂಹ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಇಲ್ಲಿನ ನಾರಸಿಂಹಶಿಲ್ಪಗಳಲ್ಲಿ ಯೋಗಾನರಸಿಂಹ ಹಾಗೂ ಲಕ್ಷ್ಮೀನರಸಿಂಹರದ್ದೇ ಸಿಂಹಪಾಲು ಎಂದು ಹೇಳಬೇಕು. ಆದರೂ ಉಗ್ರ, ವೀರ ನರಸಿಂಹರುಗಳಿಗೆ ಕೊರತೆ ಇಲ್ಲ.

ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ಬಾದಾಮಿ ಚಾಲುಕ್ಯರಿಗೆ ಗಮನಾರ್ಹ ವಾದ ಸ್ಥಾನ ಲಭಿಸಿರುವುದು ಅವರಲ್ಲಿನ ವಾಸ್ತುಶಿಲ್ಪ ಪ್ರಜ್ಞೆಯ ಪ್ರೌಢಿಮೆಯಿಂದಾಗಿ. ಇವರ ಕಾಲದಲ್ಲಿ ಗುಹಾಂತರ್ದೇವಾಲಯಗಳು ನಿರ್ಮಾಣವಾದವು. ಬೆಟ್ಟವನ್ನೇ ಭಗವಂತ ನೆಂದು ಭಾವಿಸಿ ಆ ಬೆಟ್ಟಗಳ ಬದಿಯ ಬೃಹದ್ ಬಂಡೆಗಳನ್ನು ಕೊರೆದು ಗುಹೆಗಳನ್ನು ನಿರ್ಮಿಸಿದ್ದೇ ಅಲ್ಲದೆ ಅವುಗಳನ್ನು ಆಲಯಗಳನ್ನಾಗಿ ಕೆತ್ತಿ ತಿದ್ದಿದರು. ಬಾದಾಮಿಯ ವಿಶ್ವ ವಿಖ್ಯಾತ ಗುಹಾಂತರ್ದೇವಾಲಯಗಳು ಇವರ ಸಾಹಸಕ್ಕೆ ದ್ಯೋತಕವಾಗಿವೆ. ಹೀಗೆ ಕೊರೆದ ಆಲಯಗಳಲ್ಲಿ ಶಿವ, ವಿಷ್ಣು ಜಿನರ ಮೂರ್ತಿಗಳನ್ನು ಸೃಷ್ಟಿಯ ಮೂಲರೂಪಕ್ಕೆ ಅನುಗುಣವಾಗಿ ಸ್ಥಾಪಿಸಿದ ಶ್ರೇಯಸ್ಸು ಬಾದಾಮಿ ಚಾಲುಕ್ಯರದ್ದಾಗಿದೆ. ಇಲ್ಲಿ ಒಂದು ಸ್ವಾರಸ್ಯದ ಮಾತೆಂದರೆ ಈ ಆಲಯದ ಮೂರ್ತಿಗಳು ಆಲಯಗಳಿಂದ ಅಭಿನ್ನವಾಗಿ

ಇವುಗಳನ್ನು ಸ್ಥಾಪಿಸುವ - ಪ್ರತಿಷ್ಠಾಪಿಸುವ ಅಗತ್ಯವೇ ಇಲ್ಲವೆಂಬುದು. ಕೈಮುಗಿದು ಪೂಜಿಸುವುದಷ್ಟೆ ಕಾಯಕ. ಇಂತಲ್ಲಿ ನರಸಿಂಹ ಮೂರ್ತಿಯ ವಿಶಿಷ್ಟ ಭಂಗಿಗಳನ್ನು ಬಾದಾಮಿ, ಪಟ್ಟದಕಲ್ಲುಗಳಲ್ಲಿ ಕಾಣಬಹುದು.

ಬಾದಾಮಿ ಚಾಲುಕ್ಯರಂತೆಯೇ ಕದಂಬರೂ ಸಹ ನರಸಿಂಹಶಿಲ್ಪಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಇವರ ಕಾಲದ ಶಿಲ್ಪಗಳು ಹಲವು ಕೌತುಕಗಳನ್ನು ಪ್ರಕಟಿಸುತ್ತವೆ. ಇವರ ಆಳ್ವಿಕೆಯ ಪ್ರದೇಶಗಳಾದ ಹಲಸಿ, ಕುಬಟೂರು, ಕೂಡಲಿ ಮುಂತಾದ ಕೆಲವೆಡೆಗಳಲ್ಲಿ ದ್ವಿಭುಜ ನರಸಿಂಹಶಿಲ್ಪಗಳಿವೆ. ನರಸಿಂಹರೂಪದ ಘನತೆಗೆ ಇವು ಸಾಕ್ಷಿಯಾಗಿವೆ. ಶಿಲ್ಪಶಾಸ್ತ್ರದ ದೃಷ್ಟಿಯಿಂದಲೂ ಇವು ಗಮನಾರ್ಹವಾಗಿದೆ.

ಕದಂಬರ ಕಾಲದ ನರಸಿಂಹಶಿಲ್ಪಗಳು ಮನುಷ್ಯರಂತೆಯೇ ಇದ್ದರೂ ತುಸು ಕುಬ್ಜರಂತೆ ಕುಳಿತ ಹಾಗಿರುತ್ತದೆ. ಈ ಬಗ್ಗೆ ಯೋಚಿಸಿದಂತೆಲ್ಲ ನಮ್ಮ ಕುತೂಹಲ ಹೆಚ್ಚುತ್ತ ಹೋಗುತ್ತದೆ. ನಮ್ಮ ನಾಡಿನ ದೇವರುಗಳಿಗಿರುವ ನಾಲ್ಕು, ಎಂಟು, ಹದಿನಾರು ಕೈಗಳ ಭುಜಗಳ ಕಲ್ಪನೆಯಾಗಲೀ ವಿವಿಧ ಆಯುಧಗಳ ಸೋಜಿಗವಾಗಲೀ ಇವರ ಕಾಲದ ಶಿಲ್ಪಗಳಲ್ಲಿ ಇಲ್ಲವೆಂಬುದು ನರಸಿಂಹ ರೂಪ-ಹಿನ್ನೆಲೆಗಳ ದೃಷ್ಟಿಯಿಂದ ಚಿಂತಿಸ ತಕ್ಕದ್ದಾಗಿದೆ.

ಕರ್ನಾಟಕವನ್ನು ಅತ್ಯಂತ ವೈಭವದಿಂದ ಆಳಿ, ಇಲ್ಲಿನ ನೆಲದಲ್ಲಿ ಉತ್ಕೃಷ್ಟವಾದ ಶಿಲ್ಪಕಲೆಯ ನೆಲೆಗಳನ್ನುಂಟು ಮಾಡಿದ ಕೀರ್ತಿ ಹೊಯ್ಸಳರಿಗೆ ಸೇರುತ್ತದೆ. ವಿಷ್ಣುವರ್ಧನನೂ, ಒಂದನೇ ನರಸಿಂಹನಿಂದ ಆರಂಭಿಸಿ ಮೂರನೆಯ ನರಸಿಂಹನವರೆಗೆ ಈ ಮನೆತನದ ರಾಜರಲ್ಲಿ ಪ್ರಸಿದ್ಧರಾಗಿರುವರು. ಇವರ ಆಡಳಿತವನ್ನು ಅವಲೋಕಿಸಿದಾಗ ಈ ರಾಜರಿಗೆ ನರಸಿಂಹನ ಬಗೆಗೆ ಇದ್ದ ಭಕ್ತಿ-ಪ್ರೀತಿಗಳು, ಆಸಕ್ತಿ-ಆರಾಧನೆಗಳು ಸ್ಪಷ್ಟಗೊಳ್ಳುತ್ತದೆ. ಇದಕ್ಕೆ ನಿದರ್ಶನ ಎಂಬಂತೆ ಇವರ ಕಾಲದ ಅನೇಕ ಗುಡಿ ಗುಂಡಾರಗಳು ಇಂದಿಗೂ ಶೋಭಿಸುತ್ತಿವೆ. ಇವರ ಕಾಲದಲ್ಲಿ ಯೋಗಾನರಸಿಂಹನಿಗೆ ಪುರಸ್ಕಾರ ನೀಡಲಾಗಿದೆ. ಲಕ್ಷ್ಮೀನರಸಿಂಹನ ಪ್ರತಿಮೆಗಳಿಗೆ ಮನ್ನಣೆ ದೊರೆತಿದೆ. ದೊಡ್ಡಗದ್ದವಳ್ಳಿ, ಜಾವಗಲ್, ಭದ್ರಾವತಿ, ನುಗ್ಗೆಹಳ್ಳಿ, ಶಾಂತಿಗ್ರಾಮ ಮೊದಲಾದ ಹಲವೆಡೆಗಳಲ್ಲಿನ ಮೂರ್ತಿ ಶಿಲ್ಪಗಳನ್ನು ಗಮನಿಸಿದವರಿಗೆ ಹೊಯ್ಸಳರ ಮನದಾಳದ ಕಲಾಭಿಮಾನಗಳು ತಿಳಿದು ಬರುತ್ತವೆ.

ಹೊಯ್ಸಳರಿಗೂ ಮುಂಚೆ ಗಂಗಮಂಡಲವನ್ನಾಕ್ರಮಿಸಿಕೊಂಡ ಚೋಳವಂಶದ ರಾಜರ ವೈಷ್ಣವಾರಾಧನೆಯ ನೆಲೆಯಾಗಿ ಮಾರೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ ಮತ್ತು ಇಲ್ಲಿಯ ಶಿಲ್ಪಗಳು ನಮ್ಮ ಮನ ಸೆಳೆಯುತ್ತವೆ. ತಮಿಳುನಾಡಿನ ದೊರೆಗಳಲ್ಲಿ ಕಂಚಿಯ ಪಲ್ಲವರೂ ನರಸಿಂಹಶಿಲ್ಪಗಳ ಬಗ್ಗೆ ಆಸಕ್ತಿ ತಳೆದವರೇ ಆಗಿದ್ದಾರೆ. ಇವರ ಕಾಲದ ಸಿಂಹಲಲಾಟವು ಅಲ್ಲಿನ ವಾಸ್ತುಶಿಲ್ಪದಲ್ಲಿ ಎದ್ದುಕಾಣುವಂತಹದ್ದು.

ವಿಜಯನಗರದ ದೊರೆಗಳು ಕರ್ನಾಟಕದ ಚರಿತ್ರೆಯಲ್ಲಿ ಕಲಶಪ್ರಾಯರಾಗಿದ್ದರೆ. ಹಂಪೆಯ ವೈಭವಕ್ಕೆ ಕಾರಣರಾದ ಈ ಅರಸುಗಳಲ್ಲಿ ಕೃಷ್ಣದೇವರಾಯನಂತೂ ವಿಜಯನಗರ

ಸಾಮ್ರಾಜ್ಯಕ್ಕೆ ತಿಲಕಪ್ರಾಯನಾದವನು. ಇಲ್ಲಿನ ಉಗ್ರನರಸಿಂಹನಂತೂ ಇಡೀ ವಿಶ್ವದ ಗಮನ ಸೆಳೆಯುವಂತಹ ಔನ್ನತ್ಯವನ್ನು, ಸೌಂದರ್ಯವನ್ನು, ದೇವಶೋಭೆಯನ್ನು ಹೊಂದಿ ಹೊಳೆಯುತ್ತಿದ್ದಾನೆ. ಕರ್ನಾಟಕವೇ ಹೆಮ್ಮೆ ಪಡುವಂತಹ ಈ ಏಕಶಿಲಾಖಂಡವು ನರಸಿಂಹ ಶಿಲ್ಪಗಳಲ್ಲಿಯೇ ಅತಿ ಎತ್ತರದ್ದು ಘನವಾದದ್ದು ಪ್ರೌಢವಾದದ್ದು ಆಗಿ ಕೀರ್ತಿವೆತ್ತಿದೆ.

ನರಸಿಂಹಾವತಾರದ ಮುಖ್ಯ ಉದ್ದೇಶ ಹಿರಣ್ಯವಧೆಯಾಗಿದೆ. ಆ ಮೂಲಕ ಅವನಿಗೆ ವೈಕುಂಠ ಪ್ರವೇಶ ಶೀಘ್ರಗೊಳಿಸುವುದಾಗಿದೆ. ಹರಿಯ ಸನ್ನಿಧಿಯಲ್ಲಿ ಅತ್ಯಂತ ಯೋಗ್ಯಸ್ಥಾನದಲ್ಲಿದ್ದು ತಮ್ಮ ತುಸುವೇ ಪ್ರಮಾದದಿಂದ ಲೋಕದ ಮತ್ತೊಂದು ನೆಲೆಯಲ್ಲಿ ದಾನವರಾಗಿ ಹರಿದ್ವೇಷಿಗಳಾಗಿ ಕಾಲ ಕಳೆಯಬೇಕಾಗಿ ಬಂದಾಗ, ಪುನರಪಿ ಹಿಂದಿನ ಉತ್ತಮ ನೆಲೆಗೇರಿಸಲು ತವಕಿಸುವುದು, ಪರಮಾತ್ಮ ದಯಾಗುಣದ ಅತ್ಯಂತ ಶ್ರೇಷ್ಠ ಉದಾಹರಣೆಯಾಗಿದೆ. ಹಿರಣ್ಯನಂತಹವನನ್ನು ಹಿಡಿದು ಒಂದು ಗತಿ ಕಾಣಿಸಿದ ಕ್ಷಣಾವತಾರಿ ನರಸಿಂಹನಲ್ಲಿ ಮಾನವ-ಪ್ರಾಣಿ ಸಂಬಂಧದ ಒಂದು ರೂಪವನ್ನು ಕಾಣುವುದು ಸಹಜವೇ ಆಗಿದೆ.

ಇಂತಹ ಉಗ್ರಾವತಾರಿಯ ನೆಲೆಗಳಾಗಿ ಕರ್ನಾಟಕದ ಮದ್ದೂರು, ರಂಗಾಪುರ, ರಾಯಭಾಗಗಳು ಪ್ರಸಿದ್ಧವಾಗಿವೆ. ಮತ್ತೊಂದು ವೈಶಿಷ್ಟ್ಯವೆಂದರೆ ಕೊಪ್ಪದ ನರಸಿಂಹನು ಸಾಲಿಗ್ರಾಮ ರೂಪಿಯಾದರೆ ಹುಬ್ಬಳ್ಳಿಯ ಮುಗುಟಖಾನದ ನರಸಿಂಹನು ವೃಕ್ಷರೂಪಿಯಾಗಿ ಕಂಡು ಬರುತ್ತಾನೆ.

## ಆಂಧ್ರಪ್ರದೇಶ

ಆಂಧ್ರಪ್ರದೇಶದ ನರಸಿಂಹ ದೇವಾಲಯಗಳು ಮತ್ತು ಶಿಲ್ಪಗಳು ಕರ್ನಾಟಕಕ್ಕೆ ಹೋಲಿಸಿದರೆ ಕಡಮೆಯೆನ್ನಬೇಕು. ಆದರೆ ಪ್ರಸಿದ್ಧಿಯಲ್ಲಿ,ಚರಿತ್ರೆಯಲ್ಲಿ, ಪುರಾಣ ವಿವರದಲ್ಲಿ-ಇಲ್ಲಿನ ಆಲಯಗಳು ಹೆಚ್ಚಿನ ಹೆಸರು ಪಡೆದಿವೆ ಎಂದು ಹೇಳಬಹುದು. ವೈವಿಧ್ಯವೂ ಇಲ್ಲಿ ಹೆಚ್ಚು. ಮಂಗಳಗಿರಿಯ ಪಾನಕ ನರಸಿಂಹನ ದರ್ಶನ ಪಡೆದವರಿಗೆ ಸಿಂಹಾಚಲದ ಚಂದನ ನರಸಿಂಹನನ್ನು- ವರಾಹ ನರಸಿಂಹನನ್ನು- ಸಂದರ್ಶಿಸಿದವರಿಗೆ, ಅಹೋಬಿಲದ ನವನಾರಸಿಂಹರ ಪ್ರಸಾದ ಪಡೆದವರಿಗೆ, ಆಂಧ್ರಪ್ರದೇಶದ ನಾರಸಿಂಹ ರೂಪದ ವೈವಿಧ್ಯ ವಿಶೇಷಗಳು ಮನದಟ್ಟಾಗುತ್ತದೆ. ಕರ್ನಾಟಕದ ಬಾದಾಮಿಯಲ್ಲಿರುವಂತೆಯೇ ಉಂಡುವಲ್ಲಿಯ ಗುಹಾಂತರ್ದೇವಾಲಯದ ನರಸಿಂಹನ ಉಬ್ಬು ಶಿಲ್ಪ ಆಕರ್ಷಕ.

ಆಂಧ್ರಪ್ರದೇಶದಲ್ಲಿ ಹರಿಯುವ ನದಿಗಳಿಂದಾಗಿ ಇಲ್ಲಿನ ಕೃಷಿಬಯಲನ್ನು ಭಾರತದ ಭತ್ತದ ಕಣಜವೆಂದು ಕರೆದಂತೆಯೇ, ಈ ನದಿಗಳ ದಡಗಳಲ್ಲಿ ಪವಿತ್ರವಾದ ಪುಣ್ಯಕ್ಷೇತ್ರಗಳು ಹರಡಿ ದೈವಿಕ ಪ್ರಭಾವಲಯವನ್ನು ಸೃಷ್ಟಿಸಿವೆ. ವಿಸ್ತಾರವಾದ ಸಮುದ್ರತೀರವನ್ನು ಹೊಂದಿ ಮೂಲಭೂತ ಪ್ರಾಕೃತಿಕ ಸೌಂದರ್ಯವನ್ನೂ ತತ್ತ್ವವನ್ನೂ ಪ್ರತಿಪಾದಿಸುವಂತಿದೆ. ಇಂತಲ್ಲಿ ಅಂತರ್ವೇದಿಯಂತಹ, ಸಿಂಹಾಚಲದಂತಹ ಕಡಲತೀರದ ನರಸಿಂಹನೆಲೆಗಳೂ, ಪ್ರಸಿದ್ಧ

ಆದದ್ದು ಸಹಜವೇ. ಹರಿಭಕ್ತ ಪ್ರಹ್ಲಾದನನ್ನು ಹಿರಣ್ಯಕನ ದಾರಿಗೆ ತರಲು ಪಾಶಗಳಿಂದ ಬಿಗಿದು ಬಿಸುಟಿದ್ದು ಸಿಂಹಾಚಲದ ಕಡಲ ತಡಿಯಲ್ಲಿಯೇ ಎಂದೂ ಹೇಳುತ್ತಾರೆ.

ಪಶ್ಚಿಮದ ವೆಂಗಿಮಂಡಲದ ಚಾಲುಕ್ಯರು, ಕಾಕತೀಯರು, ವೇಮುಲವಾಡದ ಅರಸುಗಳು, ಗಜಪತಿರಾಜರು, ವಿಜಯನಗರದ ಅರಸರು, ರೆಡ್ಡಿ ರಾಜವಂಶಗಳು ಭಕ್ತಿ ಗೌರವಗಳಿಂದ ನಡೆದುಕೊಂಡು, ಮನೆದೇವರನ್ನಾಗಿ ಮಾಡಿಕೊಂಡು, ಪೂಜೆ ಸಲ್ಲಿಸಿದ ನರಸಿಂಹನ ನೆಲೆಗಳನ್ನು ನಾವು ಇಂದು ಕಾಣಬಹುದು. ಜಾನಪದೀಯ ದೃಷ್ಟಿಕೋನ ಇತಿಹಾಸದಲ್ಲಿ ಪ್ರಭಾವ ಬೀರಿ ಇಲ್ಲಿ ವಿಶಿಷ್ಟವಾದ ತಿರುವು ನೀಡಿರುವುದನ್ನು ಕಾಣುತ್ತೇವೆ. ವಿಜಯನಗರದರಸ ಸಾಳುವ ನರಸಿಂಹ ತಿರುಮಲೆಗೆ, ಕೃಷ್ಣದೇವರಾಯ, ಅಚ್ಯುತರಾಯ, ತಿರುಮಲರಾಯರಂತೆಯೇ ಭಕ್ತಿಯಿಂದ ನಡೆದುಕೊಂಡ. ಈತ ಇಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ನಡೆಸಿದಂತೆಯೇ ಹಲವಾರು ನರಸಿಂಹ ದೇವಾಲಯಗಳ ಹಿರಿಮೆಗೂ ಕಾರಣನಾದ. ಕದಿರಿ, ಯಾದಗಿರಿ ಗುಟ್ಟ ಮೊದಲಾದ ಕಡೆಗಳ ನರಸಿಂಹ ಆಂಧ್ರದವರಿಗೇ ಅಲ್ಲದೆ ಕನ್ನಡಿಗರಿಗೂ, ತಮಿಳರಿಗೂ ಮನೆದೇವರಾಗಿರುವುದನ್ನು ಇಂದಿಗೂ ಕಾಣಬಹುದು.

ತೆಲುಗು ಸಾಹಿತ್ಯದಲ್ಲಿ ನರಸಿಂಹ ಸ್ವಾಮಿಗೆ ಅತ್ಯಂತ ಹೆಚ್ಚಿನ ಪ್ರಾಧಾನ್ಯತೆ ಕಂಡುಬರುತ್ತದೆ. ಅದರಲ್ಲಿಯೂ ಕ್ಷೇತ್ರವಾಸಿ ನರಸಿಂಹ ದೇವರುಗಳಿಗೆ ಹೆಚ್ಚು ವಿಸ್ತಾರ ವಾದ ಸಾಹಿತ್ಯಾವಕಾಶ ದೊರೆತಿದೆ. ಸಿಂಹಾಚಲದ ನರಸಿಂಹ, ಸಿಂಹಗಿರಿ ವಚನಗಳಲ್ಲಿ ಸ್ಥಾನ ಪಡೆದರೆ, ಮಂಗಳಗಿರಿಯ ಸ್ವಾಮಿ ಬ್ರಹ್ಮವೈವರ್ತ ಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಂತೆ ತೆಲುಗಿನಲ್ಲಿ ದೀರ್ಘವಾಗಿ ಪ್ರಸ್ತಾಪಿಸಲ್ಪಟ್ಟಿದ್ದಾನೆ. ಅಹೋಬಿಲ ನರಸಿಂಹನ ಕಥೆಯನ್ನೇ ಯರ್ರಪ್ರಗಢನ ತೆಲುಗು ನರಸಿಂಹ ಪುರಾಣದಲ್ಲಿ ಕಾಣಬಹುದು. ಜೊತೆಗೆ ಘಟಿಕಾಚಲ ಮಹಾತ್ಮೆಯನ್ನು ತೆನಾಲಿ ರಾಮಕೃಷ್ಣನು ತೆಲುಗಿನಲ್ಲಿ ಸೊಗಸಾಗಿ ಹೇಳಿರುವುದನ್ನು ನೋಡಬಹುದಾಗಿದೆ. ಇವುಗಳ ಜೊತೆಗೇ ತೆಲುಗು ಸಾಹಿತ್ಯದ ಹಲವು ಹನ್ನೊಂದು ಪುರಾಣಗಳಲ್ಲಿ ಕ್ಷೇತ್ರಮಹಾತ್ಮೆಗಳಾಗಿ ನರಸಿಂಹ ನೆಲೆಗಳು ಕೂಡಾ ಸ್ಥಾನವನ್ನು ಪಡೆದು ಪ್ರಖ್ಯಾತವಾಗಿವೆ.

## ತಮಿಳುನಾಡು

ತಮಿಳುನಾಡನ್ನು ದೇವಾಲಯಗಳ ನಾಡು ಎಂದು ಕರೆಯಲಾಗುತ್ತದೆ. ತಂಜಾವೂರು ಬೃಹದೀಶ್ವರ ಆಲಯದಂತೆಯೇ ಶ್ರೀರಂಗದ ರಂಗನಾಥಸ್ವಾಮಿ, ಮಧುರೆಯ ಮೀನಾಕ್ಷಿ, ತಿರುಚೆಂದೂರಿನ ಮುರುಗ, ಕುಂಭಕೋಣದ ಸಾರಂಗಪಾಣಿ ಆಲಯಗಳು ಪ್ರಸಿದ್ಧವಾದಂತೆಯೇ ಹಲವಾರು ನರಸಿಂಹ ದೇವಾಲಯಗಳಿಗೂ ನೆಲೆಯಾದ ನಾಡು ತಮಿಳುನಾಡು. ವೈಷ್ಣವ ಆಳ್ವಾರರುಗಳಿಂದ ಮಂಗಳಾಶಾಸನ ಪಡೆದ ನೂರೆಂಟು ತಿರುಪತಿಗಳಲ್ಲಿ ಬಹುತೇಕ ದಿವ್ಯಕ್ಷೇತ್ರಗಳು ತಮಿಳುನಾಡಿನಲ್ಲಿವೆ. ಅವುಗಳಲ್ಲಿ ಅಳಹಿಯ ಸಿಂಗರ್ (ನರಸಿಂಹ) ಆಲಯಗಳು ಹಲವು.

ಕ್ರಿ.ಶ. ಆರಂಭದ ಶತಮಾನಗಳಲ್ಲಿಯೇ ಈ ಆಲಯಗಳು ಪ್ರಸಿದ್ಧವಾಗಿ ಆಳ್ವಾರರನ್ನು ಆಕರ್ಷಿಸಿದ್ದವು. ಸೇಲಂ ಜಿಲ್ಲೆಯ ನಾಮಕ್ಕಲ್‌ನ ಗುಹಾನರಸಿಂಹ, ಶ್ರೀರಂಗದ ದೇವಾಲಯದ ಸುಂದರ ನರಸಿಂಹ, ಶೋಲಿಂಗರ್‌ನ ದೊಡ್ಡಬೆಟ್ಟದ ಮೇಲಿನ ಯೋಗಾನರಸಿಂಹ, ಕುಂಭಕೋಣದ ನರಸಿಂಹ, ಮಧುರೈನಲ್ಲಿರುವ ಸ್ಥಂಭನರಸಿಂಹ ಮೊದಲಾದವು ತಮಿಳುನಾಡಿನ ನರಸಿಂಹ ಶಿಲ್ಪವೈಭವವನ್ನು ಮನಗಾಣಲು ನೆರವಾಗುತ್ತದೆ. ಮಧುರೈ ಸಮೀಪದ ಅಣ್ಣಾಮಲೈ ಯಲ್ಲಿ ದೊಡ್ಡ ಬಂಡೆಯಲ್ಲಿ ಬಯಲು ನರಸಿಂಹ ಶಿಲ್ಪವಿದೆ. ಬಾದಾಮಿಯ ನರಸಿಂಹನನ್ನು ನೆನಪಿಗೆ ತರುವ ಕಳಗುಮಲೈಯ ನರಸಿಂಹ ಶಿಲ್ಪವು ವಿಶಿಷ್ಟವಾಗಿದೆ.

ಕಂಚಿಯಲ್ಲಿರುವ ವಿಶಿಷ್ಟ ಸುದರ್ಶನ ನರಸಿಂಹ ಗಮನಾರ್ಹವಾದುದು. ಇದರ ಮುಂಭಾಗದಲ್ಲಿ ನರಸಿಂಹನಿದ್ದರೆ, ಹಿಂಬದಿಯಿಂದ ಸುದರ್ಶನಚಕ್ರವಾಗಿ ಕಂಡುಬರುವ ವಿಗ್ರಹವನ್ನು ಮೂರನೇ ಆಯಾಮದೊಂದಿಗಿರುವ ಹಲವೇ ವಿಗ್ರಹಗಳಲ್ಲಿ ಒಂದೆಂದು ಪರಿಗಣಿಸಬಹುದು. ಬೇರೆಡೆಗಳಲ್ಲಿ ಕಂಭದಿಂದ ನರಸಿಂಹನಾದರೆ ಆಳ್ವಾರ್ ತಿರುನಗರಿಯಲ್ಲಿ ನರಸಿಂಹನೇ ಕಂಭವಾಗಿರುವುದು ಇಲ್ಲಿನ ಭಾರತೋಲನವನ್ನು ಕಾಪಾಡಿಕೊಂಡು ವಿಗ್ರಹ ವಿನ್ಯಾಸವನ್ನು ಶಾಸ್ತ್ರೋಕ್ತವಾಗಿರುವಂತೆ ನಿರ್ಮಿಸುವಲ್ಲಿ ಸ್ಥಪತಿಯ ಕೌಶಲವನ್ನು ಅರಿಯ ಬೇಕಾಗಿದೆ.

ಇದರೊಂದಿಗೆ ಪಾಂಡಿಚೇರಿಯ ನರಸಿಂಹಸ್ವಾಮಿಯು ಷೋಡಶಭುಜನಾಗಿ ಸರ್ವಾಯುಧ ಸಂಪನ್ನನಾಗಿ ಇದ್ದರೂ ಬರಿಗೈಯಲ್ಲಿ ಉಗುರನ್ನೇ ಆಯುಧವನ್ನಾಗಿ ಮಾಡಿಕೊಂಡು ಹಿರಣ್ಯಕಶಿಪುವನ್ನು ಸೀಳುವ ಒಂದು ದೃಶ್ಯವನ್ನು ಶಿಲ್ಪದಲ್ಲಿ ಕಂಡರಿಸಿರು ವುದು ಭವ್ಯವಾಗಿದ್ದು ನೋಡಿದಾತನ ಅಹಂಕಾರ ನಿರಸನವಾಗುವುದು ಅನುಭವವೇದ್ಯ ವಾಗುತ್ತದೆ.

ಭರತ ಖಂಡದ ಸಾಂಸ್ಕೃತಿಕ ಧಾರ್ಮಿಕ ಪರಂಪರೆಯಲ್ಲಿ ದೇವರ ಸ್ಥಾನವು ವಿಶಿಷ್ಟವಾಗಿದೆ. ಶಿವ ವಿಷ್ಣು ಶಕ್ತಿಯರ ರೂಪದಲ್ಲಿ ಭಗವಂತನ ಆರಾಧನೆ ನಡೆಯುತ್ತಿದೆ. ಆತನ ಕೃಪೆಗಾಗಿ ಹಲವು ಹನ್ನೊಂದು ರೀತಿಯಲ್ಲಿ ಪೂಜೆಯನ್ನು ಉತ್ಸವಗಳನ್ನು ನಡೆಸ ಲಾಗುತ್ತಿದೆ. ಇದಕ್ಕಾಗಿಯೇ ದೇಶದ ಉದ್ದಗಲಕ್ಕೆ ಅಸಂಖ್ಯ ದೇಗುಲಗಳು ಹರಡಿನಿಂತಿದೆ. ಈ ದಿನನಿತ್ಯ ಪೂಜಿತವಾಗುವ ದೈವಗಳ ಸಾಲಿನಲ್ಲಿ ನರಸಿಂಹನಿಗೆ ಪ್ರತ್ಯೇಕ ಸ್ಥಾನವಿದೆ. ನರಸಿಂಹ ಕ್ಷಣಕಾಲದ ಅವತಾರವೆಂದರೂ ಅದನ್ನು-ಈ ಅವತಾರವನ್ನು ಸ್ತಬ್ಧಚಿತ್ರಗೊಳಿಸಿ ಅದರ ವಿವರ ವೈವಿಧ್ಯವನ್ನರಿತು ಬದುಕು ಸುಗಮಗೊಳಿಸಿಕೊಳ್ಳುವ ಪ್ರಯತ್ನಗಳನ್ನು- ಶಿಲ್ಪಶಾಸ್ತ್ರದಲ್ಲಿ ಆಗಮ ಪದ್ಧತಿಗಳಲ್ಲಿ ಮುಖ್ಯವಾಗಿ ಜನಜೀವನದಲ್ಲಿ ಕಾಣಬಹುದು. ಈ ಪ್ರಯತ್ನಗಳ ಅಭಿವ್ಯಕ್ತ ರೂಪವೇ ನರಸಿಂಹ ಆಲಯಗಳು.

ಈ ನೆಲೆಗಳನ್ನು ಒಮ್ಮೆ ದರ್ಶಿಸುವುದರಿಂದ ಇದರ ವಿಶೇಷ, ಸಾಧಾರಣ, ವೈವಿಧ್ಯಗಳನ್ನು, ವೈರುಧ್ಯಗಳನ್ನು ತಿಳಿಯುವುದರ ಮೂಲಕ ಅರಿವಿನ ಒಂದು ಗಟ್ಟಿಯಾದ ನೆಲೆಯನ್ನು ತಲುಪಬಹುದು ಎಂದು ಭಾವಿಸಿ ಪ್ರಯತ್ನಿಸಲಾಗಿದೆ.

# ಅಧ್ಯಾಯ-2

# ಶಿಲ್ಪಶಾಸ್ತ್ರದಲ್ಲಿ ನರಸಿಂಹ

ನರಸಿಂಹನ ಮೂರ್ತಿ ಶಿಲ್ಪವು ಧಾರ್ಮಿಕ ಜಗತ್ತಿನಲ್ಲಿ ಪ್ರಚಲಿತವಾಗಿರುವ ಥೆಗಳ ಸಂಕೀರ್ಣದಂತೆ ಕಂಡುಬರುತ್ತದೆ. ಈತನ ಪ್ರತಿಮಾ ವಿವರಗಳನ್ನು ', ಪಾಂಚರಾತ್ರ ಆಗಮಗಳಲ್ಲಿ, ಭೃಗು, ಅತ್ರಿ, ಮರೀಚಿ ಮೊದಲಾದ ಸಂಹಿತೆಗಳಲ್ಲಿ ಈಶ್ವರ, ಪರಾಶರ, ಪರಮೇಶ್ವರ ಸಾತ್ವತ ಸಂಹಿತೆಗಳಲ್ಲಿ ಗಮನಿಸಬಹುದು. ರ್ಮೋತ್ತರ, ಮತ್ಸ್ಯ ಪುರಾಣಗಳಲ್ಲಿ ಸಹ ನರಸಿಂಹನ ಶಿಲ್ಪ ವಿವರಗಳಿವೆ. ಲ್ಲಿ ಪ್ರತಿಮೆಗಳ ಪ್ರಮಾಣ ವಿವರಗಳನ್ನು ತಿಳಿಸಲಾಗಿದೆ. ಇವುಗಳನ್ನು 'ಪ್ರತಿಮಾ ಶಾಸ್ತ್ರ'ಗಳೆಂದು ಕರೆಯಬಹುದಾಗಿದೆ.

ಸುದೀರ್ಘವಾದ ಪ್ರತಿಮಾ ವಿಚಾರಗಳನ್ನು ಮೇಲೆ ಕಂಡುಬರುವ ಕೃತಿಗಳಲ್ಲಿ ದಾಗಿದೆ. ಆದರೂ ಇಲ್ಲಿನ ವಿವರಗಳು ಒಂದನ್ನೊಂದು ಸೇರಿ ಅಥವಾ ಒಂದರ ದು ಮುಚ್ಚಿಕೊಂಡಿರುವುದು ಸಮಗ್ರವಾದ ಅಧ್ಯಯನದಿಂದ ಮನದಟ್ಟಾಗುವ ದೆ.

ರಸಿಂಹನ ಕಥಾನುಕ್ರಮದ ನಿರೂಪಣೆಯನ್ನು ಮಾಡುವ ಶಿಲ್ಪಗಳು ವಿರಳ ಅಥವಾ ಇಲ್ಲವೇ ಇಲ್ಲವೇನೋ ಎಂಬಂತೆ ಭಾಸವಾಗುತ್ತದೆ. ದೊಡ್ಡಬಳ್ಳಾಪುರದ ಮಣ ದೇವಾಲಯ ಮತ್ತು ಯಂಬರ ಹಳ್ಳಿಯ ಗೌತಮಗಿರಿಯ ಮೇಲಿರುವ ದೇವಾಲಯದ ಗೋಡೆಯ ಮೇಲೆ ನರಸಿಂಹಾವತಾರದ ಕಥೆಯ ಮುಖ್ಯ ಚಿತ್ರಗಳಿರುವುದನ್ನು ಪ್ರಾಚ್ಯವಸ್ತು ಇಲಾಖೆಯ ವಾರ್ಷಿಕ ವರದಿಗಳಲ್ಲಿ ಉಲ್ಲೇಖಿಸ ನರಸಿಂಹಾವತಾರದ ಕಥೆ ಯಾವಾಗಿನಿಂದ ಜನಪ್ರಿಯವಾಯಿತು ಎಂಬುದನ್ನು ಪ್ರದಂತೂ ಕಷ್ಟವೇ ಆಗಿದೆ. ಗ್ರಂಥಗಳ ಆಧಾರದ ಮೇಲೆ ನರಸಿಂಹ ಮೂರ್ತಿಗಳು ಂಡಿದ್ದು ಇತಿಹಾಸದಲ್ಲಿ ಇದರ ವಿವಿಧ ಹಂತಗಳ ಬೆಳವಣಿಗೆಯ ಆಧಾರಗಳನ್ನು ವಾಗಿದೆ. ಇದರೊಂದಿಗೆ ಆಯಾ ದೇವಾಲಯಗಳಲ್ಲಿ ಕ್ವಚಿತ್ ಆಗಿ ನರಸಿಂಹ ವಿವಿಧ ಮಜಲುಗಳನ್ನು ಗುರುತಿಸುವ ರೀತಿಯಲ್ಲಿ ಕಂಭಶಿಲ್ಪಗಳು ನಿರ್ಮಾಣ ತ್ತವೆ.

ನರಸಿಂಹನ ಮೂರ್ತಿರೂಪಗಳಲ್ಲಿ ಪ್ರಧಾನವಾಗಿ ಎರಡು ವಿಭಾಗಗಳೆಂದು ಗುರುತಿಸಲಾಗಿದೆ. ಕೇವಲ ನರಸಿಂಹ, ಸ್ಥಾಣು ನರಸಿಂಹ ಎಂಬೆರಡು ವಿಧದಲ್ಲಿ ನರಸಿಂಹನ ಪ್ರತಿಮೆಗಳನ್ನು ಶಿಲೆ, ಲೋಹಗಳಲ್ಲಿ ರೂಪಿಸಿರುವುದುಂಟು. ಇವುಗಳೊಂದಿಗೆ ಯಾನಕ ನರಸಿಂಹ ರೂಪವನ್ನು ಸೇರಿಸಿದಾಗ ಮೂರನೆಯ ಬಗೆಯ ನರಸಿಂಹರೂಪ ಸಿದ್ಧವಾಯಿತು. ಐದು ಬಗೆಯ ಮೂರ್ತಿಗಳೆಂದು ಹೇಳುವುದೂ ಉಂಟು. ಆದರೆ ಮೂರು ರೂಪಗಳಲ್ಲಿಯೇ ಮಿಕ್ಕಿದ್ದನ್ನು ಸೇರಿಸಿ ಅಧ್ಯಯನ ಮಾಡಬಹುದು.

## ಕೇವಲ ನರಸಿಂಹ

ಕೇವಲ ನರಸಿಂಹನೆಂದು ಕರೆಯುವ ರೂಪಕ್ಕೆ ಗಿರಿಜಾ ನರಸಿಂಹ ಎಂಬ ಮತ್ತೊಂದು ಹೆಸರೂ ಇದೆ. ಬೆಟ್ಟದ ಗುಹೆಯಿಂದ ಏಕಾಂಗಿಯಾಗಿ ಹೊರಬಂದ ಹಾಗಿರುವ ಈ ರೂಪದ ವಿವರವನ್ನು 'ವಿಹಗೇಂದ್ರ ಸಂಹಿತೆ'ಯಲ್ಲಿ ಕಾಣಬಹುದು. ಇದನ್ನು ಯೋಗಾನರಸಿಂಹ ಎಂದೂ ಕರೆಯಲಾಗಿದೆ. ಈ ಮೂರ್ತಿಯು ಕುಳಿತ ಭಂಗಿಯಲ್ಲಿ- ಯೋಗಭಂಗಿಯಲ್ಲಿ ಇರುವಂತೆ ಬಿಡಿಸಲಾಗಿರುತ್ತದೆ.

ಕೇವಲ ನರಸಿಂಹ ಎಂದರೆ ಒಬ್ಬನೇ ಇರುವಂತಹ ನರಸಿಂಹ ಎಂದರ್ಥವಷ್ಟೆ. ನರಸಿಂಹನೆಂದರೆ ಲಕ್ಷ್ಮಿಯ ಜೊತೆಗಿರುವುದು ಅಥವಾ ಹಿರಣ್ಯನ ವಧೆಯಲ್ಲಿ ತೊಡಗಿರುವುದು ಅಥವಾ ಪ್ರಹ್ಲಾದನಿಗೆ ಅನುಗ್ರಹ ಮಾಡುತ್ತಿರುವುದು ಆಗಿರಬೇಕು ಸಾಮಾನ್ಯವಾದ ಕಥಾ ವಿವರದ ಪ್ರಕಾರ. ಆದರೆ ಇಲ್ಲಿ ಒಬ್ಬನೇ ಯೋಗ ತತ್ಪರನಾದಂತೆ ಚಿತ್ರಿತವಾಗಿರು ವುದರಿಂದ ಇದನ್ನು ಕೇವಲ ನರಸಿಂಹನೆಂದರು. ಲಕ್ಷ್ಮಿಯು ನಿತ್ಯಾನಪಾಯಿನಿಯಾಗಿ ಭಗವಂತನ ವೃಕ್ಷಸ್ಥಲದಲ್ಲಿಯೇ ನಿತ್ಯವಾಸರಸಿಕಳಾಗಿ ಇರುತ್ತಾಳೆ ಎಂಬುದನ್ನು ಮರೆಯುವ ಹಾಗೆಯೇ ಇಲ್ಲ. ಭಗವಂತ ಎಲ್ಲಿ ಯಾವ ರೂಪದಲ್ಲಿದ್ದರೂ ಎದೆಯಲ್ಲಿ ಸದಾ ವಾಸ ಮಾಡುತ್ತಿದ್ದಾಳೆ ಎಂಬುದನ್ನು ನೆನಪಿಡಬೇಕು.

ವೈಖಾನಸಾಗಮದಲ್ಲಿ ಕೇವಲ ನರಸಿಂಹನನ್ನು ಸೌಮ್ಯಸ್ವಭಾವದವನೆಂದು ವಿವರಿಸ ಲಾಗಿದೆ. ಪದ್ಮಪೀಠದ ಮೇಲೆ ತನ್ನ ಎರಡೂ ಕಾಲುಗಳನ್ನು ಒಂದರ ಮೇಲೊಂದು ಅಡ್ಡಲಾಗಿಟ್ಟುಕೊಂಡು ಉತ್ಕುಟಿಕಾಸನದಲ್ಲಿ ಸರ್ವಾಭರಣ ಭೂಷಿತವಾಗಿ ಕುಳಿತಿರುವಂತೆ ಕಂಡುಬರುತ್ತದೆ. ಚತುರ್ಭುಜ ಮೂರ್ತಿಯಾದ ಈತನ ಮೇಲಿನ ಎರಡು ಕೈಗಳಲ್ಲಿ ಚಕ್ರ-ಶಂಖಗಳಿರುತ್ತವೆ. ಉಳಿದೆರಡು ಕೈಗಳು ಮೊಣಕಾಲಿನ ಮೇಲೆ ಹಾಯ್ದು ಕೆಳಕ್ಕೆ ಇಳಿಬಿಟ್ಟಂತೆ ಇರುತ್ತವೆ. ಕೆಲವೊಮ್ಮೆ ಈ ರೀತಿಯ ಮೂರ್ತಿಗಳು ಪೀಠದ ಮೇಲೆ ಕುಳಿತು ಎಡಗಾಲನ್ನು ಮಡಚಿ, ಬಲಗಾಲನ್ನು ಕೆಳಗೆ ಇಳಿಬಿಟ್ಟು ಕುಳಿತಿರುವ ಹಾಗಿರಬಹುದು. ಈ ಭಂಗಿಯಲ್ಲಿರುವಾಗ ಬಲಗೈ ಅಭಯ ಮುದ್ರೆ ಹೊಂದಿರುವುದು ಎಡಗೈ ಕಟ್ಯವಲಂಬಿತ ವಾಗಿ ಇಲ್ಲವೇ ತೊಡೆಯ ಮೇಲಿಟ್ಟುಕೊಂಡು ಕುಳಿತಂತೆ ಇರುವುದು ಸರ್ವೇಸಾಮಾನ್ಯ ವಾಗಿ ಕಂಡುಬರುವ ಅಂಶವಾಗಿದೆ.

ಯೋಗಾನರಸಿಂಹ ರೂಪವಂತೂ ವಿಶಿಷ್ಟವಾದದ್ದೇ ಆಗಿದೆ. ಯೋಗಾರೂಢನಾದ ಈತನ ಮೂರ್ತಿ ಲಕ್ಷಣದಲ್ಲಿ ಯೋಗ ಪಟ್ಟವಂತೂ ಇರಲೇಬೇಕು. ಎರಡುಕಾಲುಗಳನ್ನು ಕತ್ತರಿಯಂತೆ ಅಡ್ಡಲಾಗಿಟ್ಟುಕೊಂಡಾಗ ಈತನ ಪಾದಗಳು ವಿರುದ್ಧ ದಿಕ್ಕಿನಲ್ಲಿರುತ್ತವೆ. ಪಾದಗಳ ಕೆಳಗೆ ಕಮಲಾಸನವಿರುತ್ತದೆ. ಈಶ್ವರ ಸಂಹಿತೆಯಲ್ಲಿ ಈತನ ಸ್ವರೂಪವನ್ನು ಸರ್ವಜ್ಞಾನಮಯವೆಂದು ಹೇಳಲಾಗಿದೆ. ಸುದರ್ಶನ ಚಕ್ರದಲ್ಲಿ ಬಿಡಿಸಲಾಗಿರುವ ಯೋಗಾ ನರಸಿಂಹನನ್ನು 'ಸುದರ್ಶನ ನರಸಿಂಹ'ನೆಂದು ಹೇಳಲಾಗಿದೆ. ಇದರ ಹಿನ್ನೆಲೆಯಲ್ಲಿ ವಿಶ್ವರೂಪದ ಕಲ್ಪನೆ ಅಡಗಿರುವುದನ್ನು ಶೇಷಸಂಹಿತೆಯು ವಿವರಿಸುತ್ತದೆ. ಅರ್ಚಿಸುವವರ ಪಾಲಿಗೆ ಸುದರ್ಶನ ಮಂತ್ರ ಮತ್ತು ಸುದರ್ಶನಾಷ್ಟಕಗಳು ವಿಶಿಷ್ಟವಾಗಿವೆ.

ಯೋಗಾನರಸಿಂಹ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ತಿರುಮಲೆಯ ಆಲಯದಲ್ಲಿರುವ ಯೋಗಾನರಸಿಂಹನಂತೂ ತುಂಬ ಪ್ರಸಿದ್ಧನಾಗಿದ್ದಾನೆ. ಹೊಯ್ಸಳರ ಬಹುತೇಕ ಶಿಲ್ಪಗಳು ಯೋಗಾ ನರಸಿಂಹನವೇ ಆಗಿರುವುದು ಗಮನಿಸಬೇಕಾದ ಅಂಶವಾಗಿದೆ. ಕೇವಲ ಸ್ವತಂತ್ರನಾಗಿ ರುವ ಈತನ ಉದ್ದೇಶ ಮಾನವ ಕೋಟಿಗೆ ಯೋಗಸ್ವಭಾವವನ್ನು ಉಪದೇಶಿಸುವುದಾಗಿದೆ. ನರಸಿಂಹ ಮೂರ್ತಿ ಶಿಲ್ಪದಲ್ಲಿ ಈ ಪ್ರಕಾರಕ್ಕೆ ಹೆಚ್ಚಿನ ಮನ್ನಣೆ ನೀಡಲಾಗಿದೆ.

ನರಸಿಂಹ ಪ್ರತಿಮಾರೂಪದಲ್ಲಿ ದೇವೀಸಹಿತವಾಗಿರುವ ಮೂರ್ತಿಯನ್ನು ನೋಡ ಬಹುದು. ಲಕ್ಷ್ಮಿಯೊಂದಿಗೆ ಸ್ವಾಮಿಯಿರುವ ಮೂರ್ತಿಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ನೋಡಬಹುದಾಗಿದೆ. ಲಕ್ಷ್ಮಿಯು ನರಸಿಂಹನ ಎಡತೊಡೆಯನ್ನಲಂಕರಿಸಿರುತ್ತಾಳೆ. ಇದನ್ನು ಲಕ್ಷ್ಮೀ ನರಸಿಂಹ ಎಂದು ಕರೆಯುತ್ತಾರೆ. ಪರಾಶರ ಸಂಹಿತೆ ಪ್ರಕಾರ ಈ ದೇವರು ಕ್ಷೀರಾಬ್ಧಿ ಮಧ್ಯಸ್ಥಿತನಾಗಿ ಸತ್ಯ ಜ್ಞಾನ ಸುಖ ಸ್ವರೂಪಗಳಿಂದ ತುಂಬಿಕೊಂಡಿರುತ್ತಾನೆ. ಸರ್ವಾಲಂಕಾರ ಭೂಷಿತನಾಗಿ ಅತಿ ಪ್ರಸನ್ನವದನನಾಗಿರುತ್ತಾನೆ. ಶಿಲ್ಪಗಳಲ್ಲಿ ಲಕ್ಷ್ಮಿನರಸಿಂಹನಿಗೆ ವಿಶಿಷ್ಟ ಸ್ಥಾನವಿರುತ್ತದೆ. ಜಾವಗಲ್, ನುಗ್ಗೇಹಳ್ಳಿ ಮತ್ತಿತರ ಸ್ಥಳಗಳಲ್ಲಿ ಈತನ ಅಪರೂಪವಾದ ಇಂದುಧವಳದಂತೆ ಶೋಭಿಸುವ, ಸೂರ್ಯನಂತೆ ಪ್ರಜ್ವಲಿಸುವ ಸ್ವರೂಪ ಗಳನ್ನು ಕಾಣಲು ಸಾಧ್ಯವಾಗಿದೆ.

ನರಸಿಂಹನ ಜೊತೆಗೆ ಲಕ್ಷ್ಮಿಯೊಂದಿಗೆ ಭೂದೇವಿಯನ್ನೂ ಸಹ ಅಪರೂಪವಾಗಿ ಕಾಣಬಹುದು. ಈ ರೀತಿಯ ಕಂಬದ ಶಿಲ್ಪವನ್ನು ತಿರುಮಲೆಯಲ್ಲಿ ಕಾಣಬಹುದು. ಇಬ್ಬರು ದೇವಿಯರು ಸ್ವಾಮಿಯ ಪ್ರಸನ್ನ ಸೌಮ್ಯಗುಣಗಳಿಗೆ ಸಂಕೇತವಾಗಿದ್ದಾರೆ. ವೈಖಾನಸ ಆಗಮದ ಪ್ರಕಾರ ಇವರಿಬ್ಬರೂ ಭಗವಂತನ ಕೋಪವನ್ನು ಶಮನಗೊಳಿಸುವುದಕ್ಕಾಗಿಯೇ ಆತನ ಎರಡೂ ಬದಿಯಲ್ಲಿ ಕುಳಿತಿದ್ದಾರೆ. ಇಂತಹ ಸಮಯದಲ್ಲಿ ನರಸಿಂಹನ ಬಲತೊಡೆ ಯಲ್ಲಿ ಲಕ್ಷ್ಮಿಯು ಕುಳಿತಿದ್ದಾಳೆ. ಈಕೆ ಬಂಗಾರದ ಬಣ್ಣದವಳಾಗಿದ್ದಾಳೆ. ತನ್ನ ಎಡ[illegible] ಮಡಚಿಕೊಂಡು ಬಲಗಾಲನ್ನು ಕೆಳಕ್ಕೆ ಇಳಿಬಿಟ್ಟಿದ್ದಾಳೆ. ಈಕೆಯ ಎಡಗೈ[illegible] ಕೆಂಪು ಬಣ್ಣದ ಕಮಲವಿರುತ್ತದೆ. ಭೂದೇವಿಯು ಕೃಷ್ಣವರ್ಣದವಳಾಗಿದ್ದು ಸ[illegible]ವಾಗಿ



ಲಕ್ಷ್ಮಿಯು ಅಲಂಕರಿಸುವ ಎಡತೊಡೆಯಲ್ಲಿ ಕುಳಿತಿರುವಳು. ಈಕೆಯು ಬಲಗಾಲನ್ನು ಮಡಚಿಕೊಂಡು ಎಡಗಾಲನ್ನು ಇಳಿಬಿಟ್ಟವಳಾಗಿದ್ದಾಳೆ. ಈಕೆಯ ಬಲಗೈಯಲ್ಲಿ ನೀಲಿಯ ತಾವರೆ ಹೂವಿರುತ್ತದೆ. ಲಕ್ಷ್ಮಿಯು ಸ್ವಾಮಿಯ ಎಡತೊಡೆಯನ್ನು ಅಲಂಕರಿಸಿದ್ದಾಗ ಸ್ವಾಮಿಯ ತಲೆಯ ಮೇಲೆ ಆದಿಶೇಷನು ಹೆಡೆಗಳ ನೆರಳನ್ನುಂಟು ಮಾಡುತ್ತಿರುವ ಶಿಲ್ಪಗಳನ್ನು ನೋಡಬಹುದು. ನಮಗೆ ಸಿಗುವ ನರಸಿಂಹ ಶಿಲ್ಪಗಳು ಸಾಮಾನ್ಯವಾಗಿ ಮೇಲಿನ ವಿವರಣೆಗಳಿಗೆ ಅನ್ವಯವಾಗುವಂತಿರುತ್ತವೆ.

## ಸ್ಥಾಣು ನರಸಿಂಹ

ನರಸಿಂಹನ ರೂಪಗಳಲ್ಲಿ ಸ್ಥಾಣು ಅಥವಾ ಸ್ಥೌಣ ನರಸಿಂಹ ಎರಡನೆಯದು. ಸ್ವಾಮಿಯು ಕಂಬವನ್ನು ಸೀಳಿಕೊಂಡು ಹೊರಬಂದಂತೆ ಇಲ್ಲಿ ಕಂಡುಬರುತ್ತಾನೆ. ಇದೊಂದು ಭಯಂಕರ ರೂಪ. ವೈಖಾನಸಾಗಮದಲ್ಲಿ ಇದರ ವಿವರ ಸಿಗುತ್ತದೆ. ಒಂದು ವರ್ಣನೆ ಪ್ರಕಾರ ಇದು ನಾಲ್ಕು ತೋಳುಗಳನ್ನು ಹೊಂದಿ ಸಿಂಹಾಸನದ ಮೇಲೆ ಕುಳಿತಿರುವ ರೂಪ. ಸಿಂಹದ ಕಂಠ ಮತ್ತು ಮೊನಚಾದ ಹಲ್ಲುಗಳಿರುತ್ತವೆ. ಚಕ್ರ ಮತ್ತು ಶಂಖ, ಅಭಯ ಮತ್ತು ವರದಮುದ್ರೆಗಳಿರುತ್ತವೆ.

ಸ್ಥಾಣು ನರಸಿಂಹನ ಮತ್ತೊಂದು ವಿವರಣೆಯಂತೆ ಮೂರ್ತಿಗೆ ಎಂಟು, ಹನ್ನೆರಡು, ಹದಿನಾರು ಬಾಹುಗಳಿರುತ್ತವೆ. ತೊಡೆಯ ಮೇಲೆ ಹಿರಣ್ಯಕಶಿಪುವನ್ನು ಬೀಳಹಾಕಿಕೊಂಡಿರು ತ್ತದೆ. ಅವನ ಹೊಟ್ಟೆಯನ್ನು ಎರಡು ಕೈಗಳಿಂದ ಬಗೆಯುತ್ತಿರುತ್ತಾನೆ. ಬಲಗಡೆಯ ಹಸ್ತವು ಅಭಯಮುದ್ರೆ ಅಥವಾ ಅಸುರನ ತಲೆಯನ್ನು ಒತ್ತಿ ಹಿಡಿದಿರುತ್ತದೆ. ಎಡಗಡೆಯ ಹಸ್ತವು ರಾಕ್ಷಸನ ಕಾಲನ್ನು ಅದುಮಿ ಹಿಡಿದಿರುತ್ತವೆ. ಕೇವಲ ಎರಡು ತೋಳುಗಳು ಮಾತ್ರ ಕಿವಿಯವರೆಗೆ ಎತ್ತಿ ಹಿಡಿದಿದ್ದರೆ ಉಳಿದ ಕೈಗಳು ಅಸುರನನ್ನು ಮಾಲಾಕಾರವಾಗಿ ಹಿಡಿದಿರುವಂತೆ ಚಿತ್ರಿಸಬೇಕು. ಹಿರಣ್ಯಕಶಿಪುವಿನ ಭಂಗಿಯು ಕತ್ತಿ ಗುರಾಣಿಗಳನ್ನು ಹಿಡಿದು ಸ್ವಾಮಿಯ ಮೇಲೇರಿ ಹೋಗುವಂತಿರಬೇಕು. ಇದಕ್ಕೆ ಪೋಷಕವಾಗಿಯೇ ಕತ್ತಿ, ಢಾಲುಗಳನ್ನು ಬಿಡಿಸಬೇಕು. ಎಡಬಲ ಪಾರ್ಶ್ವಗಳಲ್ಲಿ ಶ್ರೀದೇವಿ, ಭೂದೇವಿ, ನಾರದ ಪ್ರಹ್ಲಾದರುಗಳನ್ನು ಕೈಜೋಡಿಸಿ ನಿಂತಿರುವಂತೆ ರೂಪಿಸಬಹುದು.

ನರಸಿಂಹನು ಅಷ್ಟಭುಜದವನಾಗಿದ್ದಲ್ಲಿ ಎರಡು ಹಸ್ತಗಳು ಅಸುರನನ್ನು ಸೀಳು ವಂತಿರುತ್ತದೆ. ನಾಲ್ಕು ಕೈಗಳಲ್ಲಿ ಚಕ್ರ, ಶಂಖ, ಗದೆ, ಪದ್ಮಗಳಿರುತ್ತವೆ. ಉಳಿದೆರಡು ಕರುಳ ಮಾಲೆಯನ್ನು ಕೊರಳಿಗೆ ಹಾಕಿಕೊಳ್ಳಲು ಎತ್ತಿದಂತಿರುತ್ತದೆ. ಈ ವಿವರವನ್ನು 'ಶಿಲ್ಪರತ್ನ'ದಲ್ಲಿ ಹೇಳಲಾಗಿದೆ. ಮತ್ಸ್ಯಪುರಾಣದಲ್ಲಿಯೂ ಸಹ ಅಷ್ಟಭುಜ ನರಸಿಂಹನ ವಿವರಣೆಯಿದೆ. ಆದರೆ ಈ ವಿವರದಲ್ಲಿ ಕ್ರೌರ್ಯವನ್ನು ಸ್ವಲ್ಪ ದೀರ್ಘವಾಗಿ ಬಿತ್ತರಿಸಿದೆ. ಅಸುರನು ರಕ್ತವನ್ನು ಕಾರಿಕೊಳ್ಳುವಂತೆ ಅವನ ಕರುಳು ಹೊರಗೆ ಚೆಲ್ಲಿರುವಂತೆ, ದುರುಳನ ಕೈಲಿ ಕತ್ತಿ ಗುರಾಣಿಗಳಿರುವಂತೆ ಚಿತ್ರಿಸಬೇಕೆಂದು ವಿಧಿಸುತ್ತದೆ ಈ ಪುರಾಣ.

ಹದಿನಾರು ಕೈಗಳ ನರಸಿಂಹ ಮೂರ್ತಿ ಸಾಧಾರಣವಾಗಿ ಲೋಹದಿಂದ ಆಗಿರುತ್ತದೆ. ಈ ಬಗೆಯ ಶಿಲಾರೂಪಗಳು ಅಪರೂಪವಾಗಿ ಆಲಯಗಳಲ್ಲಿರುವುದುಂಟು. ರಾಯಭಾಗದ ಷೋಡಶಬಾಹು ನರಸಿಂಹನ ಶಿಲ್ಪವು ಉಗ್ರಸ್ವಭಾವದ್ದು. ಮಾಗಳದಲ್ಲಿ ಉನ್ನತ ಕಲೆಗಾರಿಕೆ ಯಿಂದ ಕೂಡಿದ ಹದಿನಾರು ಕೈಗಳ ನರಸಿಂಹನನ್ನು ಕಾಣಬಹುದು. ಪಾಂಡಿಚೇರಿಯಲ್ಲಿ ಇರುವ ಷೋಡಶಬಾಹು ನರಸಿಂಹನ ಶಿಲ್ಪವು ಉನ್ನತ ದರ್ಜೆಯ ಶಿಲ್ಪಕೌಶಲ್ಯಕ್ಕೆ ಸಾಕ್ಷಿ ಯಾಗಿ ನಿಂತಿದೆ. ಆಳ್ವಾರ್ ತಿರುನಗರಿಯಲ್ಲಿ ಭವ್ಯವಾದ ಕಂಭವನ್ನೇ ಹದಿನಾರು ಕೈಗಳ ನರಸಿಂಹನನ್ನಾಗಿ ಬಿಡಿಸಿ ಹಿರಣ್ಯವಧಾ ಕಂಭಗಳನ್ನೇ ಉಂಟುಮಾಡಲಾಗಿದೆ ಎನ್ನುವುದು ಶಿಲ್ಪಿಯ ಚತುರತೆಗೆ ಹಿಡಿದ ಕೈಗನ್ನಡಿಯಾಗಿದೆ. ತಿರುಮಲೆಯ ಆಲಯದಲ್ಲಿಯ ಕಂಬದಲ್ಲಿ ಸಹ ಕಲಾತ್ಮಕ ನಯಗಾರಿಕೆಯಿದೆ.

ನರಸಿಂಹ ರೂಪದಲ್ಲಿ ದ್ವಿಗುಣಗೊಂಡು ಸಾಗುವ ಬಾಹುಗಳು ನಾಲ್ಕು, ಎಂಟು, ಹದಿನಾರು- ಹೀಗೆ ಆಯುಧಗಳನ್ನು ಹಿಡಿಯಲು ಅನುವು ಮಾಡಿಕೊಡುತ್ತದೆ. ಆಯುಧಗಳು ಎಂಥ ಕ್ರೂರವಾದ, ಕೂರಾದ ಆಯುಧಗಳೇ ಆದರೂ ಅಸುರನ ಅಸುವನ್ನು ತೆಗೆಯಲು, ಕರುಳನ್ನು ಬಗೆಯಲು ನರಸಿಂಹನು ಬಳಸಿದ್ದು ತನ್ನ ಉಗುರುಗಳನ್ನು ಮಾತ್ರವೇ ಎಂಬುದನ್ನು ಮರೆಯಲಾಗದು. ಇದರಿಂದಾಗಿ ಬ್ರಹ್ಮನ ವರಕ್ಕೆ ವಿರೋಧವಿಲ್ಲದಂತೆ ಅಸುರ ಹನನವಾಗು ವುದು. ನರಸಿಂಹನ ಕ್ರೂರ ಸ್ವಭಾವವನ್ನು ಸ್ಥಾಣು ನರಸಿಂಹ ಮೂರ್ತಿಗಳಿಂದ ತಿಳಿಯ ಬಹುದು.

ನರಸಿಂಹನ ಸುಮಾರು ಎಪ್ಪತ್ತನಾಲ್ಕು ರೂಪಗಳನ್ನು 'ವಿಹಗೇಂದ್ರಸಂಹಿತೆ'ಯು ನೀಡುತ್ತದೆ. ಇವುಗಳಲ್ಲಿ ಉಗ್ರರೂಪಕ್ಕೆ ಸೇರಿದವುಗಳು ಅಧಿಕ ಸಂಖ್ಯೆಯವು. ಸ್ಥಾಣುಜನಾದ ಎಂದರೆ ಕಂಭದಿಂದ ಉಂಟಾದ ನರಸಿಂಹನ ರೂಪಗಳನ್ನು ನಿಂತಂತೆ, ಕುಳಿತಂತೆ, ಓಡಾಡುತ್ತಿರು ವಂತೆ ಮೂರು ಭಂಗಿಯಲ್ಲಿ ಚಿತ್ರಿಸಲಾಗಿದೆ. ಅಸುರನ ಮೇಲೆ ಧಾವಿಸುವಂತೆ, ಆವನನ್ನು ಹಿಡಿಯುವಂತೆ, ಅವನೊಡನೆ ಹೋರಾಡುತ್ತಿರುವಂತೆ, ಅವನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಬಗೆಯುತ್ತಿರುವಂತೆ ಬಿಡಿಸಲಾಗಿರುತ್ತದೆ. ಈ ರೀತಿಯ ಸ್ತಂಭ ನರಸಿಂಹ, ಗ್ರಹಣ ನರಸಿಂಹ, ವಿದಾರಣ ನರಸಿಂಹರನ್ನು ಒಂದೇ ಕಡೆ ಬಿಡಿಸಿರುವುದುಂಟು. ಇವು ತಿರುಮಲೆ, ಮುಳಬಾಗಿಲು, ಕದಿರಿ, ಸಿಂಹಾಚಲ, ಅಹೋಬಿಲಗಳಲ್ಲಿ ಎದ್ದುಕಾಣುವಂತೆ ಕಂಭಗಳಲ್ಲಿ ಬಿಡಿಸಲ್ಪಟ್ಟಿವೆ.

ಸ್ಥಾಣು ವಿಭಾಗಕ್ಕೆ ಸೇರಿದ ನರಸಿಂಹ ಶಿಲ್ಪಗಳಲ್ಲಿ ಹಲವು ಅರ್ಚಾವತಾರ ರೂಪವನ್ನು ತಲುಪಿರುತ್ತವೆ. ಕದಿರಿಯ ನರಸಿಂಹ, ಮದ್ದೂರು, ರಾಯಭಾಗಗಳ ನರಸಿಂಹರು, ತೊರವಿಯ, ರಂಗಪುರದ ನರಸಿಂಹರುಗಳು ಇಂತಹ ಪೂಜಾ ವಿಗ್ರಹಗಳಾಗಿರುವ ಕೆಲವು ಉದಾಹರಣೆಗಳು ಆಗಿವೆ. ಸಾಮಾನ್ಯವಾಗಿ ಅರ್ಚನೆಗೆ ಒದಗಿ ಬರುವ ನರಸಿಂಹ ಪ್ರತಿಮೆಗಳು ಒಂದೋ ಯೋಗಾ ನರಸಿಂಹ ಆಗಿರುತ್ತದೆ ಅಥವಾ ಲಕ್ಷ್ಮೀ ನರಸಿಂಹ ಆಗಿರುತ್ತವೆ ಎಂಬುದು ಪ್ರಚಲಿತವಾದ ವಿಚಾರ.

## ವಿಸ್ಮಯ ರೂಪಗಳು

ಕೆಲವೆಡೆಗಳಲ್ಲಿ ಅರ್ಚಾಮೂರ್ತಿಯ ರೂಪರೇಖೆಗಳು ಕಲ್ಲಿನಲ್ಲಿ ಪಡಿಮೂಡಿರುವುದಿಲ್ಲ. ಗುಂಡಿನ ಆಕಾರದ ಅಥವಾ ಚಪ್ಪಟೆಯಾಕಾರದ ಶಿಲೆಗಳನ್ನೇ ಅರ್ಚಾ ಮೂರ್ತಿಗಳಾಗಿ ಬಳಸಿರುವುದುಂಟು. ಶೀಬಿಯ ನರಸಿಂಹ, ಕನಕಗಿರಿಯ ಕನಕಾಚಲಸ್ವಾಮಿ ಕೋನಗುಂಟ್ಲುವಿನ ನರಸಿಂಹ ಇಂತಹವರು. ಮಂಗಳಗಿರಿಯಲ್ಲಿ ತೆರೆದ ಬಾಯಿನ ಪಾನಕಾಲ ನರಸಿಂಹ ಸ್ವಾಮಿಯು ಆರಾಧನೆಯಿದೆ. ಶಿಲ್ಪವಿಧಾನದಲ್ಲಿ ಎಂದರೆ ನರಸಿಂಹ ಮೂರ್ತಿ ಕಲ್ಪನೆಯಲ್ಲಿ ಅದ್ಭುತ ವಿಸ್ಮಯಗಳು ಎದ್ದುಕಾಣುತ್ತವೆ. ಸಹಜವಾಗಿ ಸಿಂಹದ ಮುಖವೇ ಉಗ್ರ, ಆದರೆ ಅದು ಅರ್ಚನೆಯಲ್ಲಿ ಸೌಮ್ಯ ಶಾಂತವಾಗಿ ಕಂಡುಬರುತ್ತದೆ. (ನರಸಿಂಹ ಪದಾರ್ಥದ ಮೊದಲಭಾಗದಲ್ಲಿ ವೇದಾಂತದೇಶಿಕರ ನರಸಿಂಹ ಸ್ತುತಿಯಲ್ಲಿ ಒಂದೇ ಮುಖ ಬೇರೆ ಬೇರೆಯವರಿಗೆ ಬೇರೆ ಬೇರೆ ರೀತಿಯಲ್ಲಿ, ಭಾವದಲ್ಲಿ ಕಾಣಿಸಿಕೊಂಡಿತು ಎಂಬುದರ ವಿವರವನ್ನು ನೀಡಲಾಗಿದೆ.)

ಎರಡೇ ಕೈಗಳಿರುವ ದ್ವಿಭುಜ ನರಸಿಂಹ ಶಿಲ್ಪಗಳ ಬಗ್ಗೆ ಹೇಳಿದ್ದಲ್ಲದೆ ನರಸಿಂಹ ಪ್ರತಿಮಾ ವಿಚಾರ ಪೂರ್ಣವಾಗದು. ಈ ರೀತಿಯ ಶಿಲ್ಪಗಳು ಆಕಾರದಲ್ಲಿ ಕಿರಿಯವು ಆದರೂ ಬೆರಗನ್ನು ಹುಟ್ಟಿಸುತ್ತವೆ. ಶಿಲ್ಪವಿಕಾಸದ ದೃಷ್ಟಿಯಿಂದ ದ್ವಿಭುಜ ನರಸಿಂಹ ಶಿಲ್ಪಗಳು ಪ್ರಧಾನಪಾತ್ರ ವಹಿಸುತ್ತವೆ. ಹಲಸಿಯ ಗಿರಿಜಾ ನರಸಿಂಹ, ಬನವಾಸಿಯ ಚಕ್ರಧರ ನರಸಿಂಹ, ಮಹಾಕೂಟದ ಭಗ್ನಶಿಲ್ಪಗಳು ರಮಣೀಯತೆಯನ್ನು ಸೂಸುತ್ತವೆ.

## ಯಾನಕ ನರಸಿಂಹ

ನರಸಿಂಹನು ಕಂಭವನ್ನು ಸೀಳಿಕೊಂಡು ಹೊರಗೆ ಬರುವ ಸಂದರ್ಭದ ಚಿತ್ರಣ ಭಯಂಕರವಾದ ರೂಪವಾಗಿ ಕಂಡುಬರುತ್ತದೆ. ಉಗ್ರರೀತಿಯಿಂದ ಗೋಚರಿಸುವ ನರಸಿಂಹನು ಯಾನಕ ಎಂದರೆ ಓಡಿ ಆಡುತ್ತಿರುವಂತೆ, ಹಿರಣ್ಯಾಕ್ಷನನ್ನು ನಾನಾ ಬಗೆಗಳಲ್ಲಿ ಹಿಡಿದುಕೊಂಡು ಸಂಹರಿಸುವ ಭಂಗಿಯಲ್ಲಿರುವಂತೆ ಭಾಸವಾಗುತ್ತದೆ. ಇಂತಹ ಕೆಲವು ಶಿಲ್ಪಗಳು ಕುಂಭ ಕೋಣಂನ ಸಾರಂಗಪಾಣಿ ದೇವಾಲಯದಲ್ಲಿ ಗ್ರಹಣ ನರಸಿಂಹನೆಂದೂ, ನಾಮಕ್ಕಲ್‌ನ ಗುಹೆಯಲ್ಲಿರುವ ಉಗ್ರ ನರಸಿಂಹನೆಂದೂ, ಪಟ್ಟದಕಲ್‌ನ ಆಳೆತ್ತರದ ವಿಶಿಷ್ಟ ನರಸಿಂಹ ನೆಂದೂ ಗುರುತಿಸುವುದು ಶಿಲ್ಪಶಾಸ್ತ್ರದಲ್ಲಿ ಕಂಡುಬರುತ್ತದೆ.

ಮೂರ್ತಿಶಿಲ್ಪ ಪ್ರಪಂಚದಲ್ಲಿ ರೋಚಕವಾದುದು ಮತ್ತು ರೋಮಾಂಚಕವಾದ ನರಸಿಂಹ ಶಿಲ್ಪಗಳು ದಕ್ಷಿಣಭಾರತದ ಅನೇಕ ರಾಜ್ಯಗಳಲ್ಲಿ ಖ್ಯಾತವಾಗಿ ಕಂಡು ಬಂದಿವೆ. ಉತ್ತರದ ಕೆಲವು ಶಿಲ್ಪಗಳನ್ನು ಕೂಡಾ ಇದೇ ರೀತಿಯಲ್ಲಿ ಅದ್ಭುತ ಮತ್ತು ರೋಚಕ ರೀತಿಯಲ್ಲಿ ಗುರುತಿಸಲು ಸಾಧ್ಯವಾಗಿದೆ. ದೇವಾಲಯಗಳನ್ನು ಸಂದರ್ಶಿಸಬಹುದಾದ ದೈಹಿಕ, ದೈವಿಕ ಕಾರ್ಯಗಳಿಂದ ಇವುಗಳನ್ನು ನಮ್ಮ ಮನದ ಭಿತ್ತಿಯಲ್ಲಿ ಮೂಡಿಸಿಕೊಂಡು ಆಧ್ಯಾತ್ಮಿಕವಾಗಿ ಶ್ರೀಮಂತರಾಗಬಹುದು.

## ಅಧ್ಯಾಯ-3

# ಕಂಭೋದ್ಭವ ಮೂರ್ತಿ



ಆಳ್ವಾರ್ ತಿರುನಗರಿಯ ದೇಗುಲದಲ್ಲಿ ನರಸಿಂಹನೇ ಕಂಭವಾದ ಪರಿ

ಆಲಯ ಕಲೆ ಬೆಳೆದಂತೆಲ್ಲ ಅದರ ವಿಸ್ತಾರವೂ ಹೆಚ್ಚಾಗುತ್ತಾ ಹೋಯಿತು. ಮೊದಲಿಗೆ ಇಷ್ಟದೈವದ ಅಥವಾ ಕುಲದೈವದ ಆರಾಧನೆಗೆ ಒಂದು ಕೋಣೆಯ ಕಿಟಕಿಯಿಲ್ಲದ ಒಂದು ಬಾಗಿಲಿನ ಗುಡಿ ಸಾಧಾರಣ ಕಟ್ಟಡದಲ್ಲಿದ್ದರೆ ಕ್ರಮೇಣ ಅದರ ಮೇಲೆ ಗೋಪುರವಾಗಿ, ಹಿಂದೆ ಮುಂದೆ ಪ್ರದಕ್ಷಿಣಾಪಥವಾಗಿ, ಪೂಜಾ ಸಾಮಗ್ರಿಗಳನ್ನಿಡಲು ಸುಕನಾಸಿಗಳಾಗಿ, ಅದರ ಮುಂದೆ ಅರ್ಧಮಂಟಪ, ಮುಖಮಂಟಪಗಳಾಗಿ ಬೆಳೆಯುವಂತೆ ಹೊತ್ತಿಗೆ ಗರ್ಭಗುಡಿಯ ದೇವರ ಬಳಿ ಒಬ್ಬರೋ ಇಬ್ಬರೋ ಮಾತ್ರವೇ ನಿಲ್ಲುವಂತಾಗಿ ಪೂಜಿಸಲು ಬಂದವರೆಲ್ಲ ಮುಖಮಂಟಪದಲ್ಲಿ ಸೇರುವುದಾಯಿತು. ಇಂತಲ್ಲಿ ಇಲ್ಲಿನ ವೈಶಾಲ್ಯವೂ ಹೆಚ್ಚಾಗಿ ಮೇಲಿನ ಸೂರನ್ನು ಹಿಡಿದಿಡಲು ಕಂಭಗಳನ್ನು ನಿಲ್ಲಿಸುವಂತಾಯಿತು.

ಇಷ್ಟು ಹೊತ್ತಿಗೆ ಮೊದಲಿನ ಚಿತ್ತಾರರಹಿತ ಗೋಡೆಗಳು - ಹೆಚ್ಚಿನ ಕೆತ್ತನೆ, ಕುಶಲಕರ್ಮ ಗಳನ್ನು ಕಾಣುವಂತೆ ಆಗಿದ್ದು ಪರಿವಾರ ದೇವತೆಗಳೂ ಒಳ ಸೇರುವಂತಾಗಿದ್ದುದರಿಂದ ಆಲಯದ ಗೋಡೆಗಳು - ಅವು ಸಾಮಾನ್ಯವಾಗಿ ಕಲ್ಲು ಗೋಡೆಗಳಾಗಿ - ಒಬ್ಬ ಶಿಲ್ಪ ಗಳಿಗೆ ಅವಕಾಶವಾಗಿ ಒದಗಿಬಂದವು. ಹಾಗಾಗಿ ಪುರಾಣ, ಪುಣ್ಯಕಥೆಗಳ, ಸಂದರ್ಭಗಳ ಕೆತ್ತನೆಗೆ ಅವಕಾಶ ಸಿಕ್ಕಿತು. ಜೊತೆಗೆ ಕಂಭಗಳೂ ಸೇರಿ ಬಂದವು, ಸುಮಾರು ಒಂದೂವರೆ ಅಡಿ ಅಗಲವಿರುವಂತೆ ಚೌಕಾಕಾರವಾಗಿ. (ಹೊಯ್ಸಳ ವಾಸ್ತುಶಿಲ್ಪದ ಗರುಡಕಂಭಗಳು ನಂತರದವು ಎನ್ನಬೇಕು) ಚೋಳರ ಕಾಲದ ಗುಡಿಗಳಲ್ಲಿ ಚೌಕಮುಖದ ಕಂಭಗಳು ಸಾಧಾರಣ. ಇದೇ ರೀತಿಯ ಕಂಭ ಸಂಸ್ಕೃತಿ ವಿಜಯನಗರ ಕಾಲದಲ್ಲಿಯೂ ಮುಂದುವರಿಯು ವಂತಾಯಿತು ಎಂಬುದು ಈ ಕಂಭ ಸಾಹಿತ್ಯದ - ಕಂಭ ರಾಮಾಯಣದ- ಒಂದು ಮುಖ್ಯ ಅಂಶವೆನ್ನಬೇಕು. ವರ್ತುಲದ ಕಂಭಗಳು ಕಾರ್ಖಾನೆಯಲ್ಲಿ ತಿರುಗಿಸಲ್ಪಟ್ಟ ಏಕರೂಪದ ಆವರ್ತನದ ಚಿತ್ತಾರವನ್ನು ಹೊಂದಿ ಬೆಳೆಯುವಂತಾಗಿ ಅಲ್ಲಿ ಚೌಕ, ಆಯತಾಕಾರಗಳಿಲ್ಲದೆ ಶಿಲ್ಪಗಳ ಕೈಕಸುಬಿಗೆ ಕೌಶಲದ ಅಭಿವ್ಯಕ್ತಿಗೆ ಹೆಚ್ಚು ಅವಕಾಶವಿಲ್ಲ ವಾಯಿತು. ಚೌಕದ ಘನಾಕೃತಿಯ ಕಂಭಗಳು ಆಯತಾಕಾರದ ಹೊರಮೈಗಳನ್ನು ಹೊಂದಿ ಒಂದೊಂದು ವಕ್ತ್ರತೆಗೂ ಬೇರೆ ಬೇರೆ ರೀತಿಯ ಭಾರತದ ಉಳಿಯ ಪೆಟ್ಟು ತಿನ್ನಬೇಕಾಯಿತು. ಹಾಗಾಗಿ ರಾಮಾಯಣ, ಮಹಾಭಾರತ, ಭಾಗವತದ ಹಲವು ಹನ್ನೊಂದು ಪ್ರಸಂಗಗಳಿಗೆ ಈ ಮಂಟಪ ಕಂಭಗಳು ಆಶ್ರಯಸ್ಥಾನಗಳಾದವು.

## ಕಂಭಶಿಲ್ಪದ ವಸ್ತು

ಆಲಯದ ಕಂಭಗಳಲ್ಲಿ ರಾಮಾಯಣದಿಂದ ಶ್ರೀರಾಮ ಪಟ್ಟಾಭಿಷೇಕ, ಸೀತೆ-ಆಂಜನೇಯ ಸಂದರ್ಶನ, ವಾಲಿ-ಸುಗ್ರೀವ ಕಾಳಗ, ರಾಮನ ಸಪ್ತತಾಲ ಭಂಜನ, ಆಂಜನೇಯನು ಸಂಜೀವಿನಿ ಪರ್ವತ ತರುವುದು, ರಾಮಪಾದುಕೆಯನ್ನು ಹೊತ್ತ ಭರತ ಮೊದಲಾಗ ವಿಷಯಗಳು ಚಿತ್ರಿತವಾದರೆ ಭಾಗವತದಿಂದ ಶ್ರೀಕೃಷ್ಣನ ಬಾಲಲೀಲೆಗಳು -ಪೂತನಿ ವಧೆ, ನಳಕೂಬರ ಶಾಪವಿಮೋಚನೆ, ಕಾಳಿಂಗ ಮರ್ದನ, ಗೋಪಿಕಾ ವಸ್ತ್ರಾಪಹರಣ, ವೇಣುಗೋಪಾಲ, ಬೆಣ್ಣೆ ಕದಿಯುವಿಕೆ ಮೊದಲಾದವು ಕಂಭಶಿಲ್ಪ ಸಾಹಿತ್ಯವಾದವು. ಮಹಾಭಾರತದ ಪ್ರಸಂಗಗಳು ಸ್ವಲ್ಪ ಹೆಚ್ಚು ಮಂದಿಯನ್ನು ಬಯಸುವ ದೃಶ್ಯಗಳಿಂದಾದದ್ದು. ಯಾವುದೇ ಸಂದರ್ಭದಲ್ಲಿಯೂ ನಾಲ್ಕೈದು ಮಂದಿಯ ಅಗತ್ಯವಿರುವಂತಹವು. ಹಾಗಾಗಿ ಅವುಗಳ ಚಿತ್ರೀಕರಣ ಸ್ವಲ್ಪ ಕಡಮೆಯೆಂದೇ ಹೇಳಬೇಕು. ಬಲಿ ಚಕ್ರವರ್ತಿ, ವಾಮನಾವತಾರ, ತ್ರಿವಿಕ್ರಮಾವತಾರಗಳು, ಕಂಭ ಶಿಲ್ಪಗಳ ವಸ್ತುವಾದವು. ಕ್ವಚಿತ್ತಾಗಿ ಮತ್ಸ್ಯ ಕೂರ್ಮಾವತಾರ ಗಳೂ, ವರಾಹಾವತಾರವೂ ಕಂಭಗಳ ಮೇಲೆ ಕಂಡುಬಂದವು. ಪರಶುರಾಮ, ಬುದ್ಧ, ಕಲ್ಕಿ ಅವತಾರಗಳು ಯಾಕೋ ಶಿಲ್ಪಗಳನ್ನು ಆಕರ್ಷಿಸಲೇ ಇಲ್ಲ.

ಶಿಲ್ಪಗಳಿಗೆ ಇಷ್ಟವಾದ ಒಂದು ಅವತಾರ ನರಸಿಂಹಾವತಾರ. ನರಹರಿ ಹಿರಣ್ಯನನ್ನು ಕೊಲ್ಲುವ ಕಾರಣಕ್ಕಾಗಿ ಕಂಭ ಸೀಳಿಕೊಂಡು ಬಂದ, ಹೊಸಿಲ ಮೇಲೆ ನೆಲೆಯಾದ.

ಆಮೇಲೆ ಸ್ವಲ್ಪ ಹೊತ್ತು ಲಕ್ಷ್ಮಿಯೊಡನೆ ಪ್ರಹ್ಲಾದನುಗ್ರಹಾರ್ಥವಾಗಿ ಸಿಂಹ ಪೀಠದಲ್ಲಿಯೂ ಸ್ಥಾಪಿತನಾದ. ಆದರೆ ಒಟ್ಟು ಕಂಭ ಮೂಲದ ಕಥೆಯಾದ್ದರಿಂದ ಕಂಭ ಶಿಲ್ಪಕ್ಕೆ ಅನುಕೂಲವಾದ ಅತಿಪ್ರಿಯವಾದ ವಿಷಯವಾಯಿತು. ಹೀಗಾಗಿ ನರಸಿಂಹಾವತಾರದ ಕಥೆಯ ಕಾಲ ವ್ಯವಧಿ ಸ್ವಲ್ಪವೇ ಆದರೂ, ಅದರ ಸನ್ನಿವೇಶಗಳು ಬಹಳವಲ್ಲವಾದರೂ, ಇರುವ ಸಣ್ಣ ಕಥೆಯನ್ನೇ ದೊಡ್ಡ ಚಿತ್ರಮಂದಿರ ಮಾಡಲಾಯಿತು. ನರಸಿಂಹ ಹೇಳಿಕೇಳಿ ಹೊಸ ಅವತಾರ. ಎರಡು ಕೈ ಎರಡು ಕಾಲಿನ ಮನುಷ್ಯ ನಾಲ್ಕು ಕಾಲಿನ ಸಿಂಹದ ದೇಹ ಪಡೆದಾಗ ಎರಡು ಕೈಗಳಿಂದ ಆರಂಭವಾದ ಚಿತ್ರೀಕರಣ ಶಿಲ್ಪಿಯ ಅನಂತ ಕಲ್ಪನಾ ಚಾತುರ್ಯಕ್ಕೆ ತಕ್ಕಂತೆ ಹದಿನಾರು ಕೈಗಳವರೆಗೆ ವಿಸ್ತಾರವನ್ನು ಪಡೆಯಿತು. ಅವತಾರ ಪುರುಷ ಅವನು. ಅವನಿಗೆ ಅನುಕೂಲಕ್ಕೆ ತಕ್ಕಂತೆ ಅಗತ್ಯಕ್ಕೆ ತಕ್ಕಂತೆ ಕೈಗಳು. ಕೋದಂಡ, ಗದೆ, ಖಡ್ಗ, ಚಕ್ರ, ಶಂಖಗಳೇ ಮೊದಲಾಗಿ ನೂರೆಂಟು ಆಯುಧಗಳಿದ್ದರೂ ನಖವನ್ನೇ ಇಲ್ಲಿ ಆಯುಧ ಮಾಡಿಕೊಂಡ ಹಾಗಾಗಿ ಶಿಲ್ಪಿಯ ಕೌಶಲ್ಯಕ್ಕೆ ವಿಷಯ ನೂರಾಯಿತು, ಕವಿಯ ಕಲ್ಪನೆಗೆ ರೆಕ್ಕೆ ಸಾವಿರವಾದ ಹಾಗೆ.

## ಕಂಭಶಿಲ್ಪಗಳ ವೈಖರಿ

ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ನೃಸಿಂಹ ಶಿಲ್ಪ ಹೇಗಿರಬೇಕೆಂಬುದನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ನರಸಿಂಹನ ವಿವಿಧ ಲಕ್ಷಣಗಳಿಂದ ಕೂಡಿದ ೭೪ ಮೂರ್ತಿಗಳನ್ನು 'ವಿಹಗೇಂದ್ರ ಸಂಹಿತೆ' ಹೆಸರಿಸುತ್ತದೆಯಾದರೂ ಎಲ್ಲ ನರಸಿಂಹ ರೂಪಗಳ ಲಕ್ಷಣವನ್ನು ವಿವರಿಸಿಲ್ಲ. ಜೊತೆಗೇ ಬಹುತೇಕ ವಿವರಣೆಗಳು ಕೈಕಾಲುಗಳ ಆಯುಧಗಳ ಲಕ್ಷಣಗಳನ್ನು ವಿವರಿಸುವುದೇ ಹೊರತು ಪ್ರತಿಮೆಯ ಪೀನ ನಿಮ್ನತೆಗಳ ಆಳ ಅಗಲಗಳಿಲ್ಲ. ಅದೇನೇ ಇದ್ದರೂ ನರಸಿಂಹನ ಚಿತ್ರಗಳು ಕಲ್ಲಿನಲ್ಲಿ ಮೂಡಿಬಂದಿರುವುದು ತಮ್ಮದೇ ಹಾದಿಯನ್ನು ಹಿಡಿದಿವೆ ಎಂಬುದಂತೂ ಸ್ಪಷ್ಟ. ಮೊದಲು ಸಾಹಿತ್ಯವಾಗಿ ನಂತರ ವ್ಯಾಕರಣವಾದಂತೆ ಅದೇ ಸೂತ್ರವನ್ನು ಇಲ್ಲಿಗೂ ಅನ್ವಯಿಸಿದರೆ ಮೊದಲು ವಿಗ್ರಹವಾಗಿ ಆಮೇಲೆ ಲಕ್ಷಣ ವಿವರಣೆ ಎಂದು ಹೇಳಬಹುದೇನೋ. ಹಿರಣ್ಯಕಶಿಪ್ಯನು ತನಗೆ ಯಾವ ಯಾವ ರೂಪಗಳಿಂದ ಮರಣ ಉಂಟಾಗಬಾರದು ಎಂದು ವರ ಕೇಳಿದನೋ ಅಂತಂತಹ ರೂಪಗಳನ್ನು ಬಿಟ್ಟು ಅಂದಿಗೆ ಕಲ್ಪಿಸಿಕೊಳ್ಳಲಾಗದಿದ್ದ ಸಂಕೀರ್ಣ ಲಕ್ಷಣಗಳ ಬೇರೊಂದು ರೂಪವನ್ನು ಧರಿಸಿ ಹರಿ ಪ್ರಕಟವಾದಂತೆ ನರಹರಿಯಾದಂತೆ ಹಿರಣ್ಯಕಶ್ಯಪನ ನರ ಹರಿದು ಹಾರ ಹಾಕಿಕೊಂಡಂತೆ ಚಿತ್ರಿತವಾದ ಮೇಲೆ ಅದನ್ನು ಕಲ್ಲಿಗಿಳಿಸಿದ ಶಿಲ್ಪಿಗಳೂ ತಮ್ಮ ಪ್ರತಿಭೆಗೆ ತಕ್ಕಂತೆ, ದೊರೆತ ಆಧಾರ ಶಿಲೆಗೆ ತಕ್ಕಂತೆ, ವಿಷಯಕ್ಕೆ ಒಂದು ರೂಪವನ್ನು ಅರ್ಥವನ್ನು ಕೊಡುತ್ತ ಹೋದರು. ಇಂತಲ್ಲಿ ನರಸಿಂಹನ ರೂಪ ನಿರ್ಧಾರಣೆಗೆ ಗರ್ಭಗುಡಿಯಲ್ಲಿ ಇಂದು ಅಲಂಕಾರಗಳ ಸೆರಗಿನಲ್ಲಿ ಮುಚ್ಚಿ ಹೋಗಿರುವ ನರಸಿಂಹನ ಮೂರ್ತಿಗಳಿಗಿಂತ ಹೊರಗಿನ ಮುಖಮಂಟಪಗಳ ಕಂಭಗಳ ಗೋಡೆಗಳಲ್ಲಿ ಚಿತ್ರವಿಚಿತ್ರವಾಗಿ ಮಾಡಿರುವ ನರಸಿಂಹ ಮೂರ್ತಿಗಳು ಹೆಚ್ಚು ನೆರವು ನೀಡುತ್ತವೆ.



ಕಂಭವನ್ನು ಸೀಳಿಕೊಂಡು ಒಡಮೂಡುತ್ತಿರುವ ನರಸಿಂಹ

ಮಂಟಪಗಳ ಕಂಭಗಳು ಎಂದ ಕೂಡಲೇ ನರಸಿಂಹಾವತಾರದ ಕಲ್ಪನೆ ಮೂಡುತ್ತ ನರಸಿಂಹ ಹುಟ್ಟಿದ್ದೇ ಕಂಭವನ್ನು ಸೀಳಿಕೊಂಡು. ಮಂಟಪಗಳಲ್ಲಿನ ವಾಸ್ತು ನಿಷ್ಠವಾ ಚಿತ್ರಮಯವಾದ ಕಂಭದಲ್ಲಿ ಕಂಭ ಸೀಳಿಕೊಂಡು ಹೊರಬರುತ್ತಿರುವ ನರಸಿಂಹನ ಚಿ ದಿಂದಲೇ ಶಿಲ್ಪಿಯ ಕಲಾಚಾತುರ್ಯದ ಅಭಿವ್ಯಕ್ತಿ ಆರಂಭವಾಗುತ್ತದೆ. ಇಲ್ಲೆಲ್ಲ ಕಂಭಗ ಮೇಲೆ ಕೆತ್ತಿದಂತಹ ಕಂಭದಿಂದ ಹೊರಬರುತ್ತಿರುವ ವಿವಿಧ ಹಂತದಲ್ಲಿ ನರಸಿಂ ಹೊರ ಬರುತ್ತಿರುವುದನ್ನು ಕಾಣಬಹುದು. ಹರಿಯ ಎಲ್ಲ ಆಲಯಗಳ ಕಂಭಗಳಲ್ಲಿಯು ನರಸಿಂಹಾವತಾರದ ಚಿತ್ರಣವಿದ್ದೇ ಇರುತ್ತದೆ. ಅಹೋಬಿಲದಲ್ಲಿ ಪ್ರಸಿದ್ಧವಾಗಿರು ನವನಾರಸಿಂಹ ದೇವಾಲಯಗಳಲ್ಲಿಯೇ ಅಲ್ಲದೆ ಅವುಗಳ ಹೊರಗಡೆಯ ಮಂಟಪದಲ್ಲಿಯು ವಿವಿಧ ನರಸಿಂಹ ರೂಪಗಳನ್ನು ಕಾಣಬಹುದು. ಅಹೋಬಿಲ ಮಠದ ಮೂಲಪುರುಷರಿ ನರಸಿಂಹಸ್ವಾಮಿ ಮನುಷ್ಯ ರೂಪದಲ್ಲಿ ಬಂದು ದೀಕ್ಷೆ ನೀಡುವುದರಿಂದ ಹಿಡಿದ ನರಸಿಂಹ ಸ್ವಾಮಿಯು ಚೆಂಚುಲಕ್ಷ್ಮಿಯೊಡನಿರುವ ಸ್ಥಳೀಯ ಜಾನಪದ ಕಥಾ ಪ್ರಸಂಗವನ ಇಲ್ಲಿನ ಕಂಭಗಳ ಮೇಲೆ ಚಿತ್ರಿಸಲಾಗಿದೆ.

ತಿರುಪತಿಯಲ್ಲಿ ನರಸಿಂಹ ಸ್ವಾಮಿಯ ಗುಡಿಗಳು ಹಲವು ಇದ್ದರೂ ಅಷ ವೆಂಕಟೇಶ್ವರ ಸ್ವಾಮಿ, ಗೋವಿಂದರಾಜ ಸ್ವಾಮಿ, ಅಮ್ಮನವರ ಆಲಯಗಳ ಪ್ರಸಿದ್ಧಿಯ ಬೆಳಕಿನಲ್ಲಿ ಹಿನ್ನೆಲೆಗೆ ಸರಿದಂತಹವುಗಳಾಗಿವೆಯಾದರೂ ನರಸಿಂಹ ದರ್ಶನ ಮಾಡಬೇಕ ಎನ್ನುವವರಿಗೆ ಆಸಕ್ತಿದಾಯಕವಾದ ಕಂಭಶಿಲ್ಪಗಳು ಕಂಡುಬರುತ್ತವೆ. ಬೆಟ್ಟದ ಮೇ ಸ್ವಾಮಿಯ ಗುಡಿ ಹಲವು ಹನ್ನೊಂದು ಮಂದಿಯಿಂದ ವಿವಿಧ ಕಾಲಗಳಲ್ಲಿ ಹಲವ ನಿರ್ಮಾಣ ಹೊಂದಿ ಈಗಿರುವ ರೂಪ ಪಡೆದಿದೆ. ಹಾಗೆಯೇ ಕೆಳಗಡೆಯ ತಿರುಪತಿಯಲ್ಲಿನ ಗೋವಿಂದರಾಜಸ್ವಾಮಿ ಆಲಯ, ನಮ್ಮಾಳ್ವಾರ್ ಆಲಯ (ಈಗಿರುವ ಎಸ್.ವಿ. ಮ್ಯೂಸಿಯಂ ಕಟ್ಟಡ)ಗಳಲ್ಲಿಯೂ ವಿವಿಧ ರೂಪದ ನರಸಿಂಹ ವಿಗ್ರಹಗಳನ್ನು ಕಾಣಬಹುದು.

ತಿರುಮಲೆಯ ಆಲಯದಲ್ಲಿ ಆನಂದ ನಿಲಯ ವಿಮಾನದ ಹೊರಗಡೆಯ ಸುಕನಾಸಿಯಿಂದ ಈಚೆಗೆ ಸ್ನಪನ ಮಂಟಪವಿದೆ. ಇಲ್ಲಿನ ಕಂಭಗಳಲ್ಲಿಯೂ ನರಸಿಂಹ ಶಿಲ್ಪಗಳಿರುವುದಾದರೂ ಈ ಕಂಭಗಳನ್ನು ನೋಡಲು ಅವಕಾಶವೇ ಇಲ್ಲದಿರುವಂತಹ ಜನಸಂದಣಿ ಯಾವಾಗಲೂ ಇರುತ್ತದೆ. ಹಾಗಾಗಿ ಹೊರಗಿನ ತಿರುಮಾಮಣಿ ಮಂಟಪದಲ್ಲಿನ ಕಂಭಗಳನ್ನು ಮತ್ತೊಮ್ಮೆ, ಅದೂ ಬಂಗಾರದ ಬಾಗಿಲಿನ ಒಳಕ್ಕೆ ನುಸುಳುವ ಮೊದಲು ನೋಡಲು ಅವಕಾಶವುಂಟಾಗುತ್ತದೆ. ತಿರುಮಾಮಣಿ ಮಂಟಪ ಹದಿನಾರು ಕಂಭಗಳ ಮುಖಮಂಟಪ ಶಕ ವರ್ಷ ೧೩೩೯ರಲ್ಲಿ ಎಂದರೆ ಕ್ರಿಸ್ತ ಶಕ ೧೪೧೭ರಲ್ಲಿ ಚಂದ್ರಗಿರಿಯನ್ನು ಆಳುತ್ತಿದ್ದ ಮಲ್ಲಿಕಾ ಅಥವಾ ಮಾಧವದಾಸ ನಿರ್ಮಿಸಿದ ಎಂಬ ಶಾಸನವಿದೆ. ಈ ಶಾಸನ ಯಾಗಶಾಲೆಯ ಬಳಿಯಲ್ಲಿದೆಯೆನ್ನಲಾಗಿದೆ. ಇಲ್ಲಿ ಮೊದಲು ಹಣವನ್ನು ಲೆಕ್ಕಿಸಲಾಗು ತ್ತಿದ್ದಿತು. ಇದರಿಂದಾಚೆಗೆ ಬಂದರೆ ಒಂದು ಪ್ರದಕ್ಷಿಣಾಪಥ ಕ್ರಮವಾಗಿ ವರದರಾಜಸ್ವಾಮಿ ಆಲಯ, ಸ್ವಾಮಿಯ ನಿವೇದನೆಯ ಅನ್ನಪ್ರಸಾದಗಳ ಅಡುಗೆ ಮನೆ ಗೋಡೆಯ ಮಂಟಪಗಳು, ಹಳೆಯ ಕಲ್ಯಾಣ ಮಂಟಪಗಳು ದಕ್ಷಿಣಕ್ಕೆ ಪಶ್ಚಿಮಕ್ಕೆ ಉದ್ದಕ್ಕೆ ಗೋಡೆಯ ಮಂಟಪಗಳು

(ಇಲ್ಲಿ ಈಗ ದಿನದ ಹುಂಡಿಯ ಲೆಕ್ಕ ಮಾಡಲಾಗುತ್ತದೆ). ಉತ್ತರಕ್ಕೆ ತಾಳ್ಳಪಾಕ ಕವಿಗಳ ಸಾಹಿತ್ಯದ ಅರೆ, ರಾಮಾನುಜರ ಆಲಯ, ನರಸಿಂಹಸ್ವಾಮಿ ಆಲಯಗಳುಂಟು. ಇಲ್ಲೆಲ್ಲ ಕಂಭಗಳಲ್ಲಿ ಹಲವು ಹನ್ನೆರಡು ರೀತಿಯ ನರಸಿಂಹಸ್ವಾಮಿ ಚಿತ್ರಣಗಳಿವೆ.



ಯಾನಕ ನರಸಿಂಹ ಶಿಲ್ಪಕ್ಕೊಂದು ಉತ್ತಮ ನಿದರ್ಶನ

ಹೊರಕ್ಕೆ ಬಂದರೆ ಧ್ವಜಸ್ತಂಭ ಮಂಟಪ, ತಿರುಮಲರಾಯ ಮಂಟಪ, ಪ್ರತಿಮಾ ಮಂಟಪ, ರಂಗನಾಯಕ ಮಂಟಪ, ಮುಕುರ ಮಂಟಪ ಮೊದಲಾದವುಗಳಿವೆ. ಸಂಪಂಗಿ ಪ್ರದಕ್ಷಿಣೆಯೆಂಬ (ಈಗ ಕಲ್ಯಾಣೋತ್ಸವ ನಡೆಯುವ ಸ್ಥಳ) ಪ್ರದಕ್ಷಿಣಾಪಥ, ಅದರ ಆಚೆಯ ಆವರಣದ ಗೋಡೆಯ ಮಂಟಪಗಳು ದಕ್ಷಿಣ, ಪಶ್ಚಿಮ, ಉತ್ತರಗಳಲ್ಲಿದ್ದು ವಿವಿಧೋಪಯೋಗಿ ಮಂಟಪಗಳಾಗಿವೆ. ತಿರುಮಲರಾಯ ಮಂಟಪವನ್ನು ಹದಿನಾರನೆಯ ಶತಮಾನದಲ್ಲಿ ಶ್ರೀರಂಗರಾಜ ತಿರುಮಲರಾಜನು ಕಟ್ಟಿಸಿದ. ಇದರ ಒಳಗೆ ಒಂದು ಚಿಕ್ಕ ಮಂಟಪ. ೧೪೭೩ರಲ್ಲಿ ಸಾಳುವ ನರಸಿಂಹರಾಯನು ಸ್ವಾಮಿಯ ಉಯ್ಯಾಲೆ ಉತ್ಸವಕ್ಕೆಂದು ಕಟ್ಟಿಸಿದ ಕುಸುರಿಗೆಲಸದ ಡೋಲೋತ್ಸವ ಮಂಟಪವಿದೆ. ಹಂಸತೂಲಿಕೆಯಲ್ಲಿ- ಅನ್ನಾ ಊಂಜಲಿನಲ್ಲಿ- ಸ್ವಾಮಿಯನ್ನು ಆಸೀನಗೊಳಿಸಿ ಇಲ್ಲಿ ತೂಗುತ್ತಿದ್ದರು. ಇಲ್ಲೆಲ್ಲ ಕಂಭಗಳಲ್ಲಿ ನರಸಿಂಹ ಸ್ವಾಮಿಯ ಹತ್ತಾರು ರೂಪಗಳಿವೆ.

ತಿರುಮಲೆಯ ಆಲಯದ ಒಳಗಡೆಯೇ ಬೆಳ್ಳಿಯ ಬಾಗಿಲನ್ನು ದಾಟಿ ಒಳಹೊಕ್ಕರೆ ನರಸಿಂಹಸ್ವಾಮಿ ಗುಡಿಯಿದೆ. ಅದನ್ನು ಬಿಟ್ಟರೆ ಕಂಭಗಳಲ್ಲಿ ಅತಿ ಮುದ್ದಾದ ಶಿಲ್ಪಗಳುಂಟು. ತಿರುಮಾಮಣಿ ಮಂಟಪದಲ್ಲಿ ಕಂಭವನ್ನು ಸೀಳುತ್ತಿರುವ ನರಸಿಂಹ ಇದ್ದಾನೆ. ಎರಡು ಕೈಗಳಲ್ಲಿ ಕಂಭವನ್ನು ಬಗೆಯುವಂತೆಯೂ, ಮೇಲಿನೆರಡು ಕೈಗಳಲ್ಲಿ ಚಕ್ರ ಶಂಖಗಳನ್ನು ಧರಿಸಿರುವ ಸಿಂಹಮುಖದ ಕಿರೀಟ ಹೊಂದಿದ ನರಸಿಂಹ. ಕಂಭ ಹರಿಯುವ ನರಸಿಂಹ ಎಂದು ಕರೆಯಬಹುದು. ಇಲ್ಲಿಯೇ ಇರುವ ಮತ್ತೊಂದು ಮೂರ್ತಿ ಹಿರಣ್ಯಕಶಿಪುವನ್ನು ಹಿಡಿದಂತೆ ಇದೆ. ಗ್ರಹಣ ನರಸಿಂಹ ಎನ್ನಬೇಕು. ಎದುರಿಗಿರುವ ಅಡುಗೆ ಮನೆಯ



ಉರಗನ ಮೇಲೆ ನರ್ತಿಸುತ್ತಿರುವ
ನರಸಿಂಹಸ್ವಾಮಿಯ ಆಕರ್ಷಕ ಭಂಗಿ



ಭಕ್ತ ಪ್ರಹ್ಲಾದನಿಗೆ
ವರಪ್ರದಾನನಾದ ನರಸಿಂಹ

ಬದಿಯ ಮಂಟಪದಲ್ಲಿ ಶ್ರೀ ಸಹಿತನಾದ ನರಸಿಂಹನಿದ್ದಾನೆ. ಅಲ್ಲಿಂದ ಬದಿಯ ಹಳೆಯ ಕಲ್ಯಾಣ ಮಂಟಪಕ್ಕೆ ಹೊರಡುವ ಯಾಳಿಗಳಿರುವ ಮೆಟ್ಟಿಲ ಬದಿಯ ಕಂಭಗಳು ಸ್ವಾರಸ್ಯ ಕರವಾದವು. ಸಿಂಹವನ್ನೇರಿದ ನರಸಿಂಹ ಇಲ್ಲಿದ್ದಾನೆ. ಸಾಮಾನ್ಯವಾಗಿ ಲಕ್ಷ್ಮೀನರಸಿಂಹನಂತಿರು ವುದು ಸಹಜವಾದರೆ ಇಲ್ಲಿನ ಕಂಭದಲ್ಲಿ ಎಡಕ್ಕೆ ಲಕ್ಷ್ಮಿ, ಬಲಕ್ಕೆ ಭೂದೇವಿಯರಿದ್ದಾರೆ. ಹೊರಗಡೆಯ ತಿರುಮಲರಾಯ ಮಂಟಪದಲ್ಲಿ ಪ್ರಹ್ಲಾದ ವರದನಿದ್ದಾನೆ. ಎರಡು ಕೈಗಳ ನರಸಿಂಹ ಬಲಗೈಯನ್ನು ಪ್ರಹ್ಲಾದನ ತಲೆಯ ಮೇಲಿಟ್ಟಿದ್ದಾನೆ. ಈ ನರಸಿಂಹನ ತಲೆಯಲ್ಲಿ ಶಿಖೆಯಿದೆ. ಕಿರೀಟವಿಲ್ಲ. ಇನ್ನೊಬ್ಬ ನರಸಿಂಹ- ಈತನನ್ನು ನೃತ್ಯ ನರಸಿಂಹ ಎನ್ನಬಹುದು. ತನ್ನ ಎಡಗಾಲನ್ನು ಹಾವಿನ ತಲೆಯ ಮೇಲಿಟ್ಟು ಕುಣಿಯುವ ಭಂಗಿಯಲ್ಲಿರು ವುದು. ಇಂತಹದೇ ಒಂದು ನರಸಿಂಹ ವಿಗ್ರಹವನ್ನು ಕುಂಭಕೋಣದಲ್ಲಿರುವುದೆಂದು ಎಸ್.ಕೆ. ರಾಮಚಂದ್ರರಾಯರು ಚಿತ್ರ ಬಿಡಿಸಿ ತೋರಿಸಿದ್ದಾರೆ. ಹದಿನಾರು ಕೈಗಳ ಹಿರಣ್ಯಕ ವಿದಾರಣ ನರಸಿಂಹನನ್ನು ಇಲ್ಲಿನ ಕಂಭವೊಂದರಲ್ಲಿ ಕಾಣಬಹುದು.

## ವೈವಿಧ್ಯ ನರಸಿಂಹ

ಕೆಳಗಡೆಯ ಶ್ರೀಗೋವಿಂದರಾಜ ಆಲಯದ ಪಕ್ಕದಲ್ಲಿ ಉತ್ತರಕ್ಕೆ ನಮ್ಮಾಳ್ವಾರರ ಗುಡಿಯಿದೆ. ಇಲ್ಲಿ ತಿರುಮಲ ತಿರುಪತಿ ದೇವಸ್ಥಾನಗಳ ಆಲಯ ಪುರಾವಸ್ತು ಸಂಗ್ರಹಾಲಯವೂ ಇದೆ. ಇಲ್ಲಿನ ಕಂಭಗಳಲ್ಲಿ ಅತ್ಯಂತ ಆಸಕ್ತಿದಾಯಕವಾದ ನರಸಿಂಹ ಮೂರ್ತಿಗಳುಂಟು. ಯೋಗಾ ನರಸಿಂಹನ ಕೆಳಗಡೆಯ ಬಲಹಸ್ತ ಚಿನ್ಮುದ್ರೆಯಲ್ಲಿರುವುದು ಒಂದು ವಿಗ್ರಹವಾದರೆ, ಉಪದೇಶ ಭಂಗಿಯಲ್ಲಿ ಅಭಯಹಸ್ತವಾಗಿರುವುದು ಮತ್ತೊಂದು. ಯೋಗ ಪಟ್ಟಿಕೆಯನ್ನು ಒಂದೇ ಕಾಲಿಗೆ ಹಾಕಿರುವುದು ಒಂದಾದರೆ, ಯೋಗಪಟ್ಟಿ ಹೊಂದಿದ ಯೋಗಾನರಸಿಂಹ ಪಾರ್ಶ್ವದೇಹನಾಗಿ ಎದಿರು ಮುಖವಿರುವಂತಹುದು ಮತ್ತೊಂದು. ಎರಡೇ ಕೈಗಳ, ನಿಂತ ನರಸಿಂಹ ಒಂದಾದರೆ ನಾಲ್ಕು ಕೈಗಳ ನಿಂತ ನರಸಿಂಹ ಮತ್ತೊಂದು.

ಇಲ್ಲೆಲ್ಲ ಮುಖ್ಯವಾದದ್ದು ಕಂಭದಲ್ಲಿರುವ ಅವಕಾಶ. ಶಿಲ್ಪಿಯ ಕೌಶಲಕ್ಕೆ ತಕ್ಕಂತೆ. ತಿರುಮಲೆಯಲ್ಲಿ ಆಲಯದ ಬೆಳ್ಳಿಯ ಬಾಗಿಲಿನಿಂದ ಒಳಗಿರುವಂತಹ ಮೂರ್ತಿಗಳು ಸೊಬಗಿನ ಅನುಭವ ನೀಡುವ ಬಳಪದ ಕಲ್ಲಿನಂತಹ ಮೃದುತ್ವ ಹೊಂದಿದ್ದರೆ ಆಲಯದ ಧ್ವಜಸ್ತಂಭ ಮಂಟಪ, ತಿರುಮಲರಾಯ ಮಂಟಪ, ತಿರುಪತಿಯ ಗೋವಿಂದರಾಜಸ್ವಾಮಿ ಆಲಯ, ನಮ್ಮಾಳ್ವಾರ್ ಆಲಯಗಳಲ್ಲಿನವು ಚಟುಗಲ್ಲಿನಿಂದಾದದ್ದು, ಇಲ್ಲಿ ಕುಸುರಿಗೆಲಸವನ್ನು ನೋಡಲಾಗುವುದಿಲ್ಲ.

ಆದರೆ ಕದಿರಿ, ಶ್ರೀರಂಗ, ಅಹೋಬಿಲಗಳಲ್ಲಿ ಕುಸುರಿಗೆಲಸದ ಸುಂದರವಾದ ಕಂಭಗಳಿದ್ದು ಅವುಗಳಲ್ಲಿನ ನರಸಿಂಹಾವತಾರ ಘಟ್ಟಗಳನ್ನು ನೋಡಿ ಆನಂದಿಸುವುದೊಂದು ಹೊಸ ಅನುಭವ ಎನ್ನಿಸಿದರೆ ಅಚ್ಚರಿಯಿಲ್ಲ.

ಅಧ್ಯಾಯ-4

# ದರ್ಶನ ಮಾರ್ಗ



ಆಂಧ್ರಪ್ರದೇಶದ ಚಿಂತಲಪೂಡಿಯ ಆಕರ್ಷಕ ಯೋಗ ನರಸಿಂಹ

ದೇವಾಲಯಗಳು ಮನುಷ್ಯನ ಧಾರ್ಮಿಕ, ಆಧ್ಯಾತ್ಮಿಕ ಜೀವನದ ಮಾರ್ಗವನ್ನು ರೂಪಿಸುವಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸುತ್ತಿರುತ್ತದೆ. ಮಾನವ ಬದುಕಿನ ಬೌದ್ಧಿಕ-ಶಾರೀರಕ ಸಂಘಟನೆಯ ಸಂಯೋಜನೆಯಿಂದಾಗಿ, ದೇವಾಲಯಗಳನ್ನು ಕಟ್ಟುವ -ಬೆಳೆಸುವ-ಉಳಿಸುವ ಮಹತ್ತರ ಕಾರ್ಯಪರಿಣಾಮಗಳನ್ನು ಸಾಧಿಸಲಾಗಿದೆ. ಧರ್ಮದ ಜೀವನಾಡಿಯನ್ನು ನಿಯಂತ್ರಣಗೊಳಿಸುವಲ್ಲಿ ದೇವಾಲಯಗಳ ಸ್ಥಾನವು ಮಹತ್ತರವಾಗಿದೆ. ದೇಶದ ವಿವಿಧತೆ, ವೈಶಾಲ್ಯತೆಗಳಿಗನುಗುಣವಾಗಿ, ದೇಹದ ಕ್ರಿಯಾನುಶೀಲತೆಗೆ ತಕ್ಕಂತೆ ಈ ಪೂಜಾಮಂದಿರಗಳ ಮೂಲಕ ಭಕ್ತಿಯ ಹಾದಿಗಳನ್ನು ನಿರ್ಮಿಸಿಕೊಳ್ಳಬಹುದಾಗಿದೆ. ಭಕ್ತಿಯ ವಿಧಾನಗಳು ಅನೇಕವಿರುವುದಾದರೂ, ಏಕಾಂತ ಭಕ್ತಿ ಭಗವಂತನ ಸಾಕ್ಷಾತ್ಕಾರಕ್ಕೆ ಉತ್ತಮವಾದದ್ದು. ಜೊತೆಗೆ ಸಾಮೂಹಿಕ ಆರಾಧನೆಯನ್ನೂ ನಮ್ಮ ದೇವಾಲಯಗಳಲ್ಲಿ ನಾವಿಂದು ಕಾಣುತ್ತಿದ್ದೇವೆ.

ತೀರ್ಥಕ್ಷೇತ್ರಗಳಂತೆಯೂ, ಕಲಾಸೌಧಗಳಂತೆಯೂ ಕಂಡುಬರುವ ನೂರಾರು ಪ್ರಮುಖ ದೇವಾಲಯಗಳನ್ನೂ, ಸಾವಿರಾರು ಸಣ್ಣ ಪ್ರಮಾಣದ ಗುಡಿಗಳನ್ನೂ ನಾವಿಂದು ದರ್ಶಿಸಬಹುದಾಗಿದೆ. ನದಿ-ಸಮುದ್ರಗಳ ಕಿನಾರೆಯಲ್ಲಿ, ಬೆಟ್ಟಗುಡ್ಡಗಳ ತಪ್ಪಲಿನಲ್ಲಿ, ಕೋಟೆ-ಕೊತ್ತಲಗಳ ನಡುವೆ ಪ್ರಾಜ್ವಲ ಸಂಪನ್ನವಾಗಿರುವ ಈ ನೆಲೆಗಳನ್ನು ಅಳತೆಗೊಳಪಡುವ ಭೂಭಾಗದ ಹಿನ್ನೆಲೆಯಲ್ಲಿ ಗಮನಿಸಿದಾಗ ಅವುಗಳ ಅಧ್ಯಯನದಿಂದ ಧರ್ಮದೊಂದು ತಳಹದಿ, ಇತಿಹಾಸದೊಂದು ಅಧ್ಯಾಯ ಸೃಷ್ಟಿಯಾಗುತ್ತದೆಂದು ಹೇಳಬಹುದು. ಇದು ಎಲ್ಲ ದೇವಾಲಯಗಳ ಹಿನ್ನೆಲೆಯೂ ಹೌದು.

ನರಸಿಂಹ ದೇವಾಲಯಗಳ ಅಥವಾ ನರಸಿಂಹನ ನೆಲೆಗಳ ಅವಲೋಕನಕ್ಕೊಂದು ಚೌಕಟ್ಟನ್ನು ಅಳವಡಿಸಿಕೊಳ್ಳುವುದು ಅಸಾಧ್ಯದ ಕಾರ್ಯವೆಂದು ಭಾಸವಾಗುವುದಾದರೂ, ಅನುಕೂಲಕ್ಕಾಗಿಯಾದರೂ ಒಂದು ಅನುಕ್ರಮ ಇರುವುದು ಅಗತ್ಯವೆಂಬ ಅಭಿಪ್ರಾಯದಿಂದ ನಮ್ಮ ಬದುಕಿನ ನಡುವೆ ಅತಿ ಮುಖ್ಯವಾದ ಸ್ಥಾನವನ್ನು ಹೊಂದಿರುವ ಈ ಆಲಯಗಳನ್ನು ಆಂಧ್ರದ ದೇವಾಲಯಗಳು, ಕರ್ನಾಟಕದ ನೆಲೆಗಳು, ತಮಿಳುನಾಡಿನ ಗುಡಿಗಳು, ದೇಶದ ಇತರ ಭಾಗದ ಮಂದಿರಗಳು ಎಂಬ ಸ್ಥೂಲವಾದ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ.

ಎಲ್ಲ ದೇವಾಲಯಗಳ ಮೂಲೋದ್ದೇಶವು ಒಂದೇ ಆಗಿರುತ್ತದೆ. ಅಲ್ಲಿ ನಮ್ಮ ಮನಸ್ಸನ್ನು ಪ್ರಚೋದಿಸಿ ನಮಗೊಂದು ಸನ್ಮಾರ್ಗವನ್ನು ನಿರ್ದೇಶಿಸುವ ಭಗವಂತನ ಅರ್ಚನೆ, ಆರಾಧನೆ, ಗುಣ- ಮಹಿಮೆಗಳ ಪಠನ ನಿರಂತರ ಸಾಗುತ್ತಿರುತ್ತದೆ. ಉಚ್ಚ-ನೀಚ ಎಂಬ ಭೇದವಿಲ್ಲದೆ, ಪ್ರಾಂತೀಯ ವೈಮನಸ್ಯಗಳಿಲ್ಲದೆ ನಮ್ಮ ಬುದ್ಧಿ-ಭಾವಗಳನ್ನು ಹಸನಗೊಳಿಸಿಕೊಳ್ಳುವ, ವಿಧಿ-ವಿಧಾನಗಳನ್ನು ರೂಪಿಸಿಕೊಳ್ಳುವ ಸರಿ-ತಪ್ಪುಗಳನ್ನು ಕಂಡುಕೊಳ್ಳುವ ಸಾಧನಾ ಪಥವಿರುತ್ತದೆ. ಇದನ್ನು ಅರಿತು ಮುಂದೆ ಸಾಗಿದಲ್ಲಿ ದೇವಾಲಯದ ದರ್ಶನದ ಉದ್ದೇಶ ಸಾರ್ಥಕವಾದೀತು.

# ಆಂಧ್ರದ ದೇವಾಲಯಗಳು

## ಅಹೋಬಿಲ

NAVA NARASIMHA KSHETRAM,
AHOBILAM

ಅಹೋಬಿಲದಲ್ಲಿರುವ ನವನಾರಸಿಂಹರ ವಿಗ್ರಹಗಳ ಭಂಗಿ.

ಆಂಧ್ರಪ್ರದೇಶದ ಸುಪ್ರಸಿದ್ಧ ನರಸಿಂಹಕ್ಷೇತ್ರವಾಗಿ ವಿರಾಜಿಸುತ್ತಿರುವ ಅಹೋಬಿಲವು ಕರ್ನೂಲು ಜಿಲ್ಲೆಗೆ ಸೇರಿದೆ. ಪವಿತ್ರವಾದ ಪುಣ್ಯಕ್ಷೇತ್ರವೂ, ಹೆಸರುವಾಸಿಯಾದ ಗಿರಿಧಾಮವೂ ಆದ ಈ ಸ್ಥಳವನ್ನು ಯಥೋಚಿತವಾದ ವಾಹನಸೌಕರ್ಯವನ್ನು ಹೊಂದಿ ಸಂದರ್ಶಿಸ ಬಹುದಾಗಿದೆ. ಸುತ್ತಲೂ ದಟ್ಟವಾದ ಅರಣ್ಯವಿದ್ದು ನಡುವೆ ಬೆಟ್ಟಗಳ ಸುಂದರ ಪರಿಸರದಲ್ಲಿ ಚಿಕ್ಕ ಅಹೋಬಿಲ ವಿದೆ. ದೊಡ್ಡ ಅಹೋಬಿಲವು ಇಲ್ಲಿಗೆ ಸುಮಾರು ಹತ್ತು ಕಿ.ಮೀ. ದೂರದಲ್ಲಿದೆ. ತೆಲುಗು ನಾಡಿನಲ್ಲಿದ್ದು ಪ್ರಸಿದ್ಧವಾದ ಶ್ರೀವೈಷ್ಣವ ಮಠವನ್ನು ಹೊಂದಿರುವುದು ಅಹೋಬಿಲದ ಹಿರಿಮೆಗೆ ಸಾಕ್ಷಿಯಾಗಿದೆ. ಶ್ರೀವೈಷ್ಣವ ಪರಂಪರೆಗೆ ಸೇರಿದ ಆಳ್ವಾರರು, ಆಚಾರ್ಯರಿಗೆ ಇಲ್ಲಿನ ಸ್ವಾಮಿಯು ಆರಾಧ್ಯದೈವವಾಗಿದ್ದಾನೆ. ಅಹೋಬಿಲದ ಇತಿಹಾಸವು ಕುತೂಹಲ ಆಸಕ್ತಿಗಳನ್ನು ಕೆಣಕುವಂತಿದ್ದರೆ, ಇಲ್ಲಿನ ಪುರಾಣಪರಂಪರೆಯು ಬೆರಗುಗೊಳಿಸು ವಂತಿದೆ. ಈ ಪ್ರದೇಶದ ಹವಾಗುಣವು ಅಶಕ್ತರು, ದುರ್ಬಲರಲ್ಲಿಯೂ ಹೊಸತನವನ್ನುಂಟು ಮಾಡುತ್ತದೆ.

ಪ್ರಾಕೃತಿಕ ಕೊಡುಗೆಯಂತಿರುವ 'ನಲ್ಲಮಲಕೊಂಡ' ಎಂಬುದು ಕರ್ನೂಲು ಜಿಲ್ಲೆಯಿಂದ ಚಿತ್ತೂರು ಜಿಲ್ಲೆಯವರೆಗೆ ಹರಡಿರುವ ಪರ್ವತಶ್ರೇಣಿಯಾಗಿದ್ದು ಪುರಾಣಕತೆಯ ಆಧಾರದಂತೆ ಇದು ಆದಿಶೇಷನ ರೂಪಕ್ಕೆ ಸಾಕ್ಷಿಯಾಗಿದೆ. ಇಂತಹ ದಿವ್ಯದೇಹಿಯಾದ ಆದಿಶೇಷನ ಶಿರಸ್ಸನ್ನು ಶ್ರೀವೆಂಕಟೇಶ್ವರನೆಂದೂ, ನಡುವಿನ ಭಾಗವನ್ನು ಅಹೋಬಿಲೇಶನೆಂದೂ, ಇದರ ಬಾಲದ ಭಾಗವು ಶ್ರೀಶೈಲ ಮಲ್ಲಿಕಾರ್ಜುನನೆಂದೂ ಕರೆಯುತ್ತಾರೆ.

ಆದಿಶೇಷನ ನಡುವಿನ ಭಾಗದಂತಿರುವ ಈ ಪ್ರದೇಶವು ಶ್ರೀವೈಷ್ಣವ ಕ್ಷೇತ್ರವಾದರೂ, ಇದರ ಪ್ರಸಿದ್ಧಿಯು ಎಲ್ಲ ಮತಧರ್ಮಗಳನ್ನೂ ಆವರಿಸಿಕೊಂಡಿರುವುದಾಗಿದೆ. ಈ ಕ್ಷೇತ್ರವನ್ನು ಆಳ್ವಾರರು-ಆಚಾರ್ಯರು, ದಾಸ ಶ್ರೇಷ್ಠರೆಲ್ಲರೂ ಕೀರ್ತಿಸಿ ಸ್ತುತಿಸಿದ್ದಾರೆ. ಇದು ಭಕ್ತಿಯ ನೆಲೆಯನ್ನು ಬಿತ್ತರಿಸುತ್ತಿರುವ ಪವಿತ್ರಕ್ಷೇತ್ರವಾಗಿದೆ. ತಿರುಮಂಗೈ ಆಳ್ವಾರರ ಪಾಶುರಗಳಲ್ಲಿ ಇಲ್ಲಿನ ಪ್ರಕೃತಿಯನ್ನು ರಮ್ಯವಾಗಿ ಬಣ್ಣಿಸಲಾಗಿದೆ. ಇಲ್ಲಿ ನೆಲೆಸಿರುವ ನರಸಿಂಹನ ಉಗ್ರ-ವ್ಯಗ್ರ, ಸ್ವಭಾವಗಳ ಚಿತ್ರವನ್ನು ಬಿಡಿಸಲಾಗಿದೆ. ದಾಸವರೇಣ್ಯರಾದ ಪುರಂದರರು, ತೆಲುಗು ಸಂಕೀರ್ತನಕಾರರಾದ ಅನ್ನಮಾಚಾರ್ಯರು ಇಲ್ಲಿರುವ ಭಗವಂತನ ಗುಣಮಹಿಮೆಗಳನ್ನು ಕೊಂಡಾಡಿದ್ದಾರೆ. ಪುರಾಣ-ಇತಿಹಾಸಗಳ ಉಜ್ವಲವಾದ ಪರಂಪರೆ ಯನ್ನು ಪ್ರತಿಬಿಂಬಿಸುತ್ತ ಅಹೋಬಿಲವು ಸಾಗಿಬಂದಿರುವ ಹಾದಿಯು ಅದ್ವಿತೀಯವಾದದ್ದು. ಪ್ರಹ್ಲಾದವರದ ನರಸಿಂಹನ ಆರಾಧನೆಯು ಪ್ರಧಾನವಾಗಿದ್ದರೂ ಸುಮಾರು ಆರೇಳು ಮೈಲಿಗಳ ಪರಿಸರದಲ್ಲಿ ನವನಾರಸಿಂಹರು ಪ್ರಸಿದ್ಧರಾಗಿದ್ದಾರೆ.

ಪರ್ವತಭಾಗವನ್ನು ಪ್ರವೇಶಿಸುತ್ತಿದ್ದಂತೆ ಪ್ರಹ್ಲಾದವರದ ನರಸಿಂಹ ಸ್ವಾಮಿಯ ದೇವಾಲಯವು ಕಣ್ಣಿಗೆ ಬೀಳುತ್ತದೆ. ಈ ಆಲಯವು ಮೂರು ಪ್ರಾಕಾರಗಳಿಂದ ಕೂಡಿದೆ. ಮುಖ್ಯ ಆರಾಧನಾಸ್ಥಳವು ಮಧ್ಯಭಾಗದಲ್ಲಿದೆ. ದೇವಾಲಯದ ಪ್ರಾಚೀನತೆಗೆ ಸಂಬಂಧಿಸಿದಂತೆ ಅನೇಕ ಶಾಸನಗಳು ದೊರೆಯುತ್ತವೆ. ಸುಮಾರು ಒಂದು ಸಾವಿರ ವರ್ಷಗಳ ಇತಿಹಾಸವನ್ನು ಆಲಯವು ಹೊಂದಿದೆ. ಅಹೋಬಿಲದ ಮೂಲವಿಗ್ರಹವನ್ನು ಪಶ್ಚಿಮಚಾಲುಕ್ಯ ರಾಜನಾದ

ವಿಕ್ರಮಾದಿತ್ಯನು (ಕಾಲ ೧೦೭೬-೧೧೦೬) ಪೂಜಿಸಿದಂತೆ ತಿಳಿದುಬರುತ್ತದೆ. ಇದಕ್ಕೆ ಮುಂಚಿತವಾಗಿಯೇ ಇಲ್ಲಿ ವಿಗ್ರಹ ಪ್ರತಿಷ್ಠೆಯಾಗಿರಬೇಕು. ಕಾಕತೀಯರ ದೊರೆಯಾದ ಮಹಾ ಶಕ್ತಿಶಾಲಿಯೆಂದು ಹೆಸರು ಪಡೆದ ಪ್ರತಾಪರುದ್ರದೇವನು ಈ ಸ್ವಾಮಿಗೆ ಬಂಗಾರದ ಉತ್ಸವ ವಿಗ್ರಹಗಳನ್ನು ತನ್ನ ಸೇವೆಯ ಕುರುಹಾಗಿ ಸಮರ್ಪಿಸಿರುತ್ತಾನೆ. ಶ್ರೀಶೈಲದ ಚನ್ನಮಲ್ಲಿಕಾರ್ಜುನನ ದರ್ಶನ ಪಡೆದು ಮರಳುವ ದಾರಿಯಲ್ಲಿ ರುದ್ರವರಂ ಪಟ್ಟಣದಲ್ಲಿ ತಂಗಿದ್ದ ಸಮಯದಲ್ಲಿ ಆಲಯವನ್ನು ಸಂದರ್ಶಿಸಿದ್ದಾನೆ. ದೇವರ ಸೇವಾಕೈಂಕರ್ಯಗಳಿಗೆ ಬೆಲೆಬಾಳುವ ವಜ್ರದ ಕಂಠೀಹಾರವನ್ನು ಮತ್ತು ಇತರ ಆಭರಣಗಳನ್ನು ಸಮರ್ಪಿಸಿರುತ್ತಾನೆ.

ಅಹೋಬಿಲದ ದೇವಾಲಯವು ವಿಸ್ತಾರವಾದದ್ದು. ಇದು ವಿಜಯನಗರ ಶೈಲಿಯನ್ನು ಹೋಲುತ್ತದೆ. ಶಿಲ್ಪವೈಭವವನ್ನು ವರ್ಣಿಸುವಂತಿರುವ ವಿವಿಧಾಕಾರಗಳಲ್ಲಿ ಕೆತ್ತಲಾಗಿರುವ ಕಂಬಗಳು ವೈವಿಧ್ಯಕ್ಕೆ ಹೆಸರುವಾಸಿಯಾಗಿದೆ. ಇಲ್ಲಿನ ಮುಖಮಂಟಪದ ವಿಶಿಷ್ಟತೆಗೆ ಇದು ನಿದರ್ಶನವಾಗಿದೆ. ಇಲ್ಲಿನ ನವರಂಗ ಮತ್ತು ಸುಕನಾಸಿಗಳು ವಿಸ್ತಾರವಾಗಿವೆ. ಭಕ್ತರ ಸೇವಾಕಾರ್ಯಗಳಿಗೆ ಇದು ಅನುಕೂಲವೊದಗಿಸುತ್ತದೆ. ಗರ್ಭಗೃಹದಲ್ಲಿರುವ ನರಸಿಂಹಸ್ವಾಮಿಯು ಅತ್ಯಂತ ಮನೋಹರವಾದ ರೂಪದಿಂದ ಕಂಗೊಳಿಸುತ್ತಿದ್ದಾನೆ. ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಪ್ರಸನ್ನವದನನಾಗಿ ವಿರಾಜಿಸುತ್ತಿದ್ದಾನೆ. ಆರಾಧಕರಿಗೆ ಆನಂದವನ್ನುಂಟು ಮಾಡುತ್ತಿರುವುದು ಮಾತ್ರವಲ್ಲದೆ. ಅವರ ಮನಸ್ಸಿನಲ್ಲಿ ಹುದುಗಿರುವ ಪಾಪ ವಿಶೇಷಗಳನ್ನು ಹೋಗಲಾಡಿಸುತ್ತಿದ್ದಾನೆ. ಇಲ್ಲಿನ ಮೂಲವರರನ್ನು ಶಿಲ್ಪಶಾಸ್ತ್ರದ ದೃಷ್ಟಿಯಿಂದಲೂ ವಿಶಿಷ್ಟವಾಗಿ ಗುರುತಿಸಲಾಗಿದೆ. ಹೀಗಾಗಿಯೆ ಈ ಸ್ವಾಮಿಯು ಆಚಾರ್ಯ ಪುರುಷರ, ಸಾಧು-ಸಂತರ, ಅಸಂಖ್ಯ ಆರಾಧಕರ ಮನವನ್ನಾಕರ್ಷಿಸಿರುವುದಾಗಿದೆ.

## ನವನಾರಸಿಂಹ

ಅಹೋಬಿಲದ ಅರಣ್ಯಪ್ರದೇಶವು ತುಂಬ ವಿಸ್ತಾರವಾಗಿದೆ. ಇಲ್ಲಿನ ಬೆಟ್ಟಗಳು ವಿಶಾಲವಾಗಿ ಹರಡಿವೆ. ದೊಡ್ಡ ಅಹೋಬಿಲವೆಂದು ಕರೆಯುತ್ತಿರುವ ಪ್ರದೇಶವು ಚಿಕ್ಕ ಅಹೋಬಲಕ್ಕೆ ಸುಮಾರು ಆರು ಮೈಲಿಗಳ ದೂರದಲ್ಲಿದೆ. ಸಮುದ್ರಮಟ್ಟದಿಂದ ಎರಡು ಸಾವಿರದ ಎಂಟುನೂರು ಅಡಿ ಎತ್ತರದಲ್ಲಿದೆ. ಈ ಪ್ರದೇಶದಲ್ಲಿ ಹೆಸರುವಾಸಿಯಾದ ವೇದಾದ್ರಿ-ಗರುಡಾದ್ರಿ ಬೆಟ್ಟಗಳ ನಡುವೆ ಪವಿತ್ರವಾದ ಭವನಾಶಿನಿ ನದಿಯು ಉಗಮವಾಗುತ್ತದೆ. ಇದು ಎರಡು ಕವಲಾಗಿ ಸಾಗಿ ಒಂದು ಕುಮುದ್ವತಿ ನದಿಗೂ ಮತ್ತೊಂದು ಕೃಷ್ಣಾ ನದಿಗೂ ಸೇರುತ್ತದೆ. ಇಲ್ಲಿಯೇ ಗೋಬಿಲ ಭಾರದ್ವಾಜರೆಂಬ ಮುನಿಗಳು ತಪಸ್ಸನ್ನಾಚರಿಸಿರುತ್ತಾರೆ. ಈ ಪ್ರಾಂತ್ಯದಲ್ಲಿ ಕರಂಡ ನರಸಿಂಹ, ಯೋಗಾನಂದ ನರಸಿಂಹಾವತಾರಗಳು ಪ್ರಚಾರದಲ್ಲಿದೆ. ದಕ್ಷಿಣದ ಪರ್ವತದ ಮೇಲೆ ಉಗ್ರನರಸಿಂಹ ಕ್ಷೇತ್ರವಿದ್ದರೆ ಸಮೀಪದಲ್ಲಿ ಗುಹಾನರಸಿಂಹ ದೇವಾಲಯವಿದೆ. ಈ ದೇವಾಲಯಗಳಿಗೆ ನೇರವಾಗಿ ಒಂದು ಧ್ವಜಸ್ತಂಭವಿದೆ. ರಾಕ್ಷಸನಾದ ಹಿರಣ್ಯಕಶಿಪು ಇದನ್ನು ತನ್ನ ಕಾಲಿನಿಂದಒದ್ದನೆಂದೂ ಇದರಿಂದಲೇ ಶ್ರೀಹರಿಯು ನರಸಿಂಹಾವತಾರವನ್ನು ತಾಳಿ ಹಿರಣ್ಯಕಶಿಪುವನ್ನು ಸಂಹರಿಸಿದನೆಂದೂ ಪ್ರತೀತಿಯಿದೆ.

ಗುಹಾನರಸಿಂಹ ದೇವಾಲಯದಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿ ಕ್ರೋಧನರಸಿಂಹ ದೇವಾಲಯವಿದೆ. ಇಲ್ಲಿಂದ ಮೂರು ಕಿ.ಮೀ. ದೂರದಲ್ಲಿ ಮಾಲೋಲ ನರಸಿಂಹ ದೇವಾಲಯವಿದೆ. ಇಲ್ಲಿ ಸ್ವಾಮಿಯು ಲಕ್ಷ್ಮಿಯಿಂದೊಡಗೂಡಿ ಶಾಂತಚಿತ್ತನಾಗಿ ದ್ದಾನೆ. ಇದಲ್ಲದೆ ಲಕ್ಷ್ಮೀನರಸಿಂಹ, ಛತ್ರವಟ ನರಸಿಂಹ, ಗರುಡನರಸಿಂಹ, ಜ್ವಾಲಾ ನರಸಿಂಹರು ಇಲ್ಲಿ ನೆಲೆಸಿದ್ದಾರೆ. ಇಂತಹ ಪೂಜಾಸ್ಥಳಗಳನ್ನು ಅವತಾರ ಮಹಿಮೆಯನ್ನು ಸಾರುವ ನರಸಿಂಹ ಆಲಯಗಳನ್ನು ಇಲ್ಲಿ ದರ್ಶಿಸಬಹುದಾಗಿದೆ. ಇದಲ್ಲದೆ ಅಹೋಬಿಲದ ಸುತ್ತಲೂ ಕೆಲವು ಚಾರಿತ್ರಿಕವಾದ ಸ್ಥಳಗಳಿವೆ.

ಹಿರಣ್ಯಕಶಿಪುವಿನ ವಧೆಯ ನಂತರ ಸ್ವಾಮಿಯು ತನ್ನ ಕೈಗಳನ್ನು ರಕ್ತದ ಕಲೆಗಳಿಂದ ನಿವಾರಿಸಿಕೊಳ್ಳಲು ಹಸ್ತಪ್ರಕ್ಷಾಳನ ಮಾಡಿಕೊಂಡ ಕೊಳವೊಂದನ್ನು ಇಲ್ಲಿ ನೋಡಬಹುದಾಗಿದೆ. ಇದಕ್ಕೆ ರಕ್ತಕುಂಡವೆಂಬ ಹೆಸರಿದೆ. ಇಲ್ಲಿನ ನೀರು ನೋಡುವುದಕ್ಕೆ ಸಾಧಾರಣಕ್ಕಿಂತ ಸ್ವಲ್ಪ ಕೆಂಪಾದ ಕಾರಣ ಮತ್ತು ನೋಡಿದವರ ಕಣ್ಣಿಗೆ ಭೀತಿಯನ್ನುಂಟು ಮಾಡುವಂತಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದು ಇದರ ಮಹತ್ತ್ವವಾಗಿದೆ 'ರಕ್ತಕುಂಡ'ದಿಂದ ಸ್ವಲ್ಪದೂರದಲ್ಲಿ ಮತ್ತೊಂದು ಪುಷ್ಕರಣಿಯಿದ್ದು ಇದನ್ನು 'ಸೂಳೆ ಪುಷ್ಕರಿಣಿ'ಯೆಂದು ಕರೆಯುವುದು ರೂಢಿಯಲ್ಲಿದೆ. ಆದರೆ ಇದಕ್ಕೆ ಈ ಹೆಸರು ಬರಲು ಕಾರಣವೇನೆಂಬುದು ಗೊತ್ತಾಗುವುದಿಲ್ಲ.

ಅಹೋಬಿಲ ದೇವಾಲಯಕ್ಕೆ ಪ್ರಾಚೀನ ಗುರುಪರಂಪರೆಯಿರುವುದು ಗಮನಾರ್ಹವಾದದ್ದು. ಕ್ರಿ.ಶ. ೧೩೭೮ರಲ್ಲಿ ಜನಿಸಿದ ಆದಿವಣ್ ಶಠಗೋಪ ಜೀಯರ್ ಅವರು ಈ ಸ್ಥಳದಲ್ಲಿ ಮಠವನ್ನು ನಿರ್ಮಿಸಿರುತ್ತಾರೆ. ಮೇಲುಕೋಟೆ ದೇವಗಿರಿ ಸಮೀಪದಲ್ಲಿರುವ ತಿರುನಾರಾಯಣಪುರದ ಶ್ರೇಷ್ಠ ಭಕ್ತರಾದ ಶ್ರೀನಿವಾಸಾಚಾರ್ಯರು ಕಂಚಿಯಲ್ಲಿರಬೇಕಾದರೆ ನರಸಿಂಹಸ್ವಾಮಿಯು ಇವರ ಕನಸಿನಲ್ಲಿ ಕಾಣಿಸಿಕೊಂಡು ಅಹೋಬಿಲಕ್ಕೆ ಹೋಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಲು ನಿರ್ದೇಶಿಸುತ್ತಾರೆ. ಅಹೋಬಿಲದ ದೇವಾಲಯದ ಧರ್ಮದರ್ಶಿಗಳಾದ ಮುಕುಂದರಾಯರ ಕನಸಿನಲ್ಲಿ ಕಾಣಿಸಿಕೊಂಡು ಆಚಾರ್ಯರು ಆಗಮಿಸುವ ಸಂಗತಿಯನ್ನು ಭಗವಂತನು ತಿಳಿಸಿದ ಪ್ರಕಾರವಾಗಿ ಶ್ರೀನಿವಾಸಾಚಾರ್ಯರಿಗೆ ಸನ್ಯಾಸ ದೀಕ್ಷೆಯು ಲಭಿಸಿತು. ಇವರನ್ನು ಶಠಕೋಪ ಯತಿಗಳೆಂದು ಕರೆಯಲಾಯಿತು. ಇವರ ನಂತರ ಶ್ರೀಪೀಠವನ್ನೇರಿದ ಪೀಠಾಧಿಪತಿಗಳಿಗೂ ಈ ಹೆಸರೇ ಉಳಿಯಿತು.

ಅಹೋಬಿಲ ದೇವಾಲಯಕ್ಕೆ ಇಂದಿಗೂ ಸಹ ಶ್ರೀವೈಷ್ಣವ ದೇವಾಲಯಗಳ ಪರಂಪರೆಯಲ್ಲಿ ಉನ್ನತವಾದ ಸ್ಥಾನವಿದೆ. ದಕ್ಷಿಣಭಾರತದಲ್ಲಿ ಶ್ರೀರಂಗ ಕ್ಷೇತ್ರಕ್ಕಿರುವ ಮರ್ಯಾದೆ ಗೌರವಗಳು ಅಹೋಬಿಲಕ್ಕೂ ದೊರೆತಿವೆ. ಇಲ್ಲಿನ ದೇವಾಲಯ ಮತ್ತು ಮಠಗಳು ಉನ್ನತಿಯತ್ತ ಸಾಗಿವೆ. ಪ್ರಾಚೀನಮಠದ ಸಂಪ್ರದಾಯಕ್ಕೆ ಸೇರಿರುವ ಅಹೋಬಿಲವು ಜನಸಾಮಾನ್ಯರಿಗೆ ಅಗತ್ಯವಾದ ಸೌಕರ್ಯಗಳನ್ನೊದಗಿಸುವ ಮೂಲಕ ಅಭಿವೃದ್ಧಿಯತ್ತ ನಡೆದಿದೆ.

# ಸಿಂಹಾಚಲ

*ಶ್ರೀರಮಾಕುಚಾಗ್ರ ಭಾಸಿ ಕುಂಕುಮಾಂಕಿತೋರಸಂ*
*ಪಾವನಾಂಘ್ರಿಸಾರಸಂ ಸದಾ ದಯಾಸುಧಾರಸಂ*
*ಕುಂದಶುಭ್ರಶಾರದಾರವಿಂದ ಚಂದ್ರಸುಂದರಂ*
*ಸಿಂಹಶೈಲಮಂದಿರಂ ನೃಸಿಂಹದೇವಮಾಶ್ರಯೇ*

'ಶ್ರೀಸಿಂಹಾದ್ರಿ ನೃಸಿಂಹಾಷ್ಟಕ'ದಲ್ಲಿ ಬರುವ ಮೊದಲನೇ ಪದ್ಯವಾಗಿರುವ ಇದರಲ್ಲಿ ನರಸಿಂಹನ ಪಾವನವಾದ ಅಂಘ್ರಿಗಳಿಗೆ ವಂದಿಸಿ ದಯಾಳುವಾದ ಆತನಲ್ಲಿ ಆಶ್ರಯ ಹೊಂದಲಾಗಿರುವ ಭಾವನೆಯಿದೆ. ಇದರೊಂದಿಗೆ ಆತನ ನಿರ್ಮಲವಾದ ಗುಣಗಳನ್ನು ಕೀರ್ತಿಸಲಾಗಿದೆ. ಸಿಂಹಶೈಲವಾಸಿಯಾದ ಆತನ ಅರವಿಂದವದನವನ್ನು ಸ್ತುತಿಸಲಾಗಿದೆ. ಅಂದಿನ ಈ ಸಿಂಹಶೈಲವೇ ಇಂದು ಸಿಂಹಾಚಲವಾಗಿದೆ.

ಆಂಧ್ರಪ್ರದೇಶದ ಕಡಲತೀರದಲ್ಲಿರುವ ವಿಶಾಖಪಟ್ಟಣಕ್ಕೆ ಹನ್ನೆರಡು ಕಿ.ಮೀ. ದೂರದಲ್ಲಿರುವ ಪವಿತ್ರಕ್ಷೇತ್ರ ಸಿಂಹಾಚಲ. ಇಲ್ಲಿರುವ ಗಿರಿಶ್ರೇಣಿಯು ಪೂರ್ವ ಪಶ್ಚಿಮ ಅಭಿಮುಖವಾಗಿ ಸುಮಾರು ಹತ್ತು ಕಿ.ಮೀ. ದೂರದವರೆಗೆ ವ್ಯಾಪಿಸಿಕೊಂಡಿದೆ. ಈ ಪರ್ವತಶ್ರೇಣಿಗೆ ರತ್ನಾಕರನು ತನ್ನ ಸಾಷ್ಟಾಂಗ ನಮಸ್ಕಾರವನ್ನು ಸಲ್ಲಿಸುತ್ತಿರುವನೇನೊ ಎಂಬಂತಿರುವ ಕಡಲಿನ ದೃಶ್ಯವು ಮನೋಹರವಾದದ್ದು. ಬಂಗಾಲ ಸಾಗರದ ಅಲೆಗಳು ಸಿಂಹಾಚಲದ ಬೆಟ್ಟವನ್ನು ತಾಕುತ್ತ ಪಾವನಗೊಳಿಸುತ್ತಿವೆ. ಈ ರೀತಿಯ ಪ್ರಕೃತಿ ಸಂಪತ್ತಿನಿಂದ ಕೂಡಿದ ಉನ್ನತ ಸ್ಥಳದಲ್ಲಿ ಪರ್ವತೋನ್ನತ ಭಾಗದಲ್ಲಿ ಶ್ರೀ ವರಾಹ ನರಸಿಂಹಸ್ವಾಮಿ ದೇವಾಲಯವು ತನ್ನ ಅಪೂರ್ವ ಶಿಲ್ಪಸಂಪತ್ತಿನಿಂದ ಕಂಗೊಳಿಸುತ್ತಿದೆ. ಧಾರ್ಮಿಕ ಸಂಪತ್ತಾಗಿದೆ.

ಆಂಧ್ರಪ್ರದೇಶದ ಇತಿಹಾಸವನ್ನು ಅಭ್ಯಾಸ ಮಾಡಿದವರಿಗೆ ಬೌದ್ಧ-ಶೈವ- ವೈಷ್ಣವ ಧರ್ಮಗಳೆಲ್ಲವೂ ಒಂದೊಂದು ಕಾಲಕ್ಕೆ ಒಂದನ್ನೊಂದು ಬುಡಮೇಲುಗೊಳಿಸಿ ಪರಿವರ್ತನೆ ಗೊಂಡು ಸಮಾನ ಪ್ರಾಮುಖ್ಯತೆಯಿಂದ ಬೆಳಗಿರುವುದು ಕಾಣುತ್ತದೆ. ಮತಧರ್ಮಗಳ ಚರಿತ್ರೆಯನ್ನು ಗಮನಿಸಿದವರಿಗೆ ಮಾನವ ಜಾತಿಯ ಮನಃಪರಿಣಾಮಗಳು ಸಾಕ್ಷಾತ್ಕಾರಗೊಳ್ಳು ವಂತಿವೆ. ದೇವಾಲಯಗಳು, ಅದಕ್ಕೆ ಸಂಬಂಧಿಸಿದ ಶಿಲ್ಪಕಲಾ ನಿರ್ಮಾಣಗಳು ಮಾರ್ಪಾಡು ಗೊಂಡಿರುವುದೂ ಗೋಚರವಾಗುತ್ತದೆ.

ಆಂಧ್ರಪ್ರದೇಶದಲ್ಲಿ ಅನೇಕಕಡೆ ಬೌದ್ಧಚೈತ್ಯಾಲಯಗಳು, ಆಲಯ ಸ್ತಂಭಗಳು, ಉನ್ನತ ಶಿವಲಿಂಗಗಳಿಂದ ಕೂಡಿದ ದೇವಾಲಯಗಳಿವೆ. ಶೈವರ ಕುಮಾರಸ್ವಾಮಿ, ವೈಷ್ಣವರ ವಿಷ್ಣುರೂಪಗಳಲ್ಲದೆ ಶಾಕ್ತರ ಶಕ್ತಿರೂಪಗಳು ಇಲ್ಲಿ ಕಂಡುಬರುತ್ತವೆ. ಶಿವಲಿಂಗಗಳು ವಿಷ್ಣುವಿನ ನಾಮಧೇಯವನ್ನು ಧರಿಸಿ ನಿಂತಿರುವುದು ಕಾಣುತ್ತವೆ. ಈ ರೀತಿಯ ವಿಸ್ಮಯಕರ ವಾದ ಬದಲಾವಣೆಗೆ ಬದ್ಧವಾಗಿ ಸಿಂಹಾಚಲವು ಶೋಭಿಸುತ್ತಿದೆ. ಈ ಕ್ಷೇತ್ರದ ಪೂರ್ವೇತಿ

ಹಾಸಗಳು ಪ್ರಕೃತಿವೈಚಿತ್ರ್ಯದಿಂದ ಮಾತ್ರವಲ್ಲದೆ ಕೌತುಕದ ವಿಚಾರಗಳಿಂದ ಕೂಡಿದ ಸಂಗತಿಗಳನ್ನು ಪರಿಶೀಲಿಸಬಹುದಾಗಿದೆ.

ಸಿಂಹಾಚಲವನ್ನು ಇಂದು ಪ್ರಸಿದ್ಧವಾದ ಶ್ರೀವೈಷ್ಣವಕ್ಷೇತ್ರವಾಗಿ ದರ್ಶಿಸುತ್ತಿದ್ದೇವೆ. ಇದಕ್ಕೆ ಕಾರಣವೆಂದರೆ ಇಲ್ಲಿರುವ ವರಾಹ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ. ಇದರಿಂದಾಗಿಯೇ ಇಲ್ಲಿರುವ ಬೆಟ್ಟಕ್ಕೂ ಸಿಂಹಾಚಲವೆಂಬ ಹೆಸರು ಬಂದಿದೆ. ಸಾಮಾನ್ಯವಾಗಿ ನರಸಿಂಹಸ್ವಾಮಿ ದೇವಾಲಯಗಳು ಬೆಟ್ಟದ ಮೇಲೆ ಇಲ್ಲವೆ ಆ ರೀತಿಯ ಎತ್ತರವಾದ ಸ್ಥಳದಲ್ಲಿರುವುದಾಗಿದೆ. ಅಹೋಬಿಲ, ತಿರುನಾರಾಯಣಪುರ, ಮೇಲುಕೋಟೆ, ಮಂಗಳಗಿರಿ, ಯಾದಗಿರಿಗುಟ್ಟ, ಶೋಲಂಗಿರಿ ಮುಂತಾದ ಕಡೆಗಳಲ್ಲೆಲ್ಲ ಈ ಸ್ವಾಮಿಯ ದೇವಾಲಯವಿರುವುದು ಬೆಟ್ಟದ ಮೇಲೆಯೇ ಎಂಬುದು ಗಮನಾರ್ಹ.

ಸಿಂಹಾಚಲವು ಸುತ್ತಲಿನ ಬೆಟ್ಟಗುಡ್ಡಗಳಿಂದ ವಿಧವಿಧವಾದ ಫಲಪುಷ್ಪಾದಿ ವೃಕ್ಷಗಳಿಂದ ಕೂಡಿದ್ದು ರಮ್ಯವಾದ ತಾಣವಾಗಿದೆ. ಇಲ್ಲಿನ ದೃಶ್ಯವೈವಿಧ್ಯಗಳು ಕಣ್ಣಿಗೆ ಆನಂದವನ್ನುಂಟು ಮಾಡುವಂತಿದೆ. ಇಲ್ಲಿರುವ ಬೆಟ್ಟವು ಸಮುದ್ರಮಟ್ಟದಿಂದ ಎಂಟುನೂರು ಅಡಿ ಎತ್ತರದಲ್ಲಿದೆ ಬೆಟ್ಟವನ್ನೇರಲು ಸುಮಾರು ಒಂದು ಸಾವಿರ ಮೆಟ್ಟಲುಗಳನ್ನು ನಿರ್ಮಿಸಿದ್ದಾರೆ. ಇಲ್ಲಿಯ ಸೋಪಾನಮಾರ್ಗವು ಸುಲಭವಾದದ್ದು. ಬೆಟ್ಟದ ತಪ್ಪಲಿನಲ್ಲಿ ಸುಂದರ ಗುಲಾಬಿತೋಟವಿದೆ. ಮೆಟ್ಟಲುಗಳ ಎರಡು ಬದಿಯಲ್ಲಿಯೂ ಸಾಲುಮರಗಳಿದ್ದು ಇವು ಯಾತ್ರಿಕರಿಗೆ ನೆರಳನ್ನೂ ಗಾಳಿಯನ್ನೂ ಒದಗಿಸುತ್ತವೆ.

ಬೆಟ್ಟದ ಶಿಖರದಲ್ಲಿರುವ ಮುಖ್ಯದೇಗುಲವನ್ನು ದರ್ಶಿಸುವುದಕ್ಕೆ ಮುಂಚಿತವಾಗಿ ಪ್ರಾಣದೇವರ ದರ್ಶನವನ್ನು ಪಡೆದು ಮುಂದೆ ಸಾಗಬಹುದು. ಸಾಧಾರಣವಾದ ಶೈಲಿಯಲ್ಲಿ ಕಟ್ಟಲಾದ ಈ ದೇವಾಲಯವನ್ನು ದಾಟಿ ಮುಂದೆ ನಡೆದರೆ ಮಾಧವಧಾರ ಎಂಬ ಕಾಲುಹಾದಿಯಿದೆ. ದೇವಾಲಯವನ್ನು ಹಳೆಯಕೋಟೆಯಿಂದು ಅವಶೇಷವಾಗಿ ಉಳಿದಿರುವ ದ್ವಾರದ ಮೂಲಕ ಪ್ರವೇಶಿಸಬೇಕು. ಇಲ್ಲಿರುವ ದ್ವಾರವು ಬಲಿಷ್ಠವಾಗಿದೆ. ಇಲ್ಲಿಯೇ ಇರುವ ನೀರಿನ ಹೊಂಡವು ಯಾತ್ರಿಕರಿಗೆ ಸ್ನಾನಾದಿಗಳಿಗೆ ಅನುಕೂಲಕರವಾಗಿದೆ.

ಸಿಂಹಾಚಲದ ಬೆಟ್ಟವನ್ನೇರಿ ಸಾಗುವಾಗ ಮಾರ್ಗಮಧ್ಯದಲ್ಲಿ ಕಾಣುವ ಶಿಲ್ಪಗಳು ವಿಷ್ಣುಪುರಾಣದ ಘಟನೆಗಳನ್ನು ಪ್ರತಿಬಿಂಬಿಸುವಂತಿವೆ. ಆಂಜನೇಯ ದೇವಾಲಯದಿಂದ ಮುಂದಕ್ಕೆ ದಾರಿಯು ಸ್ವಲ್ಪ ಕಿರಿದಾದದ್ದು. ಆದರೆ ಇಲ್ಲಿನ ರಮಣೀಯವಾದ ಸೌಂದರ್ಯವು ಮನಸ್ಸಿಗೆ ನೆಮ್ಮದಿಯನ್ನು ನೀಡುವಂತಿದೆ.

## ಪುರಾಣದ ಸಂಬಂಧ

ಪ್ರಹ್ಲಾದನನ್ನು ಅವನ ತಂದೆಯಾದ ಹಿರಣ್ಯಕಶ್ಯಪ ಒಂದು ದೊಡ್ಡ ಬಂಡೆಗೆ ಕಟ್ಟಿಹಾಕಿಸಿ ಸಮುದ್ರದಲ್ಲೆಸೆದ ಘಟನೆಯನ್ನು ಪುರಾಣದಲ್ಲಿ ವಿವರಿಸಲಾಗಿದೆ. ಮುನ್ನೀರಿ

ಎಸೆದದ್ದು ಮಾತ್ರವಲ್ಲದೆ ಅವನಿಗೆ ಮೇಲೆ ಬರಲಾಗದಂತೆ ದೊಡ್ಡ ದೊಡ್ಡ ಹೆಬ್ಬಂಡೆಗಳನ್ನು ಇಡಲಾಯಿತೆಂದು ಈ ಸಂದರ್ಭದಲ್ಲಿ ವಿವರಿಸಲಾಗಿದೆ. ಆದರೆ ಪ್ರಹ್ಲಾದನು ಭಗವಂತನಿಂದ ಪರಿಪಾಲಿತನಾಗಿ ಸಮುದ್ರರಾಜನಿಂದ ಸಂರಕ್ಷಿಸಲ್ಪಟ್ಟಿದ್ದು ವೇದ್ಯವಾಗುತ್ತದೆ. ಪ್ರಹ್ಲಾದನು ಸಮುದ್ರದಿಂದ ಪಾರಾಗಿಬಂದ ಘಟನೆಗೂ ಮತ್ತು ಸಿಂಹಾಚಲದ ಬೆಟ್ಟಕ್ಕೂ ಸಂಬಂಧವನ್ನು ಕಲ್ಪಿಸಲಾಗುತ್ತದೆ. ಆತನು ಇಲ್ಲಿನ 'ಹಗಲುದ್ವಾರ'ದಿಂದ ಹೊರಬಂದನೆಂಬ ಐತಿಹ್ಯವು ಇಂದಿಗೂ ಇಲ್ಲಿ ಪ್ರಸಿದ್ಧವಾಗುಳಿದಿದೆ.

ಪ್ರಹ್ಲಾದನ ಸಂರಕ್ಷಣೆಗಾಗಿ ಶ್ರೀಮನ್ನಾರಾಯಣನು ನರಸಿಂಹಾವತಾರವನ್ನೆತ್ತಿ ರಾಕ್ಷಸನನ್ನು ಸಂಹಾರ ಮಾಡುತ್ತಾನೆ. ಅದೇ ರೂಪದಲ್ಲಿ ಈ ಸ್ಥಳದಲ್ಲಿ ನೆಲೆಸಬೇಕೆಂದು ಮಾಡಿಕೊಂಡ ಪ್ರಹ್ಲಾದನ ಪ್ರಾರ್ಥನೆಗನುಗುಣವಾಗಿ ಭಗವಂತನು ಇಲ್ಲಿ ಪ್ರತ್ಯಕ್ಷನಾಗಿರುವ ನೆಂದು ಹೇಳುತ್ತಾರೆ. ಉಗ್ರ ನರಸಿಂಹನ ಕೋಪವನ್ನು ಶಾಂತಗೊಳಿಸಲು ಪ್ರಹ್ಲಾದನನ್ನು ಮುಂದಿಟ್ಟುಕೊಂಡು ಮಾಡಿದ ದೇವಾನುದೇವತೆಗಳ ಪ್ರಯತ್ನವು ಫಲಕಾರಿಯಾಗುವಂತಾದ ಸನ್ನಿವೇಶವನ್ನು ಪುರಾಣದಲ್ಲಿ ಕಾಣಬಹುದು. ಆಗಿನ ಸಂದರ್ಭದಲ್ಲಿ ಲಕ್ಷ್ಮಿಯು ನರಸಿಂಹನ ತೊಡೆಯನ್ನಲಂಕರಿಸುತ್ತಾಳೆ. ಲಕ್ಷ್ಮೀಸ್ವರೂಪಳಾದ ಚಂಚುಲಕ್ಷ್ಮಿಯನ್ನು ವಿವಾಹವಾದದ್ದು ಇದೇ ಸ್ಥಳದಲ್ಲಿ ಎಂಬ ಜಾನಪದ ಮೂಲಾಧಾರಿತ ಕತೆಗೆ ಈ ಸ್ಥಳವು ಹಿನ್ನೆಲೆಯಾಗಿದೆ.

ತೀರ್ಥಕ್ಷೇತ್ರಗಳಿಗೆ ಸಂಬಂಧಪಟ್ಟ ಜಾನಪದ, ಪೌರಾಣಿಕ ಕತೆಗಳು ನಮ್ಮಲ್ಲಿ ಸಾಕಷ್ಟಿವೆ. ಈ ಮಾತನ್ನು ಸಿಂಹಾಚಲಕ್ಕೂ ಅನ್ವಯಿಸಬಹುದಾಗಿದೆ. ಇವುಗಳ ಪ್ರಚಾರದಿಂದ ನಂಬಿಕೆಗೆ ಬಲಬರುತ್ತದೆ. ಇದೇನೇ ಇದ್ದರೂ ಸಮುದ್ರತೀರದ ಬೆಟ್ಟವೊಂದನ್ನು ಪ್ರಮುಖವಾಗಿ ಗುರುತಿಸಿ ಅದರ ಮೇಲೆ ಆಲಯವನ್ನು ನಿರ್ಮಾಣ ಮಾಡಿರುವ ಸಾಹಸಮಯ ಘಟನೆಗೆ ಇಲ್ಲಿನ ಆಲಯವು ಸಾಕ್ಷಿಯಾಗಿದೆ. ನಮ್ಮ ನಾಡಿನ ದೇವಾಲಯಗಳಲ್ಲಿ ಇದು ಪ್ರಮುಖವಾದ ಸ್ಥಾನವನ್ನು ಗಳಿಸಿರುವುದು ಇಲ್ಲಿ ಉಲ್ಲೇಖನೀಯವಾದದ್ದು.

## ಅರ್ಚಾಮೂರ್ತಿ

ಸಿಂಹಾಚಲದ ಗರ್ಭಗುಡಿಯಲ್ಲಿರುವ ನರಸಿಂಹನನ್ನು ವರಾಹ ನರಸಿಂಹನೆಂದು ಗುರುತಿಸಬಹುದು. ನರಸಿಂಹಶಿಲ್ಪಗಳ ವಿಚಾರವಾಗಿ ಪರಾಶರ ಸಂಹಿತೆಯು ನೀಡುವ ವಿವರಣೆ ಈ ಸಂದರ್ಭದಲ್ಲಿ ಗಮನಾರ್ಹ. ಇದು ನಾಲ್ಕು ಕೈಗಳ ಮೂರ್ತಿಯಾಗಿದೆ. ನಾಲ್ಕು ಕೈಗಳಲ್ಲೂ ಚಕ್ರಗಳಿವೆ. ಮೂಲಮೂರ್ತಿಯ ವಿವರಗಳು ಅಸ್ಪಷ್ಟವೆಂದು ಹೇಳಬೇಕು ಸಣ್ಣದೊಂದು ನಿಡಿದಾಗಿ ನಿಂತಬಂಡೆ. ಮೇಲ್ಭಾಗವು ವರಾಹದಂತೆ ಕಾಣುತ್ತದೆ. ಸ್ಪಷ್ಟವಾದ ಆಕಾರವಿಲ್ಲದಿದ್ದರೂ ಮನಸ್ಸಿನ ದೃಢವಾದ ಸಂಕಲ್ಪದಿಂದ ಇದರ ಪಾವಿತ್ರ್ಯತೆ ಅತಿಶಯ ವಾಗಿದೆ. ಅರ್ಚಾವತಾರಿ ಮೂರ್ತಿಯ ಆಕಾರಗಳು ವಿಚಿತ್ರವಾದಂತೆ ಅದರ ಹಿನ್ನೆಲೆ ವಿಶಿಷ್ಟವೂ ಸ್ವಾರಸ್ಯಕರವೂ ಆಗಿರುತ್ತದೆ. ಇದಕ್ಕೆ ಅನ್ವಯವಾಗುವ ಹಾಗೆ ಸ್ವಾಮಿಯ ಹೆಸರುಗಳನ್ನು ನಾನಾರೀತಿಯಲ್ಲಿ ಕರೆದಿರುವುದನ್ನು ಸಹ ಗಮನಿಸಬಹುದಾಗಿದೆ.

ಸಿಂಹಾಚಲದ ನರಸಿಂಹಸ್ವಾಮಿಯನ್ನು ಮುಕ್ಕಣ್ಣನೆಂದೂ, ಕಾಮಹರನೆಂದೂ ಕರೆಯಲಾಗುತ್ತಿದೆ. ಇದು ಶಿವಮೂರ್ತಿಯ ಕಲ್ಪನೆಯಾಗಿರುವುದು ಸ್ವಾರಸ್ಯಕರವಾದ ಸಂಗತಿಯಾಗಿದೆಯೆಂದು ಹೇಳಬಹುದು. ವಿಷ್ಣುಪರವಾದ ವಾದಗಳು, ತತ್ತ್ವಗಳು ಈ ಆಲಯದ ಹಿನ್ನೆಲೆಯಲ್ಲಿದೆ. ಬಹುಮಟ್ಟಿಗೆ ಲಿಂಗಾಕಾರವಾಗಿ ಕಾಣುವ ಇಲ್ಲಿನ ಮೂರ್ತಿಯು ಸದಾಕಾಲ ಚಂದನಾವೃತವಾಗಿರುವುದೊಂದು ವೈಶಿಷ್ಟ್ಯ. ವರ್ಷದಲ್ಲಿ ಒಂದು ದಿನ ಎಂದರೆ ವೈಶಾಖ ಶುದ್ಧತದಿಗೆಯಂದು ಮಾತ್ರ ಚಂದನದಿಂದ ವಿಮುಕ್ತಿ. ಅದೂ ಕೆಲವು ಕ್ಷಣಗಳು ಮಾತ್ರ. ಕೂಡಲೇ ಚಂದನವನ್ನು ಲೇಪಿಸುವ ಕ್ರಿಯೆಯು ನೆರವೇರುತ್ತದೆ. ಈ ರೀತಿ ಮಾಡ'ಾಗುವ ಅಲಂಕಾರವನ್ನು ಒಲಪು ಉತ್ಸವವೆಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಒಲ್ಲಿ ಸೇರುವ ಭಕ್ತರ ಸಂಖ್ಯೆ ಅತಿಶಯವಾಗಿರುತ್ತದೆ. ಭಗವಂತನ ವಿಶ್ವರೂಪವನ್ನು ಕಂಡು ಇವರು ಮುಕ್ತರಾಗುತ್ತಾರೆ.

ದೇವಾಲಯದ ಇತಿಹಾಸವನ್ನು ಸ್ಥೂಲವಾಗಿ ಗಮನಿಸಿದಾಗ ಇದನ್ನು ಸುಮಾರು ಹನ್ನೊಂದನೆ ಶತಮಾನದ ಪೂರ್ವದಲ್ಲಿ ಕಟ್ಟಿರುವುದಾಗಿ ತಿಳಿದು ಬರುತ್ತದೆ. ಲಾಂಗಾಲ ಗಜಪತಿಯು ಈ ಆಲಯದ ನಿರ್ಮಾಣಕಾರ್ಯದಲ್ಲಿ ಪ್ರಮುಖಪಾತ್ರ ನಿರ್ವಹಿಸಿರುವುದು ಕಂಡುಬರುತ್ತದೆ. ಹಾಗೆಯೇ ಗಜಪತಿರಾಯರ ಚರಿತ್ರೆಯಲ್ಲಿ ಈತನ ಸ್ಥಾನವು ಮಹತ್ತ್ವದ್ದಾಗಿರುತ್ತದೆ. ತದನಂತರ ಹದಿಮೂರನೇ ಶತಮಾನದಲ್ಲಿ ಶ್ರೀವೈಷ್ಣವ ಧರ್ಮದ ಪ್ರಚಾರವು ಅಧಿಕಗೊಂಡ ಕಾಲಕ್ಕೆ ಈ ದೇವಾಲಯವೂ ಸಹ ವಿಷ್ಣುಪರವಾದ ಆಲಯವಾಗಿ ಇಲ್ಲಿನ ಅರ್ಚನಾದಿಗಳು ಅದಕ್ಕನುಗುಣವಾಗಿ ಪರಿವರ್ತಿತವಾದಂತೆ ಕಂಡುಬರುತ್ತದೆ. ಇಲ್ಲಿಯವರೆಗೆ ಅದೇ ರೀತಿಯಾಗಿ ನಡೆದುಕೊಂಡು ಬಂದಿದೆ.

## ಶ್ರೀವೈಷ್ಣವ ಪರಂಪರೆ

ಶ್ರೀವೈಷ್ಣವ ಪಂಥವನ್ನು ದಕ್ಷಿಣಭಾರತದಲ್ಲಿ ವಿಶೇಷವಾಗಿ ಪ್ರಚಾರಕ್ಕೆ ತಂದ ರಾಮಾನುಜರು ಸಿಂಹಾಚಲ ಕ್ಷೇತ್ರದ ಆಲಯ ಮತ್ತು ಅಲ್ಲಿ ನೆರವೇರಬೇಕಾದ ಪೂಜಾದಿಗಳ ವಿಚಾರದಲ್ಲಿ ಹೆಚ್ಚಿನ ಆಸಕ್ತಿವಹಿಸಿರುವಂತೆ ತಿಳಿಯುತ್ತದೆ. ಇದಕ್ಕೆ ಸಂಬಂಧಿಸಿದ ವಿವರಗಳು ಕುತೂಹಲವನ್ನು ಕೆರಳಿಸುವಂತಿದೆ. ರಾಮಾನುಜರು ಜೈತ್ರಯಾತ್ರೆಗೆ ಹೊರಟು ಮಾರ್ಗದಲ್ಲಿ ಅನೇಕ ದೇವಾಲಯಗಳಿಗೆ ಸಂದರ್ಶನ ನೀಡಿರುತ್ತಾರೆ. ಸಾಧ್ಯವಾದ ಕಡೆಗಳಲ್ಲಿ ಅಲ್ಲಿ ಪ್ರಚಾರದಲ್ಲಿದ್ದ ಶೈವಧರ್ಮದ ಪ್ರಭಾವವನ್ನು ಮಸುಕಾಗುವಂತೆ ಮಾಡಿದ್ದಾರೆ. ತಮ್ಮ ಶಾಸ್ತ್ರ-ಪಾಂಡಿತ್ಯಗಳಿಂದ ತತ್ತ್ವಶಾಸ್ತ್ರದ ಆಧಾರದಿಂದ ಅಲ್ಲಲ್ಲಿ ವಿಷ್ಣುಮಯವಾದ ವಾತಾವರಣ ನಿರ್ಮಾಣ ಮಾಡಿದ್ದಾರೆ.

ಇಂದು ಬಹುದೊಡ್ಡ ಯಾತ್ರಾಸ್ಥಳವಾಗಿರುವ ತಿರುಮಲೆಯ ಆಲಯವೂ ಇವರ ಪ್ರಬಲವಾದ ವಿಚಾರಧಾರೆಯಿಂದ ಶ್ರೀವೈಷ್ಣವ ಕ್ಷೇತ್ರವಾಗಿರುವುದು ಇದಕ್ಕೆ ನಿದರ್ಶನ.

ಸಿಂಹಾಚಲಕ್ಕೆ ಆಗಮಿಸಿದ ಆಚಾರ್ಯರು ಅಲ್ಲಿನ ಕಲಾವೈಭವಕ್ಕೆ ಮಾರುಹೋಗುತ್ತದೆ. ಅಲ್ಲಿನ ಪ್ರಕೃತಿವ್ಯಾಪಾರಕ್ಕೆ ಅದರ ಹಿನ್ನೆಲೆಗೆ ಮನಸೋಲುತ್ತಾರೆ. ವೈಷ್ಣವಪರವಾದ ಸಿದ್ಧಾಂತಗಳನ್ನು ಈ ಆಲಯದ ಮೂಲಕವಾಗಿ ಬೆಳೆಸಿದ್ದಾದರೆ ಅದಕ್ಕೊಂದು ಶಾಶ್ವತವಾದ ನೆಲೆ ದೊರೆಯಬಹುದೆಂದು ಭಾವಿಸುತ್ತಾರೆ. ಇದರಿಂದ ಆ ಮತದ ಪ್ರಚಾರಕ್ಕೆ ಪುಷ್ಟಿ ದೊರೆಯಬಹುದೆಂದು ನಿರ್ಧರಿಸುತ್ತಾರೆ. ಆಚಾರ್ಯರು ಸಿಂಹಾಚಲಕ್ಕೆ ಆಗಮಿಸಿದ ಸಂದರ್ಭದಲ್ಲಿ ಆ ಪ್ರಾಂತವನ್ನು ಪರಿಪಾಲನೆ ಮಾಡುತ್ತಿದ್ದವನು ನರಸಿಂಹ ಗಜಪತಿಯೆಂಬ ವ್ಯಕ್ತಿಯಾಗಿರುತ್ತಾನೆ. ಆತನನ್ನು ಆಚಾರ್ಯರು ಭೇಟಿಮಾಡಿ ಸಿಂಹಾಚಲದ ಮೂಲ ದೇವರು ವಿಷ್ಣುವೇ ಹೊರತು ಶಿವನಲ್ಲವೆಂಬ ತಮ್ಮ ವಿಚಾರಧಾರೆಯನ್ನು ಆತನ ಮುಂದೆ ಪ್ರಕಟಪಡಿಸುತ್ತಾರೆ. ಆಚಾರ್ಯರು ಇದನ್ನು ನಿದರ್ಶನಪೂರ್ವಕವಾಗಿ ಪ್ರಕಟಗೊಳಿಸಿದ್ದಾದರೆ ತಾನೂ ಸಹ ಅದರ ಧರ್ಮಕ್ಕೆ ಅನುಗುಣವಾಗಿ ನಡೆದುಕೊಳ್ಳುವುದಾಗಿ ರಾಜನು ಸಮ್ಮತಿಸುತ್ತಾನೆ.

ದೇವಾಲಯಕ್ಕೆ ರಾಜ ಮತ್ತು ಆತನ ಮಿತಪರಿವಾರದೊಂದಿಗೆ ಆಗಮಿಸಿದ ಆಚಾರ್ಯರು ಆಲಯದ ಗರ್ಭಗೃಹವನ್ನು ಪ್ರವೇಶಿಸಿ ಹೊರಗಿನಿಂದ ಬಾಗಿಲು ಭದ್ರಪಡಿಸಿ ಹೇಳುತ್ತಾರೆ. ಅವರ ಕೋರಿಕೆಯಂತೆ ಬಾಗಿಲಿಗೆ ಬೀಗಮುದ್ರೆಯನ್ನು ಹಾಕಲಾಗುತ್ತದೆ. ಅಂದಿನ ರಾತ್ರಿ ರಾಮಾನುಜರು ಪರಕಾಯಪ್ರವೇಶ ಮಾಡುತ್ತಾರೆ. ಆದಿಶೇಷನ ರೂಪದಲ್ಲಿ ಒಳಗೆ ಸರಿಯುತ್ತಾರೆ. ಶಿವಲಿಂಗದ ಆಕಾರದಲ್ಲಿದ್ದ ಅರ್ಚಾರೂಪಕ್ಕೆ ತಿರುಮಣಿ ತಿರುಚಾವರಗಳಿಂದ ನಾಮವನ್ನು ಹಾಕುತ್ತಾರೆ. ಮೊದಲೇ ಒಪ್ಪಂದವಾಗಿದ್ದಂತೆ ಮಾರನೆಯ ದಿನ ಬೆಳಗ್ಗೆ ಗರ್ಭಗೃಹದ ಬಾಗಿಲುಗಳನ್ನು ತೆರೆಯಲಾಗುತ್ತದೆ. ನಿದರ್ಶನಪೂರ್ವಕವಾಗಿ ಸಿಂಹಾಚಲದ ಸ್ವಾಮಿಯು ವಿಷ್ಣುಪರವಾದ ದೇವರೆಂದೇ ದೃಢಪಡುತ್ತದೆ. ರಾಜನೂ ಸಹ ತಾನು ಮೊದಲೇ ವಾಗ್ದಾನ ನೀಡಿದ ಹಾಗೆ ದೇವಾಲಯವನ್ನು ವೈಷ್ಣವಾಲಯವನ್ನಾಗಿ ಮಾಡಲು ತನ್ನಲ್ಲಿದ್ದ ಸಂಪತ್ತನ್ನು ತನ್ನ ಅಧಿಕಾರವನ್ನು ವಿನಿಯೋಗಿಸುತ್ತಾನೆ. ಆತನೂ ಸಹ ವಿಷ್ಣುವಿನಲ್ಲಿ ಅಪಾರವಾದ ಶ್ರದ್ಧೆಯನ್ನು ಹೊಂದಿದವನಾಗುತ್ತಾನೆ. ಇದನ್ನು ಇತಿಹಾಸ ಮಿಶ್ರಿತ ಕತೆಯೆಂದು ಭಾವಿಸಬಹುದಾದರೂ ಇದರ ಹಿನ್ನೆಲೆಯ ರಹಸ್ಯವು ಕೇವಲ ಧರ್ಮಪ್ರಚಾರಕವಾದದ್ದೆಂಬುದರಲ್ಲಿ ಅನುಮಾನವಿದ್ದಿರಲಾರದು. ಧರ್ಮಜಾಗೃತಿ ಮತ್ತು ಸ್ವಮತವನ್ನು ಶ್ರೇಷ್ಠವಾದದ್ದೆಂದು ಸಾರುವ ಸಾಧನಗಳಲ್ಲಿ ಈ ವಿಧವಾದ ತಂತ್ರಗಳನ್ನು ಇತಿಹಾಸವು ನಿರೂಪಿಸಿರುವುದು ಇನ್ನು ಹಲವಾರು ದೃಷ್ಟಾಂತಗಳಿಂದ ದೃಢಪಟ್ಟಿರುವುದಾಗಿದೆ.

ಸಿಂಹಾಚಲದ ಸ್ವಾಮಿಯ ಮೂಲರೂಪವನ್ನು ಕೇವಲ ಒಂದುದಿನ ಮಾತ್ರವೇ ಕಾಣಬೇಕೆನ್ನುವುದು ನಿಯಮಾನುಸಾರವಾಗಿ ಒಪ್ಪಿಕೊಂಡದ್ದಾಗಿದೆ. ವಿಚಾರವಾದದ ಮಾತುಗಳಿಂದ ದೂರಮಳಿದು ಇದನ್ನು ಪರಿಶೀಲಿಸತಕ್ಕದ್ದಾಗಿದೆ. ಈ ಮೇಲಿನ ಕಥೆಯ ಲಾಂಛನ ಧರ್ಮವನ್ನು ಪ್ರತಿಪಾದಿಸುವಂತೆಯು ಕಾಣುತ್ತದೆ. ನಿತ್ಯಾಭಿಷೇಕದಿಂದ ದೂರವಾಗಿರುವ ದೇವರುಗಳು ನಮ್ಮಲ್ಲಿ ಅನೇಕರಿದ್ದಾರೆ. ತಿರುಮಲೆಯ ವೆಂಕಟೇಶ್ವರನಿಗೆ ಶುಕ್ರವಾರ

ಮಾತ್ರವೇ ಅಭಿಷೇಕ. ತಿರುಪತಿಯ ಗೋವಿಂದರಾಜನಿಗೆ ಜಲಾಭಿಷೇಕ ಮಾಡಲಾಗುವಂತಿಲ್ಲ. ಇಂತಹ ಚೌಕಟ್ಟಿನಲ್ಲಿ ವರಾಹ ನರಸಿಂಹನೂ ಒಳಪಟ್ಟು ವರ್ಷಕ್ಕೊಮ್ಮೆ ಮಾತ್ರವೇ 'ವಿಶ್ವರೂಪ ದರ್ಶನ'ವೆಂಬುದನ್ನು ಮನಗಾಣಬಹುದಾಗಿದೆ.

## ಮತ್ತೊಂದು ಘಟನೆ

ಧರ್ಮವು ಕಠಿಣವಾದದ್ದು. ಅದನ್ನು ಅನುಸರಿಸುವ ದಾರಿಯನ್ನು ತೋರಿಸುವ ಕಾರ್ಯವು ಅಷ್ಟೇ ಕಷ್ಟವಾದದ್ದು. ಧರ್ಮಪರಾಯಣತೆಯ ಹಾದಿಯಲ್ಲಿ ಉನ್ನತವ್ಯಕ್ತಿಗಳಾದವರೂ ಒಮ್ಮೊಮ್ಮೆ ಎಡತಾಕಿರಬಹುದು. ಸಿಂಹಾಚಲಕ್ಕೆ ಸಂಬಂಧಪಟ್ಟ ಮತ್ತೊಂದು ಐತಿಹಾಸಿಕ ಘಟನೆಯನ್ನು ಈ ಸಂದರ್ಭದಲ್ಲಿ ಗಮನಿಸುವುದು ಅನುಚಿತವಾಗಲಾರದು.

ಆಚಾರ್ಯರು ಸಿಂಹಾಚಲವನ್ನು ಸಂದರ್ಶಿಸಿದ ನಂತರ ವಿಜಯನಗರದ ರಾಜನ ಆಸ್ಥಾನಕ್ಕೆ ಬರುತ್ತಾರೆ. ವೈಷ್ಣವಧರ್ಮವನ್ನು ಉಪದೇಶಿಸುವ ಸಮಯದಲ್ಲಿ ಸಿಂಹಾಚಲದ ವಿಚಾರವು ಬರುತ್ತದೆ. ಅಲ್ಲಿರುವ ಸ್ವಾಮಿಯು ಸಾಕ್ಷಾತ್ ವಿಷ್ಣುರೂಪಿಯಾಗಿರುವನಾದರೂ ಅಲ್ಲಿನ ಪೂಜಾದಿಗಳಲ್ಲಿ ಶಿವಾರ್ಚನೆ ನಡೆಯುತ್ತಿರುವುದಕ್ಕೆ ತಮ್ಮ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾರೆ. ಇದು ಏಕೆ ಹೀಗಾಗುತ್ತಿದೆ? ಎಂಬುದಾಗಿ ಪ್ರಶ್ನಿಸುತ್ತಾರೆ. ರಾಜನ ಆಸ್ಥಾನದ ಮಂತ್ರಿಯೋರ್ವನು 'ಆಚಾರ್ಯರಿಗೇನಾದರೂ ಕಣ್ಣಿನ ದೋಷವಿರುವುದೆ?'ಎಂದು ಕೇಳಲಾಗಿ ಅವರು ದೋಷವಿರುವುದು ಯಾರಲ್ಲೆಂಬ ವಿಚಾರ ನಾಳೆಯ ದಿನ ಉದಯಕಾಲದೊಳಗೆ ಖಚಿತಪಡುತ್ತದೆಂದು ತಿಳಿಸಿ ತಾವು ಮಲಗಲು ಹೋಗುತ್ತಾರೆ.

ಆಚಾರ್ಯರು ಮಲಗುತ್ತಿದ್ದ ಕೋಣೆಯು ಅರ್ಧರಾತ್ರಿಯಲ್ಲಿ ಬರಿದಾಗಿರುವುದು ಕಾಣುತ್ತದೆ. ಅಮಾತ್ಯನಿಗೆ ಇದರಿಂದ ಸಂದೇಹವಾಗಿ ರಾಜರನ್ನೆಬ್ಬಿಸಿಕೊಂಡು ಕತ್ತಲೆಯಲ್ಲಿಯೇ ಸಿಂಹಾಚಲಕ್ಕೆ ಬರುತ್ತಾರೆ. ರಾಜನಿಗೆ ಏನೊಂದನ್ನೂ ತಿಳಿಸದೆ ಅವರನ್ನು ಸಿಂಹಾಚಲಕ್ಕೆ ಕರೆದೊಯ್ಯುತ್ತಿರುವ ಮಂತ್ರಿಯ ಕಾರ್ಯದಿಂದ ರಾಜರ ಕುತೂಹಲವು ಕೆರಳುತ್ತದೆ. ಗಾಢವಾದ ಕತ್ತಲೆಯಲ್ಲಿ ತನ್ನನ್ನೇಕೆ ಕರೆದೊಯ್ಯುತ್ತಿರುವನೆಂಬ ರಾಜರ ಮಾತಿಗೆ ಅಮಾತ್ಯನು ಅವರು ಸ್ವಲ್ಪಕಾಲ ಮೌನವಾಗಿರಬೇಕೆಂದು ಬೇಡಿಕೊಳ್ಳುತ್ತಾನೆ.

ಸಿಂಹಾಚಲದ ದೇವಾಲಯಕ್ಕೆ ಆಗಮಿಸಿದಾಗ ರಾಜ, ಮಂತ್ರಿ ಮತ್ತಿತರರನ್ನು ಕುತೂಹಲವು ಆವರಿಸುತ್ತದೆ. ಸರಿರಾತ್ರಿಯಲ್ಲಿ ಆಲಯದ ಬಾಗಿಲು ಸಂಪೂರ್ಣವಾಗಿ ತೆರೆದಿದ್ದು ಅವರಿಗೆ ಆಶ್ಚರ್ಯವಾಗುತ್ತದೆ. ಅಷ್ಟು ಹೊತ್ತಿಗಾಗಲೇ ಲಿಂಗಾಕಾರಕ್ಕೆ ಅಸ್ಪಷ್ಟವಾದ ಮೂರ್ತಿರೂಪವು ಆಚಾರ್ಯರ ಪರಿಶ್ರಮದಿಂದ ಉಂಟಾಗಿರುತ್ತದೆ. ಇಂತಹ ಅಕಾರ್ಯವನ್ನು ಯಾವ ದೊಡ್ಡ ಆಚಾರ್ಯರು ಮಾಡಿದರೂ ಅದು ಅಪರಾಧವೇ ಆಗುತ್ತದೆ. ಕೂಡಲೆ ರಾಜನು ಅವರನ್ನು ತನ್ನ ಆಸ್ಥಾನಕ್ಕೆ ಹಿಡಿದುತರುವಂತೆ ಅಪ್ಪಣೆ ಮಾಡಿ ತಾನು ಸರಸರನೆ ನಡೆದುಬಿಡುತ್ತಾನೆ.

ಅರಸರ ಅಪ್ಪಣೆಗೆ ಅನುಗುಣವಾಗಿ ಅವರನ್ನು ವಿಚಾರಣೆಗಾಗಿ ಕರೆತರಲಾಗುತ್ತದೆ ಕಳ್ಳತನದಿಂದ ಒಂದು ಮತಕ್ಕೆ ಸೇರಿದ ಅಮೂಲ್ಯವಾದ ಆರಾಧನಾ ರೂಪವೊಂದನ್ನು ವಿರೂಪಗೊಳಿಸುತ್ತಿದ್ದ ಕಾರ್ಯವು ಶಿಕ್ಷಾರ್ಹ ಅಪರಾಧವೆಂದು ನಿರ್ಧಾರವಾಗುತ್ತದೆ. ಈ ವಿಧವಾದ ಅಪರಾಧಕ್ಕೆ ನೀಡಬೇಕಾದ ಶಿಕ್ಷೆ ಯಾವರೂಪದ್ದಾಗಿರಬೇಕೆಂಬ ಬಗೆಗೆ ವಿಚಾರ ವಿನಿಮಯವಾಗಿ ಕಡೆಗೆ ಇದನ್ನು ಎಸಗಿದವರ ಶಿರಚ್ಛೇಧನವೇ ಇದಕ್ಕೆ ನೀಡುವ ತೀರ್ಪೆಂದು ಘೋಷಿಸಲಾಗುತ್ತದೆ.

ಆಚಾರ್ಯರನ್ನು ಗಲ್ಲಿಗೇರಿಸುವ ಮೊದಲು ಅವರ ಕಡೆಯಕೋರಿಕೆಯನ್ನು ಅಥವಾ ಮನಸ್ಸಿನ ಅಭಿಲಾಷೆಯನ್ನು ವ್ಯಕ್ತಪಡಿಸುವ ಅವಕಾಶವನ್ನು ಅವರಿಗೆ ನೀಡಲಾಗುತ್ತದೆ. ಆಚಾರ್ಯರಿಗೆ ತಮ್ಮ ಮನಸ್ಸಿನ ಹಂಬಲವನ್ನು ಹೇಳಿಕೊಳ್ಳುವಂತೆ ತಿಳಿಸಲಾಗುತ್ತದೆ. ಆಚಾರ್ಯರು ತಾವು ನಿರಪರಾಧಿಯೆಂದೂ ತಾವು ಯಾವುದೇ ಅಪರಾಧವೆಸಗಲಿಲ್ಲವೆಂದು ಮೊದಲಿನಂತೆ ಮತ್ತೆಯೂ ಹೇಳುತ್ತಾರೆ. ತಮ್ಮ ಧರ್ಮಕ್ಕೆ ಮನ್ನಣೆ ನೀಡುವಲ್ಲಿನ ಪವಿತ್ರ ಕಾರ್ಯಕ್ಕೆ ಅಂತಹುದೊಂದು ವರ್ತನೆ ಅನಿವಾರ್ಯವಾಗಿತ್ತೆಂದು ಹೇಳುತ್ತಾರೆ. ತಮಗೆ ಶಿಕ್ಷೆಯನ್ನು ಜಾರಿಗೊಳಿಸಿದ್ದಾದರೆ ಹತ್ಯೆಗೈದ ಪಾಪಕ್ಕೆ ತಕ್ಕಫಲವನ್ನು ಅನುಭವಿಸ ಬೇಕಾಗುವುದೆಂದು ತಿಳಿಯಪಡಿಸುತ್ತಾರೆ.

ರಾಜನಿಗೆ ಆಚಾರ್ಯರ ಶಪಿಸುವ ಕಠಿಣವಾದ ಮಾತುಗಳನ್ನು ಕೇಳಿ ತಾನು ಮಾಡುತ್ತಿರುವುದು ತಪ್ಪು ಎಂಬುದು ಅರಿವಾಗುತ್ತದೆ. ಅವರಿಗೆ ಅವರು ಪಟ್ಟ ಶ್ರಮದಫಲ ವಾಗಿ ತನ್ನ ಆಳ್ವಿಕೆಯಿರುವ ಪ್ರದೇಶದಲ್ಲಿ ವೈಷ್ಣವ ಸಂಪ್ರದಾಯಗಳು ನೆರವೇರಲು ಅನುಮತಿ ನೀಡುತ್ತಾನೆ. ಆದರೆ ಆಚಾರ್ಯರು ನಿರ್ಮಿಸಿದ ಆಕೃತಿ ಮಾತ್ರ ನಿತ್ಯವೂ ಲಿಂಗದಂತೆಯೇ ಕಾಣಬೇಕೆಂದು ಆತನು ಒತ್ತಾಯವನ್ನು ಹೇರುತ್ತಾನೆ. ಆಚಾರ್ಯರ ಬಳಿ ಆತನು ತಾವು ಕಡೆದ ಮೂರ್ತಿಯು ಲಿಂಗದಂತೆ ಕಾಣಲು ಆಚಾರ್ಯರಿಗೆ ಒಪ್ಪಿಗೆ ಯಿರುವುದೋ ಇಲ್ಲವೊ ಎಂಬುದಾಗಿ ವಿಚಾರಿಸುತ್ತಾನೆ. ಅದು ಹಾಗೆ ಕಾಣಬೇಕಾದರೆ ಅದು ಪ್ರತಿನಿತ್ಯವೂ ಚಂದನದಿಂದ ಆವೃತವಾಗಿರಬೇಕೆಂದು ರಾಜನು ತಿಳಿಸುತ್ತಾನೆ.

ಆಚಾರ್ಯರಿಗೆ ತಾವು ಪಟ್ಟ ಪ್ರಯತ್ನವು ನಿರರ್ಥಕವಾಗಬಾರದೆಂಬ ಅಭಿಪ್ರಾಯ ಇರುತ್ತದೆ. ಅದನ್ನು ಅವರು ರಾಜನಿಗೆ ಮನವರಿಕೆ ಮಾಡಿಕೊಡುತ್ತಾರೆ. ಅರಸನು ಸ್ವಲ್ಪಹೊತ್ತು ಗಂಭೀರವಾಗಿ ಆಲೋಚಿಸಿ ಕಡೆಗೆ ಯಾವ ದಿನದಂದು ಆಚಾರ್ಯರು ಈ ಕಾರ್ಯಕ್ಕೆ ಕೈಹಾಕಿದರೊ ಅದೇ ದಿನದಂದು ಭಗವಂತನ ವಿಶ್ವರೂಪವು ಸಾಮಾನ್ಯ ಜನರಿಗೆ ಕಾಣಲು ತನ್ನ ಅಡ್ಡಿಯಿರುವುದಿಲ್ಲವೆಂಬ ಶಾಸನ ವಿಧಿಸಿದ ಅನುಮತಿಯನ್ನು ನೀಡುತ್ತಾನೆ. ಅವರ ಆಸೆ ಅಭಿಪ್ರಾಯಗಳಿಗೆ ತನ್ನ ಸಮ್ಮತಿಯ ಅಂಕಿತವನ್ನು ಒತ್ತುತ್ತಾನೆ. ಆಚಾರ್ಯರ ಮೇಲಿನ ಭಕ್ತಿ ಗೌರವಗಳಿಂದ ಅವರಿಗೆ ನೀಡಿದ್ದ ಘೋರಶಿಕ್ಷೆಯೂ ರದ್ದಾಗುತ್ತದೆ. ಇದರಿಂದಾಗಿ ರಾಜನೂ ಸಹ ನೆಮ್ಮದಿಯ ನಿಟ್ಟುಸಿರು ಅನ್ನು ಬಿಡು ವಂತಾಗುತ್ತದೆ.

ಸಿಂಹಾಚಲದ ನರಸಿಂಹನ ರೂಪಚಿಂತನೆಗೆ ಮೇಲಿನ ಎರಡು ಪ್ರಸಂಗಗಳು ಪೂರಕವಾದ ಎಳೆಯೊಂದನ್ನು ಅದ್ಭುತವಾದ ಜಾಲದಲ್ಲಿ ಒಳಗೊಂಡಿರುವಂತೆ ಕಾಣುತ್ತದೆ. ಕಣ್ಣಿಗೆ ಗೋಚರವಾದ ಸಂಗತಿಗಳ ಹಿಂದೆ ಅದ್ಭುತವಾದ ವೈಚಿತ್ರ್ಯಗಳೂ ರೋಚಕವಾದ ಸಂಗತಿಗಳೂ ಅಡಕವಾಗಿರುವುದನ್ನು ನಿರೂಪಿಸುವಂತಿದೆ. ಆಚಾರ-ಧರ್ಮದ ವಿಚಾರಗಳು ಪರಸ್ಪರ ಪೈಪೋಟಿ ನಡೆಸಿದ ದೃಷ್ಟಾಂತಗಳಿಗೆ ಇವು ನಿದರ್ಶನವಾಗಬಲ್ಲುದೆ ಹೊರತು ಮತ್ತಾವುದೇ ರೀತಿಯಲ್ಲಿ ಮನಸ್ಸಿನಲ್ಲಿ ವಿಷದ ಬೀಜವನ್ನು ಬಿತ್ತುವಲ್ಲಿ ಪರ್ಯವಸಾನ ವಾಗದಂತೆ ಎಚ್ಚರವಹಿಸಬೇಕಾದದ್ದು ಅಗತ್ಯವೆಂಬುದನ್ನು ಈ ಸಂದರ್ಭದಲ್ಲಿ ಹೇಳಬಹುದಷ್ಟೆ. ಮತ್ತೊಂದು ಸಂಗತಿಯೇನೆಂದರೆ ನರಸಿಂಹ ಅವತಾರವಾದದ್ದೆ ಒಂದು ವಿಶಿಷ್ಟವಾದ ಸಂದರ್ಭದಲ್ಲಿ ನೆನಪಿರಬೇಕಾದ್ದು ಅಗತ್ಯ. ಇದಕ್ಕೆ ಅನುಗುಣವಾಗಿ ನರಸಿಂಹಾರಾಧನೆಯನ್ನು ನಿರೂಪಿಸಹೊರಟ ಅನೇಕ ಪುಣ್ಯಕ್ಷೇತ್ರಗಳು ಆತನ ಅರ್ಚಾಮೂರ್ತಿಗಳ ವಿಚಾರದಲ್ಲಿ ಹತ್ತು ಹಲವು ವಿನೂತನ ಸಂಗತಿಗಳನ್ನು ಹೊರಹಾಕಿರುವುದಕ್ಕೆ ಸಿಂಹಾಚಲವು ಸಹಾ ಉತ್ತಮ ಉದಾಹರಣೆಯಾಗಿದೆ.

## ವಿಶ್ವರೂಪ ದರ್ಶನ

ಸಿಂಹಾಚಲದಲ್ಲಿ ವರುಷಕ್ಕೆ ಎರಡು ಬ್ರಹ್ಮೋತ್ಸವಗಳು ನೆರವೇರುತ್ತಿರುವುದು ಈ ಸ್ಥಳದ ಮತ್ತೊಂದು ವೈಶಿಷ್ಟ್ಯವಾಗಿದೆ. ಚೈತ್ರ ಶುದ್ಧ ಏಕಾದಶಿ ಮೊದಲಾಗಿ ಪೌರ್ಣಮಿಯವರೆಗೆ ಐದುದಿನಗಳ ಕಾಲ ನಡೆಯುವ ಕಲ್ಯಾಣೋತ್ಸವ ಕಾರ್ಯಕ್ರಮಗಳು ಹೆಚ್ಚು ಪ್ರಚಾರದಲ್ಲಿದೆ. ಈ ಉತ್ಸವದಲ್ಲಿ ಪಾಲ್ಗೊಳ್ಳುವ ಭಕ್ತರ ಸಂಖ್ಯೆ ಅಧಿಕವಾದದ್ದು. ವೈಶಾಖಶುದ್ಧ ತದಿಗೆಯಂದು ಸ್ವಾಮಿಯ 'ವಿಶ್ವರೂಪ ದರ್ಶನ'ವನ್ನು ಪಡೆಯುವ ಭಕ್ತಾದಿಗಳ ಸಂಖ್ಯೆಯು ಒಂದು ಲಕ್ಷವನ್ನು ಮೀರುತ್ತದೆ. ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ಈ ಸಂದರ್ಭದಲ್ಲಿ ನಡೆಯುತ್ತವೆ. ಯಾತ್ರಿಕರಿಗೆ ಊಟ ಮತ್ತು ವಸತಿಗಳ ಸೌಲಭ್ಯವನ್ನು ಕಲ್ಪಿಸಲಾಗುತ್ತದೆ.

ವೈದಿಕ ಸಾಹಿತ್ಯವನ್ನು ಪೋಷಿಸುವ ವೇದಪಾಠಶಾಲೆಯನ್ನು ಇಲ್ಲಿ ನಿರ್ವಹಿಸಲಾಗು ತ್ತಿದೆ. ಪ್ರಧಾನ ದೇವಾಲಯದ ಪೋಷಣೆಯಲ್ಲಿ ಉಳಿದ ನೂರೆಂಟು ದೇವಾಲಯಗಳು ನಡೆದುಕೊಂಡು ಬರುತ್ತಿವೆ. ಮೂಲಮೂರ್ತಿಯಿರುವ ಗರ್ಭಗೃಹಕ್ಕೆ ಬಂಗಾರದ ಹೊದಿಕೆ ಯನ್ನು ನಿರ್ಮಾಣ ಮಾಡಲಾಗಿದ್ದು ಇದರ ಪ್ರಾಧಾನ್ಯತೆಗೆ ಸಾಕ್ಷಿಯಾಗಿದೆ. ದೇವಾಲಯದ ಮೇಲ್ಭಾಗಕ್ಕೆ ಬಂಗಾರದ ಲೇಪನವಿರುವ ತಗಡುಗಳನ್ನು ಹೊದಿಸಿರುತ್ತಾರೆ. ಗೋಡೆಗಳು, ಧ್ವಜಸ್ತಂಭವೆಲ್ಲವೂ ವಿಶೇಷ ಕಾಂತಿಯಿಂದ ಕೂಡಿವೆ. ಕಲ್ಯಾಣಮಂಟಪದಲ್ಲಿ ಸಾವಿರ ಸಂಖ್ಯೆಯಲ್ಲಿ ಭಕ್ತರಿಗೆ ಕುಳಿತುಕೊಳ್ಳಲು ಅವಕಾಶವಿದೆ. ಸ್ವಾಮಿಯವರ ಉತ್ಸವಮೂರ್ತಿಗಳು, ಆಭರಣಗಳು, ವಾಹನಗಳು ಇವೆಲ್ಲವೂ ಅಪಾರ ಮೌಲ್ಯವುಳ್ಳದ್ದಾಗಿದೆ. ದೇವಾಲಯದಿಂದ ಹಿಡಿದು ಮಾಧವಧಾರವರೆಗೆ ಒಳ್ಳೆಯ ರಸ್ತೆಯಿದೆ. ಆಷಾಢ ಪೌರ್ಣಮಿಯಂದು ಗಿರಿಪ್ರದಕ್ಷಿಣೆ ನೆರವೇರುತ್ತದೆ.

ದೇವಾಲಯದ ಸುತ್ತಲೂ ಗೋಡೆಗಳ ಮೇಲಿರುವ ಶಿಲ್ಪಕಲಾ ಕೆತ್ತನೆಯು ಆಕರ್ಷಕವಾದದ್ದು. ಕಲ್ಯಾಣಮಂಟಪದ ಕಂಬಗಳನ್ನು ಹದಿನಾರು ಮುಖಗಳಾಗಿ ವಿಂಗಡಿಸಲಾಗಿದೆ. ದೇವಾಲಯದ ಹೊರಭಾಗದಲ್ಲಿ ಕಲ್ಲಿನ ರಥವನ್ನು ನಿಲ್ಲಿಸಲಾಗಿದೆ. ಆಲಯದ ಮೇಲಿರುವ ಶಾಸನಗಳು ಇದಕ್ಕಿರುವ ಇತಿಹಾಸಕ್ಕೆ ಸಾಕ್ಷಿಯಾಗಿದೆ. ಹೇರಳವಾದ ದಾನ-ದತ್ತಿಗಳನ್ನು ಸ್ವೀಕರಿಸಿದ ವಿಚಾರವನ್ನು ಇದರಲ್ಲಿ ಹೇಳಲಾಗಿದೆ. ಕುಲೋತ್ತುಂಗ ಚೋಳನ ಶಾಸನವು ಇದರಲ್ಲಿ ಹಳೆಯದು. ಧೀರನರಸಿಂಹ ಲಾಂಗಾಲಗಜಪತಿಯು ಕಲ್ಯಾಣಮಂಟಪವನ್ನು ನಿರ್ಮಿಸಿದ ವಿಚಾರವು ಇಲ್ಲಿನ ಶಾಸನದಿಂದ ತಿಳಿಯಬರುತ್ತದೆ. ಕೊಂಡವೀಟಿ ರಾಜನ ಕಾಲದ ಶಾಸನವಲ್ಲದೆ ಕೃಷ್ಣದೇವರಾಯರ ಕಾಲದ ಶಿಲಾಲೇಖವು ಇಲ್ಲಿದ್ದು ದೇವಾಲಯವು ನಡೆದು ಬಂದ ದಾರಿಗೆ ಇವು ಪುರಾವೆಯನ್ನೊದಗಿಸುತ್ತಿವೆ.

'ಸಿಂಹಾದ್ರಿಶತಕ' ಮತ್ತಿತರ ಸ್ತೋತ್ರಸಾಹಿತ್ಯಗಳು ಸಿಂಹಾಚಲದ ಮಹಿಮೆಯನ್ನು ಬಿತ್ತರಿಸುತ್ತಿವೆ. ಪುರಾಣ- ಪುಣ್ಯಕತೆಗಳ ಇತಿಹಾಸ-ಧರ್ಮಗಳ ಮೂಲಕವಾಗಿ ಸಾಹಿತ್ಯ-ಸ್ತೋತ್ರಗಳಿಂದ ಕೂಡಿದ ಸಿಂಹಾಚಲದ ಹಿರಿಮೆಯನ್ನು ಅರಿಯಲು ಆಶಿಸುವವರೆಲ್ಲರಿಗೂ ಅದ್ಭುತವಾದ, ಅಷ್ಟೇ ಮನೋಜ್ಞವಾದ ಸಂಗತಿಗಳನ್ನು ಪ್ರಕಟಪಡಿಸುವಂತಿರುವ ಈ ಕ್ಷೇತ್ರವು ಸಾಧಿಸಿರುವ ಸಾಧನೆ ಏರಿರುವ ಹಂತ ಶ್ಲಾಘನೀಯವಾಗಿದೆ.

# ಮಂಗಳಗಿರಿ

ಮಂಗಳಗಿರಿಯು ಆಂಧ್ರಪ್ರದೇಶದ ಸುಪ್ರಸಿದ್ಧವಾದ ನರಸಿಂಹ ಕ್ಷೇತ್ರವೆಂಬುದರಲ್ಲಿ ಸಂಶಯವಿಲ್ಲ. ಗುಂಟೂರು ಜಿಲ್ಲೆಗೆ ಸೇರಿರುವ ಈ ಸ್ಥಳದಲ್ಲಿ ಬೆಟ್ಟದ ಒಡೆಯನಾಗಿ ನರಸಿಂಹ ಸ್ವಾಮಿಯು ಪ್ರತ್ಯಕ್ಷದರ್ಶನ ನೀಡುತ್ತಿದ್ದಾನೆ. 'ಪಾನಕಾಲನರಸಿಂಹ' 'ಪಾನಕಾಲ ರಾಯುಡು' ಎಂಬ ಪರಿಚಿತವಾದ ಹೆಸರುಗಳಿಂದ ಇಲ್ಲಿರುವ ಭಗವಂತನನ್ನು ಅರ್ಚಿಸಿ ಆರಾಧಿಸುತ್ತಿದ್ದಾರೆ. ಇಲ್ಲಿನ ಸ್ವಾಮಿಯ ಅರ್ಚನಾದಿಗಳಿಗೆ ಮಹತ್ತ್ವವೂ ಕೌತುಕಪೂರ್ಣವೂ ಆದ ಸನ್ನಿವೇಶವಿರುವುದನ್ನು ಯಾರಾದರೂ ಗಮನಿಸಬಹುದಾಗಿದೆ. ನರಸಿಂಹ ಸ್ವಾಮಿಗೆ ವಿಶೇಷ ನೈವೇದ್ಯವೆಂದರೆ ಪಾನಕ-ಕೋಸಂಬರಿಗಳೇ ಆಗಿವೆ. ಅದರಲ್ಲಿಯೂ ಪಾನಕವು ಈ ದೇವರಿಗೆ ಪರಮಪ್ರಿಯವಾದದ್ದು. ಇದನ್ನು ನಿತ್ಯನೈವೇದ್ಯವಾಗಿ ಸಮರ್ಪಿಸುವ ಒಂದೇ ಒಂದು ಸ್ಥಳವೆಂದರೆ ಅದು ಮಂಗಳಗಿರಿಯೆಂದೇ ಹೇಳಬೇಕು. ಎಷ್ಟು ಪ್ರಮಾಣದ ಪಾನಕವನ್ನರ್ಪಿಸಿದರೂ ಒಂದಿಷ್ಟು ಪ್ರಸಾದವಾಗಿ ಉಳಿಯುವುದು ಇಲ್ಲಿನ ಪ್ರತೀತಿಯಾಗಿದೆ.

ನರಸಿಂಹಸ್ವಾಮಿಯು ಆರಾಧನಾ ನೆಲೆಗಳು ಸಾಮಾನ್ಯವಾಗಿ ಬೆಟ್ಟ, ಅರಣ್ಯ, ಗುಹೆಗಳಲ್ಲಿರುವುದಕ್ಕೆ ಸಾಕ್ಷಿಯಾಗಿ ಮಂಗಳಗಿರಿಯ ಒಡೆಯನೂ ವಿರಾಜಮಾನನಾಗಿದ್ದಾನೆ. ಈ ಬೆಟ್ಟವು ಸುಮಾರು ಎಂಟುನೂರ ಎಪ್ಪತ್ತೈದು ಅಡಿಗಳ ಎತ್ತರವಿದೆ. ಬೆಟ್ಟವನ್ನೇರಲು ಮೆಟ್ಟಲುಗಳನ್ನು ನಿರ್ಮಿಸಿರುತ್ತಾರೆ. ಇದು ಅಷ್ಟೇನೂ ಪ್ರಯಾಸವಲ್ಲದ ಮಾರ್ಗವೆಂದು ಹೇಳಬಹುದು. ಬೆಟ್ಟದ ಮೇಲೆ ಒಂದು ಗುಹೆಯಿದೆ. ಇದರಲ್ಲಿ ಅತಿಮನೋಹರವಾದ



ಮಂಗಳಗಿರಿಯ ನರಸಿಂಹ ದೇಗುಲದ ಭವ್ಯಗೋಪುರದ ಮಂಗಳ ನೋಟ

ನರಸಿಂಹನ ರೂಪವು ಅಡಕವಾಗಿದೆ. ತೆರೆದಬಾಯಿಯ ಹಾಗೆ ಇದು ಕಂಡು ಬರುತ್ತಿದೆ. ನರಸಿಂಹನ ರೂಪಲಕ್ಷಣದಲ್ಲಿ ಇದೊಂದು ವಿಚಿತ್ರವಾದಂತೆ ವಿಭಿನ್ನವೂ ಆಗಿರುವುದನ್ನು ಗಮನಿಸಬೇಕು. ರೋಚಕವಾದ ರೂಪದಂತೆ ಕಂಡುಬರುವ ಇದನ್ನು ಮೂರ್ತಿಶಿಲ್ಪಗಳ ವಿಕಾಸದ ಹಂತದಲ್ಲಿ ಪ್ರಾಥಮಿಕವಾದದ್ದೆಂದು ಅಭಿಪ್ರಾಯಪಡಬಹುದು.

ಮಂಗಳಗಿರಿಯ ದೇವಾಲಯವನ್ನು ಮೊದಲ ಹಂತದ ದೇವಾಲಯಗಳ ಸಾಲಿಗೆ ಸೇರಿಸಬಹುದು. ಕಲ್ಲುಕಡೆದು ನಿರ್ಮಿಸಿದ ದೇವಸ್ಥಾನಗಳ ಸಮೂಹಕ್ಕೆ ಸುಲಭವಾಗಿ ಇದು ಒಳಪಡುತ್ತದೆ. ಈ ರೀತಿಯಲ್ಲಿರುವ ಇನ್ನಿತರ ಪ್ರಖ್ಯಾತ ಸ್ಥಳಗಳಾಗಿ ಅಮರಾವತಿ, ನಾಗಾರ್ಜುನ ಕೊಂಡ ಮೊದಲಾದವು ಗಮನಾರ್ಹವಾಗುತ್ತವೆ. ಮಂಗಳಗಿರಿಯ ಬೆಟ್ಟದ ಮೇಲಿರುವ ನರಸಿಂಹನ ಶಿಲ್ಪವು ಕೇವಲ ತೆರೆದ ಬಾಯಿಯೊಂದನ್ನು ಪ್ರತಿನಿಧಿಸುತ್ತಿದ್ದು ಚಿಂತನೆಗೆ ಅವಕಾಶವನ್ನು ನೀಡುವಂತಿದೆ. ನರಸಿಂಹನ ಪ್ರಾಚೀನ ಶಿಲ್ಪಗಳೆಲ್ಲವೂ ಪ್ರಕೃತಿಯ ಸಾಕಾರಸ್ವರೂಪಗಳಿಗೆ ಸಮಾನವಾದದ್ದೆಂದು ಭಾವಿಸುವುದರಲ್ಲಿ ಅಪರಾಧವೇನಿಲ್ಲವೆನ್ನಬಹುದು.

ಪುರಾಣಮೂಲಗಳ ಪ್ರಕಾರ ಮಂಗಳಗಿರಿಯ ದೇವಾಲಯವನ್ನು ಕೃತಯುಗದ ಕಾಲಕ್ಕೆ ಸೇರಿಸಲಾಗುತ್ತದೆ. ಇಲ್ಲಿನ ಬೆಟ್ಟಕ್ಕೆ ನಾಲ್ಕು ಯುಗಗಳಲ್ಲಿ ಬೇರೆಬೇರೆ ಹೆಸರುಗಳಿದ್ದ ಹಾಗೆ ತಿಳಿದುಬರುತ್ತದೆ. ಕೃತಯುಗದಲ್ಲಿ ತೋತಾದ್ರಿ, ತ್ರೇತಾಯುಗದಲ್ಲಿ ಸ್ತುತ್ಯಾದ್ರಿ, ದ್ವಾಪರಯುಗದಲ್ಲಿ ಮುಕ್ತ್ಯಾದ್ರಿ, ಕಲಿಯುಗದಲ್ಲಿ ಮಂಗಳಾದ್ರಿಯೆಂಬ ನಾಮಧೇಯಗಳನ್ನು ಹೊಂದಿದ ಇಲ್ಲಿನ ಶಿಲಾ ಸಮೂಹದಲ್ಲಿ ದೇವಾಲಯದ ಅಥವಾ ದೈವಸಾನ್ನಿಧ್ಯದ ಪ್ರಾಚೀನತೆಯನ್ನು ಗುರುತಿಸುವ ಸಾಹಸ ಕಥೆಯು ಪೌರಾಣಿಕ ಪದರಗಳಲ್ಲಿ ಅಡಕವಾಗಿದೆ. ಹರಪ್ಪ-ಮೊಹೆಂಜೊದಾರೊಗಳ ಪ್ರಾಚೀನ ನಾಗರಿಕತೆಯಲ್ಲಿ ದೇವರಪೂಜಾ ವಿಧಾನಗದ್ದವು ಎಂಬುದಕ್ಕೆ ಮಣ್ಣಿನ ಮೂರ್ತಿಗಳು ಅಲ್ಲಿನ ಅನ್ವೇಷಣೆಗಳಲ್ಲಿ ದೊರೆತಿರುವಂತೆ ಪ್ರಾಚೀನ ದೇವಾಲಯದ ಅವಶೇಷಗಳು ನಮಗಿನ್ನೂ ಲಭ್ಯವಾಗಬೇಕಷ್ಟೆ. ಅಲ್ಲಿಯವರೆಗೆ ದೇವಾಲಯಗಳ ರಚನೆಯ ಕಾಲವನ್ನು ಕ್ರಿಸ್ತಶಕದ ನಾಲ್ಕು-ಐದನೆ ಶತಮಾನಗಳಿಗೆ ಸೇರುತ್ತದೆಂದು ಹೇಳಬಹುದು.

## ಪುರಾಣ ಪರಂಪರೆ

ಮಂಗಳಗಿರಿಗೆ ಸಂಬಂಧಿಸಿದ ಪುರಾಣಕತೆ ಆಧಾರದಂತೆ ಮಹಾವಿಷ್ಣುವು ಭೂಲೋಕದಲ್ಲಿ ಸಂಚರಿಸಿದ ಎಂಟು ಕ್ಷೇತ್ರಗಳಲ್ಲಿ ತೋತಾದ್ರಿಯು ಸೇರಿದೆ. ವಿಷ್ಣು ನಮುಚಿಯೆಂಬ ರಾಕ್ಷಸನನ್ನು ಕೊಂದು ನರಸಿಂಹಾಕೃತಿಯಿಂದ ಬೆಟ್ಟದ ಮೇಲಿರುತ್ತಾನೆ. ಅವನ ನಿಶ್ವಾಸದ ಧೂಪವ ಬೆಟ್ಟಪ್ರದೇಶವೆಲ್ಲ ತುಂಬಿಹೋದದ್ದರಿಂದಾಗಿ ಇದಕ್ಕೆ ತೋತಾದ್ರಿಯೆಂಬ ಹೆಸರು ಬಂದಿತೆಂದು ಹೇಳುತ್ತಾರೆ. ತನ್ನ ಭೀಕರ ಸ್ವರೂಪವನ್ನು ಉಪಸಂಹಾರ ಮಾಡಬೇಕೆಂದು ದೇವತೆಗಳು ಬೇಡಿಕೊಂಡ ಕಾರಣ ಸ್ವಾಮಿಯು ಪ್ರಸನ್ನನಾಗಿ ಅಮೃತವನ್ನು ಕುಡಿದು ಶಾಂತನಾಗುತ್ತಾನೆ. ಇದು ಕೃತಯುಗಕ್ಕೆ ಸಂಬಂಧಪಟ್ಟ ಘಟನೆಯಾಗಿದೆ. ನಂತರ ತ್ರೇತಾಯುಗ

ದಲ್ಲಿ ಜೇನುತುಪ್ಪ, ದ್ವಾಪರಯುಗದಲ್ಲಿ ಹಾಲು ಮತ್ತು ಕಲಿಯುಗದಲ್ಲಿ ಪಾನಕವನ್ನು ನೈವೇದ್ಯವಾಗಿ ಬಳಸಲು ಸೂಚಿಸಿದಂತೆ ಇಂದಿಗೂ ಇಲ್ಲಿರುವ ಸ್ವಾಮಿಗೆ ಪಾನಕ ನೈವೇದ್ಯವನ್ನು ಸಲ್ಲಿಸುತ್ತಾರೆ.

ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಪರಲೋಕಕ್ಕೆ ಸಾಗಿರಬೇಕಾದರೆ ಹನುಮಂತಾದಿಗಳು ಅವನನ್ನು ಅನುಸರಿಸುತ್ತಿರುತ್ತಾರೆ. ಆಗ ವಿಷ್ಣುಭಕ್ತರು ಅವರನ್ನು ಅಡ್ಡಗಟ್ಟಿ ರಾಮಾವತಾರ ಕಾಲದಲ್ಲಿ ಲೋಕಸಂಚಾರ ಮಾಡಿರುವರಾದರೂ ಅವರಿಗೆ ತೋತಾದ್ರಿಯಲ್ಲಿ ಭಗವಂತನ ಸೇವೆ ಮಾಡಿಲ್ಲವಾದ ಕಾರಣ ಮುಕ್ತಿಯಿಲ್ಲವೆಂದು ತಿಳಿಸಿದಾಗ ಅವರು ತೋತಾದ್ರಿಗೆ ಬಂದು ಅಲ್ಲಿ ಕ್ಷೇತ್ರಪಾಲಾದಿಗಳಾಗಿ ನೆಲಸಿ ಮುಕ್ತಿಹೊಂದುತ್ತಾರೆ. ಈ ಕಾರಣದಿಂದ ಇದು ಮುಕ್ತ್ಯಾದ್ರಿಯಾಗಿದೆ.

ದ್ವಾಪರಯುಗದಲ್ಲಿ ಪ್ರಜೆಗಳು ಸ್ವರ್ಗಸುಖವನ್ನು ಅನುಭವಿಸುತ್ತಿರುತ್ತಾರೆ. ತಾವು ಮುಂದಿನ ಜನ್ಮದಲ್ಲಿ ಜನಿಸಲು ಸೂಕ್ತವಾದ ಸ್ಥಳವೊಂದನ್ನು ಸೂಚಿಸಬೇಕೆಂದು ದೇವೇಂದ್ರನನ್ನು ಕೋರುತ್ತಾರೆ. ಅದರಂತೆ ದೇವರಾಜನು ಅವರಿಗೆ ಧರ್ಮಾದ್ರಿ ಇಲ್ಲವೆ ಮುಕ್ತ್ಯಾದ್ರಿಗೆ ಹೋಗಿ ದೇವರ ಆರಾಧನೆ ಮಾಡುವಂತೆ ತಿಳಿಸುತ್ತಾನೆ. ಅವನ ಸೂಚನೆಯಂತೆ ಇಲ್ಲಿನ ಭಗವಂತನನ್ನು ಪೂಜಿಸಿ ವಿಷ್ಣುದಾಸು, ಹರಿದಾಸು ಎಂಬುವರು ಮುಕ್ತಿಹೊಂದಿದಂತೆ ತಿಳಿದುಬರುತ್ತದೆ.

ಮಂಗಳಗಿರಿಯ ಬೆಟ್ಟಕ್ಕೆ ಸಂಬಂಧಿಸಿದಂತೆ ಒಂದು ಕತೆಯು ಪ್ರಚಲಿತವಾಗಿದೆ. ಪಾರಿಯಾತ್ರನೆಂಬುವನು ಬೆಟ್ಟದ ರೂಪವನ್ನು ಧರಿಸಿದ ಸುಶೀಲಳನ್ನು ಮದುವೆಯಾಗುತ್ತಾನೆ. ಅವರಿಗೆ ಹ್ರಸ್ವಶೃಂಗಿ ಎಂಬ ಕುಮಾರನು ಜನಿಸುತ್ತಾನೆ. ಅವನ ರೂಪವು ವಿಚಿತ್ರವಾಗಿರುತ್ತದೆ. ಇದನ್ನು ಕಂಡ ತಂದೆ-ತಾಯಿಗಳು ದುಃಖಿತರಾಗುತ್ತಾರೆ. ಹ್ರಸ್ವಶೃಂಗಿಯು ದೇಶಾಟನೆ ಮಾಡುತ್ತ ಮಂಗಳಗಿರಿಗೆ ಬಂದು ತಪಸ್ಸನ್ನಾಚರಿಸುತ್ತಾನೆ. ಗಜರೂಪವನ್ನು ಧರಿಸುವ ವರವು ಅವನಿಗೆ ಪ್ರಾಪ್ತವಾಗುತ್ತದೆ. ತಂದೆತಾಯಿಗಳು ತಮ್ಮ ಮಗನನ್ನು ಹುಡುಕಿಕೊಳ್ಳುತ್ತಾರೆ. ಆದರೆ ಮಗನು ಮಾತ್ರ ತಾನು ಮನೆಗೆ ಬರುವುದಿಲ್ಲವೆಂದು ಖಂಡಿತವಾಗಿ ತಿಳಿಸುತ್ತಾನೆ. ಬಂದದಾರಿಗೆ ಪ್ರಯೋಜನ ಕಾಣದೆ ಅವರು ಮರಳಿಹೋಗುತ್ತಾರೆ. ಗಜಾಕೃತಿಯನ್ನು ಪಡೆದ ಹ್ರಸ್ವಶೃಂಗಿಯನ್ನು ಎಲ್ಲರೂ ಹೊಗಳಿ ಕೊಂಡಾಡುತ್ತಾರೆ. ಆದ್ದರಿಂದ ಇದು ಸ್ತುತಾದ್ರಿಯೆಂದು ಕರೆಸಿಕೊಂಡು ಜನಸಾಮಾನ್ಯರಲ್ಲಿ ಪ್ರಚಾರದಲ್ಲಿದೆ.

## ಇತಿಹಾಸ

ಮಂಗಳಗಿರಿಯಲ್ಲಿನ ಮೂರ್ತಿಶಿಲ್ಪವು ವಿಷ್ಣುಕುಂಡಿನ ರಾಜರ ಕಾಲಕ್ಕೆ ಸೇರಿದ್ದೆಂದು ಭಾವಿಸಬಹುದಾಗಿದೆ. ಈ ರಾಜರು ಕ್ರಿಸ್ತಶಕ ನಾಲ್ಕನೆ ಶತಮಾನದಿಂದ ಆರನೆಯ ಶತಮಾನದವರೆಗೆ ರಾಜ್ಯವನ್ನು ಕಟ್ಟಿ ಆಳಿರುತ್ತಾರೆ. ಇಲ್ಲಿರುವ ದೇವಾಲಯ ನಿರ್ಮಾಣವನ್ನು ಅವರ ಕಾಲಕ್ಕೆ ಸೇರಿಸಬಹುದು. ಇದಕ್ಕೆ ಮತ್ತೊಂದು ನಿದರ್ಶನವಾಗಿ ಉಂಡವಲ್ಲಿಯಲ್ಲಿರುವ

ದೇವಾಲಯವನ್ನು ನೋಡಬಹುದು. ಸರಿಸುಮಾರು ಇದೇ ಕಾಲದಲ್ಲಿ ದೇವಾಲಯಗಳ ವಾಸ್ತುಶಿಲ್ಪವು ರೂಪುಗೊಂಡಿದ್ದೆನ್ನಬಹುದು. ವಿಷ್ಣುಕುಂಡಿನರು ಪಲ್ಲವರಾಜರಾಗಿದ್ದರು. ಇವರು ಪೂರ್ವ-ಪಶ್ಚಿಮ ಚಾಲುಕ್ಯರಾಜರ ವೈರಿಗಳಾಗಿದ್ದರು. ಚಾಳುಕ್ಯದೊರೆಗಳು ಸ್ವಭಾವತಃ ಶೈವಮತದ ಪರವಾಗಿದ್ದರೂ ವಿಷ್ಣುವಿರೋಧಿಗಳಲ್ಲ. ಹಾಗಿದ್ದಲ್ಲಿ ಪಟ್ಟದ ಕಲ್ಲಿನ ನರಸಿಂಹ ಶಿಲ್ಪ, ಬಾದಾಮಿಯ ವಿಷ್ಣುಶಿಲ್ಪಗಳಾದ ನರಸಿಂಹ, ವರಾಹ, ಆದಿನಾರಾಯಣ ಇವು ಯಾವುವೂ ಅಭಿವೃದ್ಧಿಯನ್ನು ಕಾಣುತ್ತಿರಲಿಲ್ಲ. ಆದರೆ ಅವರ ಕಾಲಕ್ಕೆ ಉಂಡುವಲ್ಲಿ, ಮಂಗಳಗಿರಿಯ ದೇವಾಲಯಗಳು ನಿರೀಕ್ಷಿತ ಮಟ್ಟದಲ್ಲಿ ಅಭಿವೃದ್ಧಿಯನ್ನು ಹೊಂದಲಿಲ್ಲ. ಪಲ್ಲವರಾಜರಲ್ಲಿ ನರಸಿಂಹನೂ, ಚಾಲುಕ್ಯರಾಜರಲ್ಲಿ ಮಂಗಲೇಶನೂ ಪ್ರಸಿದ್ಧರಾದ ರಾಜರೇ ಆಗಿದ್ದಾರೆ. ಮಂಗಳಗಿರಿಯು ಮಂಗಲೇಶನ ಹೆಸರಿನೊಂದಿಗೆ ಸಾಮ್ಯಹೊಂದಿರುವುದು ಈ ಸಂದರ್ಭದಲ್ಲಿ ಚಿಂತಿಸತಕ್ಕದ್ದಾಗಿದೆ.

ವಿಜಯನಗರದ ಅರಸರಲ್ಲಿ ಕೃಷ್ಣದೇವರಾಯರು ಕೊಂಡವೀಟು ರಾಜ್ಯವನ್ನು ವಶಪಡಿಸಿಕೊಂಡ ಬಳಿಕ ಮಂಗಳಗಿರಿಯ ದೇವಾಲಯದ ಬೆಳವಣಿಗೆಯಾಗಿರುವುದು ಕಂಡು ಬರುತ್ತದೆ. ಇದೇ ಕಾಲದಲ್ಲಿ ಕೃಷ್ಣದೇವರಾಯರ ಮಾರ್ಗಾನುಯಾಯಿಗಳಾದ ಬೇರೊಬ್ಬ ರಾಜಪ್ರಮುಖರು ದೇವಾಲಯಕ್ಕೆ ಬರಲು ಮೆಟ್ಟಲುಗಳನ್ನು ನಿರ್ಮಿಸಿರುವಂತೆ ತಿಳಿದು ಬರುತ್ತದೆ. ಸದಾಶಿವರಾಯರ ಕಾಲದಲ್ಲಿ ಅವರ ಬಂಧುಗಳಾದ ರಾಮರಾಜು, ಯರ್ರ ತಿರುಮಲರಾಜು, ದೇವರಾಜು ಮುಂತಾದವರು ದೇವಾಲಯದ ಅಭಿವೃದ್ಧಿಗೆ ಶ್ರಮಪಟ್ಟವರಾಗಿದ್ದಾರೆ. ದೇವಾಲಯದ ಸುತ್ತಲೂ ಪ್ರಾಕಾರ, ದೇವಾಲಯಕ್ಕೆ ಅಗತ್ಯವಾದ ಗೋಪುರಗಳು, ಮಂಟಪಗಳು, ಹೂದೋಟ, ಪುಷ್ಕರಿಣಿ, ಉತ್ಸವಕ್ಕೆ ಬಳಸುವ ವಾಹನಗಳು ರಥಗಳನ್ನು ಏರ್ಪಾಟು ಮಾಡಲಾಗಿದೆ. ದೇವರ ನಿತ್ಯ ಕೈಂಕರ್ಯಗಳಿಗೆ ಅಗತ್ಯ ಕಾರ್ಯಕ್ರಮ ಗಳನ್ನು ಯೋಜಿಸಲಾಗಿದೆ. ದೇವರ ದೀಪಾರಾಧನೆಗೆ ವ್ಯವಸ್ಥೆ ಮಾಡಲಾಗಿದೆ. ನೈವೇದ್ಯಕ್ಕೆ ಅಗತ್ಯವಾದ ಸಾಮಗ್ರಿ, ಪಾನಕ, ವಗ್ಗೈರೆ, ತಂಪು ಪಾನೀಯಗಳಿಗೆ ಬೇಕಾದ ದ್ರವ್ಯಗಳನ್ನು ನೀಡಲಾಗಿದೆ. ಜಾತ್ರೆ ಉತ್ಸವಗಳಿಗೆ ಪ್ರೋತ್ಸಾಹವಾಗುವಂತೆ ದಾನಗಳನ್ನು ಕೊಡಲಾಗಿದೆ. ಅಂಗರಂಗ ವೈಭವಗಳಿಗೆ ದೇವರ ಕೈಂಕರ್ಯ ಮಾಡುವ ವಿವಿಧ ವೃತ್ತಿಗಳವರಿಗೆ ಭೂಮಿ ಕಾಣಿಕೆ ಬಿಡಲಾಗಿದೆ. ಕೆಲವು ಗ್ರಾಮಗಳನ್ನು ಉಂಬಳಿ ಕೊಟ್ಟಿರುತ್ತದೆ, ಶಾಶ್ವತ ಏರ್ಪಾಡು ಗಳನ್ನು ದೇವಾಲಯದ ಬೆಳವಣಿಗೆಗೆ ಮಾಡಲಾಗಿರುವುದನ್ನು ಇಲ್ಲಿ ಗಮನಿಸಬಹುದು.

ಮಂಗಳಗಿರಿಯ ದೇವಾಲಯದ ಉತ್ಸವ ವಿಗ್ರಹಗಳ ನಿರ್ಮಾಣವನ್ನು ಕುಮಾರ ಕೊಂಡರಾಜುರವರ ಕಾಲಕ್ಕೆ ಸೇರಿಸಬಹುದು. ಇದರ ಪ್ರತಿಷ್ಠೆಯ ಸಂದರ್ಭದಲ್ಲಿ ಗ್ರಾಮವನ್ನು ದತ್ತಿ ನೀಡಲಾದ ವಿಚಾರವಿದೆ. ರಾಮಾನುಜ ಕೂಟದ ಅಧಿಕಾರಿ ತಾಳ್ಳಪಾಕ ಚಿಕ್ಕ ತಿರುಮಲಯ್ಯನವರು ದೇವರ ಕೈಂಕರ್ಯಗಳಿಗಾಗಿ ಭೂದಾನ ನೀಡಿದ್ದಾರೆ. ಭುಜಬಲರಾಯರು ದೇವರಿಗೆ ಮಾನ್ಯ ನೀಡಿದ್ದಾರೆ. ದೇವರ ನೈವೇದ್ಯಕ್ಕಾಗಿ ನೀಡುವ ಪ್ರಮಾಣದಲ್ಲಿ ... ಒಂದು ಭಾಗವನ ...ದವಾಗಿ ನೀಡಬೇಕೆಂಬ ಕಟ್ಟಳೆಯಿದೆ.



ಸುಮಾರು ಹದಿನಾರನೆ ಶತಮಾನದವರೆಗೆ ದೇವಾಲಯದಲ್ಲಿನ ಕೈಂಕರ್ಯಗಳು ಸುಗಮವಾಗಿ ನಡೆದುಕೊಂಡು ಬಂದಂತೆ ತಿಳಿದುಬರುತ್ತದೆ. ವಿಜಯನಗರದ ಅರಸು ಅಳಿಯ ರಾಮರಾಯರ ನಿಧನದ ನಂತರದಲ್ಲಿ ದೇಶದೆಲ್ಲೆಡೆ ದುರಂತಗಳು ಸಂಭವಿಸುತ್ತವೆ. ದೇವಾಲಯಗಳು ಶಿಥಿಲಗೊಳ್ಳುತ್ತದೆ. ಪೂಜಾಕಾರ್ಯಗಳಿಗೆ ಧಕ್ಕೆಯುಂಟಾಗುತ್ತದೆ. ಪ್ರಜೆಗಳು ತಮ್ಮ ತಮ್ಮ ಊರುಗಳನ್ನು ಬಿಟ್ಟು ವಲಸೆ ಹೋಗುತ್ತಾರೆ. ಈ ಸಂದರ್ಭದಲ್ಲಿ ಮಂಗಳಗಿರಿಯ ಬಜಾರಿನಲ್ಲಿ ಗೋಲ್ಕೊಂಡ ನವಾಬನು ಆಯಾಯ ವೃತ್ತಿಗಳವರಿಗೆ ಕೆಲಸಕಾರ್ಯಗಳನ್ನು ನಿಗದಿಪಡಿಸಿ ಶಾಸನಗಳನ್ನು ಹಾಕಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ತುಂಬ ಶ್ರಮಪಟ್ಟಿದ್ದಾನೆ.

ಮಂಗಳಗಿರಿಯು ತನ್ನಲ್ಲಿ ಹೊತ್ತು ನಿಂತಿರುವ ಪುರಾಣ-ಇತಿಹಾಸಗಳ ಘಟನೆಗಳು ಅತ್ಯಮೂಲ್ಯವಾಗಿವೆ. ತಾನೇ ಪ್ರಕೃತಿಯೂ-ಪುರುಷನೂ ಆಗಿರುವ ಭಗವಂತನ ನೆಲೆಯನ್ನು ಇಲ್ಲಿ ಕಾಣಬಹುದಾಗಿದೆ. ಮನಸ್ಸಿನ ದುಗುಡಗಳಿಂದ ಪರಿಹಾರ ಕಾಣಬೇಕಾದಲ್ಲಿ ಬೆಟ್ಟವನ್ನೇರಿ ಹೋಗುವ ದೈಹಿಕ ಪರಿಶ್ರಮವೂ ನೆರವಾಗಬಹುದು. ಬೆಟ್ಟದಲ್ಲಿ ಅಡಕವಾಗಿರುವ ಸ್ವಾಮಿಯು ಬೆಟ್ಟವೇ ತಾನಾಗಿರುವನೇನೋ ಎಂಬ ವಿಚಾರವಂತಿಕೆಯ ಆಶ್ರಯದಾತನಾಗಿರುವ ಮಂಗಳ ಗಿರಿಯ ಪಾನಕಾಲ ನರಸಿಂಹ ಸ್ವಾಮಿಯು ಪುರಾಣಪುರುಷನೂ ಆಗಿ ಕಂಡುಬರುತ್ತಿದ್ದಾನೆ.

ನರಸಿಂಹಸ್ವಾಮಿಯ ರಥೋತ್ಸವವು ಕಾಮನಹುಣ್ಣಿಮೆಯ ಕಾಲದಲ್ಲಿ ನೆರವೇರುತ್ತದೆ. ಫಾಲ್ಗುಣ ಶುದ್ಧ ಪೌರ್ಣಮಿಯಿಂದ ಒಂಭತ್ತು ದಿನಗಳ ಕಾಲ ಉತ್ಸವಾದಿಗಳು ನೆರ ವೇರುತ್ತವೆ. ಪಾನಕ ಸೇವೆಯು ವಿಶೇಷವಾಗಿ ನಡೆಯುತ್ತದೆ. ದೇವಸ್ಥಾನದ ಧರ್ಮಛತ್ರ, ಲೋಕಲ್‌ಫಂಡ್ ಛತ್ರಗಳಲ್ಲದೆ ಅನೇಕ ಇನ್ನಿತರ ಧರ್ಮಸತ್ರಗಳು ಇಲ್ಲಿವೆ. ಇಲ್ಲಿರುವ ಧ್ವಜಸ್ತಂಭವು ನೂತನವಾದದ್ದು. ಸುಮಾರು ೫೦ ವರ್ಷಗಳ ಹಿಂದೆ ಸ್ಥಾಪನೆ ಮಾಡಿದ್ದಾರೆ.

## ಎತ್ತರವಾದ ಗೋಪುರ

ಗೋಲ್ಕಂಡ ನವಾಬರ ಆಳ್ವಿಕೆಯ ನಂತರ ಹೈದರಾಲಿಯು ಕ್ರಿಸ್ತಶಕ ೧೭೮೦ರಲ್ಲಿ ಈ ಪಟ್ಟಣವನ್ನು ಸೂರೆಮಾಡುತ್ತಾನೆ. ದೇವಸ್ಥಾನದ ವ್ಯವಸ್ಥೆಗಳನ್ನು ಕರಣದವರು, ನಂಬೂದಿರಿಗಳು ನೋಡಿಕೊಳ್ಳುತ್ತಿರುತ್ತಾರೆ. ಜಮೀನುದಾರರಿಗೆ ಇದರ ಕಡೆ ಗಮನವಿಲ್ಲದಾಗಿ ರುತ್ತೆ. ದೇವಾಲಯದ ರಕ್ಷಣೆಯನ್ನು ವಾಸಿರೆಡ್ಡಿ ವೆಂಕಟಾದ್ರಿ ಎಂಬುವವರು ವಹಿಸಿಕೊಂಡು ಮಹಾದ್ವಾರಕ್ಕೆ ಎತ್ತರವಾದ ಗಾಳಿಗೋಪುರವನ್ನು ನಿರ್ಮಿಸಿಕೊಟ್ಟು ದೇವರ ಪೂಜಾ ಕಾರ್ಯಗಳು, ಉತ್ಸವಗಳು ಯಥಾರೀತಿಯಲ್ಲಿ ನಡೆಯುವಂತೆ ಮಾಡಿರುತ್ತಾರೆ. ಅಗತ್ಯವಾದ ಭೂಮಿ ಕಾಣಿಕೆಗಳನ್ನು ದಾನವಾಗಿ ನೀಡಿರುತ್ತಾರೆ. ಇತಿಹಾಸದ ಏಳು ಬೀಳುಗಳಲ್ಲಿ ಮಂಗಳಗಿರಿಯ ಅಧ್ಯಯವು ತನ್ನ ಪ್ರತಾಪವನ್ನು ವೈಭವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. ಪವಾಡಸದೃಶವಾದ ರೀತಿಯಲ್ಲಿ ಗಂಭೀರ ನಿಲುವನ್ನು ಹೊಂದಿರುವ ಪರ್ವತದ ಹಿರಿಮೆಯು ಮುಗಿಲುಮುಟ್ಟುವ ರೀತಿಯಲ್ಲಿ ಮೆರೆದಿದೆ.

ನರಸಿಂಹಸ್ವಾಮಿ ಆಲಯಕ್ಕೆ ಉತ್ತರದಲ್ಲಿ ರಾಜಲಕ್ಷ್ಮಿ ಅಮ್ಮನವರ ಪ್ರತ್ಯೇಕ ದೇವಸ್ಥಾನವನ್ನು ಕಾಣಬಹುದು. ದಕ್ಷಿಣಕ್ಕೆ ಸೀತಾಲಕ್ಷ್ಮಣ ಸಮೇತ ರಾಮಾಲಯವಿದೆ. ಪಶ್ಚಿಮದಲ್ಲಿ ವಾಹನಶಾಲೆಯಿದೆ. ಪೂರ್ವದಲ್ಲಿ ಆಂಜನೇಯನ ಭಕ್ತರನ್ನು ಅನುಗ್ರಹಿಸುತ್ತ ನಿಂತಿದ್ದಾನೆ. ಬೆಟ್ಟದ ಕೆಳಗಿರುವ ಕಾಲುವೆಗೆ ರಕ್ತಕಾಲುವೆಯೆಂಬ ಹೆಸರಿದೆ. ನಮುಚಿಯನ್ನು ಕೊಂದದ್ದರಿಂದ ಅವನ ರಕ್ತವು ಇಲ್ಲಿ ಹರಿದು ಇದಕ್ಕೆ ಈ ಹೆಸರು ಬಂದಿದೆಯೆಂದು ಹೇಳುತ್ತಾರೆ.

ಇತಿಹಾಸಕಾರರ ಅಭಿಪ್ರಾಯದಂತೆ ಮೊದಲು ಅಗ್ನಿಪರ್ವತವಾಗಿದ್ದ ಮಂಗಳಗಿರಿಯು ಈಗ ಪ್ರಶಾಂತವಾಗಿ ಪುಣ್ಯಸ್ಥಳವಾಗಿ ಜನರ ಕೋರಿಕೆಗಳನ್ನು ನೆರವೇರಿಸುತ್ತಿರುವ ಪೂಜಾ ಮಂದಿರದಿಂದ ಕೂಡಿ ಪ್ರಸಿದ್ಧವಾಗಿದೆ. ವೇದಪಾಠಕರು, ಪಂಡಿತವರ್ಗದವರಿಂದ ಅರ್ಚನಾದಿ ಗಳನ್ನು ಸ್ವೀಕರಿಸುತ್ತ ನೆಲೆಸಿರುವ ಪಾನಕ ನರಸಿಂಹಸ್ವಾಮಿಯು ಭಕ್ತರ ದುರಿತಗಳನ್ನು ನಿವಾರಿಸಿ ಅವರನ್ನು ಪಾವನಗೊಳಿಸುತ್ತಿದ್ದಾನೆ.

## ತಿರುಪತಿ ನರಸಿಂಹ



ತಿರುಮಲೆಯ ಷೋಡಶಬಾಹು ವಿದಾರಣ ನರಸಿಂಹ

ವೆಂಕಟೇಶ್ವರ ಸ್ವಾಮಿಯ ಆರಾಧನೆಯ ನೆಲೆಯಾಗಿ ವಿಶ್ವದ ಗಮನವನ್ನೇ ತನ್ನೆಡೆ ಸೆಳೆದಿರುವ ಪವಿತ್ರಕ್ಷೇತ್ರ ತಿರುಪತಿ. ತಿರುಪತಿ ಎಂಬ ಹೆಸರು ಕೇಳಿದಂತೆ ತಿಮ್ಮಪ್ಪ ಅರ್ಥಾತ್ ಶ್ರೀನಿವಾಸನು ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತಾನೆ. ಸ್ವಾಮಿ ಪುಷ್ಕರಿಣಿಯ ತಟದಲ್ಲಿ ಬಂದು ನಿಂತ ಸ್ವಾಮಿಯು ಅಸಂಖ್ಯ ಆರಾಧಕರ ಮನಸ್ಸುಗಳಲ್ಲಿ ಚಿರಸ್ಥಾಯಿಯಾಗಿದ್ದಾನೆ. ಆಂಧ್ರನಾಡಿನ ಧರ್ಮಕ್ಷೇತ್ರವೆಂದೇ ಪ್ರಸಿದ್ಧವಾಗಿರುವ ತಿರುಪತಿಯು ಬೆಳೆದ ಬಗೆಯು ಕುತೂಹಲವಾದದ್ದು. ಇತಿಹಾಸದ ಆರಂಭಕಾಲದಲ್ಲಿ ಮೊದಲಿನ ವಿಗ್ರಹದ ಪ್ರತಿಷ್ಠೆಯಾಗಿ ನಂತರ ಇಲ್ಲಿ ಆಲಯವು ನಿರ್ಮಾಣವಾಯಿತು. ಈ ಸ್ಥಳವು ಹಂತಹಂತವಾಗಿ ಮೇಲೇರಿತು. ಕಾಲಕಳೆದಂತೆ ಜನಜೀವನವು ದೇವರ ಕೈಂಕರ್ಯಗಳೂ ಅಭಿವೃದ್ಧಿ ಹೊಂದಿದವು. ಮತ, ಪಂಥ, ಭಾಷೆಗಳ ಭೇದವಿಲ್ಲದೆ ಭಗವಂತನ ದರ್ಶನಕ್ಕಾಗಿ ಜನ ಬೆಟ್ಟವೇರಿ ಏಳುಮಲೆಗಳನ್ನು ದಾಟಿ ತಮ್ಮ ಕಷ್ಟ-ಕಾರ್ಪಣ್ಯಗಳನ್ನು ಪರಿಹರಿಸಿಕೊಂಡು ನಡೆದರು. ಇವರೆಲ್ಲರ ಮುಖ್ಯ ಆಕರ್ಷಣೆ ಇಲ್ಲಿರುವ ವೆಂಕಟೇಶ್ವರ ಸ್ವಾಮಿ. ಅವರವರ ಭಾವಕ್ಕೆ ಅವರವರ ಭಕ್ತಿಗೆ ತಕ್ಕಂತೆ ಭಗವಂತನನ್ನು ಆರಾಧಿಸುವ ಆತನು ಒಬ್ಬನೇ ಶ್ರೀನಿವಾಸನಾಗಿ ಕಾಣಿಸಿದನಾದರೂ ಭಾಗವಂತನ ಹಲವಾರು ರೂಪಗಳನ್ನು ನಾವಿಲ್ಲಿ ದರ್ಶಿಸಬಹುದಾಗಿದೆ. ಹರಿಯ ಅನೇಕ ಅವತಾರಗಳು ಕೋದಂಡರಾಮ, ಗೋವಿಂದರಾಜ ಪಾರ್ಥಸಾರಥಿ ಇತ್ಯಾದಿ ಶಿವನ ಅನೇಕ•ರೂಪಗಳೂ, ಶಕ್ತಮೂರ್ತಿಗಳೂ ಇಲ್ಲಿ ಕಂಡುಬರುತ್ತೆ. ತಿರುಪತಿಯು ಬೆಳೆದು ಬಂದಿರುವ ರೀತಿಯನ್ನು ನೋಡಿದರೆ ಇದೊಂದು ಎಲ್ಲ ಪಂಥಗಳ ಆಲಯಗಳ ಸಂಕೀರ್ಣವೆಂದೇ ಹೇಳಬಹುದು. ಇಂಥದಲ್ಲಿ ಹರಿಯ ಅರ್ಚಾವತಾರಿಯಾದ ನರಸಿಂಹನ ಆರಾಧನಾ ನೆಲೆಯನ್ನು ಸಹ ಗುರುತಿಸುವುದು ಅಸಾಧ್ಯವೇನಲ್ಲ.

ಹರಿಯ ಅವತಾರಗಳು ಪ್ರಧಾನವಾಗಿ ಲೆಕ್ಕಕ್ಕೆ ಒಳಪಡುವುದು ಹತ್ತು. ಇದರಲ್ಲಿ ನರಸಿಂಹ ನಾಲ್ಕನೆಯ ಸ್ಥಾನದಲ್ಲಿರುವವನು ಹಿಂದಿನ ಅವತಾರ ರೂಪಗಳನ್ನು ಪೂಜಿಸುವ ಪದ್ಧತಿ ಬೆಳೆಯಲಿಲ್ಲ. ನರಸಿಂಹ ಬಹುಜನರ ಅರ್ಚಾವತಾರಿಯಾಗಿ ತಿರುಪತಿಗೆ ಹೋಗಬೇಕಾದರೆ ತಿಮ್ಮಪ್ಪನ ಭಕ್ತರೊಂದಿಗೆ ಮೂಟೆಹೊತ್ತು ಸಾಗಬೇಕೆಂಬುದು ಆಚಾರದ ಮಾತು.

ಶ್ರೀನಿವಾಸನ ಸನ್ನಿಧಿಯಲ್ಲಿ ನರಸಿಂಹನ ಆಲಯವೂ ಇದ್ದಲ್ಲಿ ಈ ರೀತಿಯ ಸಂಪ್ರದಾಯದ ತಡೆಗೆ ಉತ್ತರಿಸಬಹುದೇನೋ ಎಂಬ ಆಲೋಚನೆ ಮನಸ್ಸಿನಲ್ಲುಂಟಾಗಿದ್ದರೆ ಅದಕ್ಕೆ ಆಶ್ಚರ್ಯಪಡಬೇಕಾದದ್ದೇನಿಲ್ಲ. ಈ ಕಾರಣಕ್ಕಾಗಿ ಎಂಬಂತೆ ಬೆಟ್ಟದ ದೇವರ ಆಲಯದ ಒಳಗಡೆ ನರಸಿಂಹಸ್ವಾಮಿಯ ಸನ್ನಿಧಿಯನ್ನು ಕಾಣಬಹುದಾಗಿದೆ. ಇದಷ್ಟೇ ಅಲ್ಲದೆ ಆಲಯದ ಕಂಬಗಳಲ್ಲಿ ಬೆಟ್ಟದ ದಾರಿಯಲ್ಲಿ, ತಿರುಪತಿಯಲ್ಲಿ ಹಲವು ಕಡೆ ನರಸಿಂಹನು ಭಕ್ತರನ್ನು ಆಕರ್ಷಿಸುತ್ತಿದ್ದಾನೆ. ಕೋಟಿ ಕೋಟಿ ಭಕ್ತ ಜನರ ಮನದಂತರಾಳದಲ್ಲಿ ತುಂಬಿಕೊಂಡು ನೆಲೆಸಿರುವ ವೆಂಕಟೇಶ್ವರ ಸ್ವಾಮಿಯ ಆರಾಧನಾ ಕ್ಷೇತ್ರದಲ್ಲಿ ನರಸಿಂಹನೂ ಸಾಕಷ್ಟು ಪ್ರಭಾವಿತನಾಗಿ ಬೆಳೆದಿದ್ದಾನೆಂಬುದನ್ನು ತಿಳಿದುಕೊಳ್ಳಲು ಇಲ್ಲಿನ ಕೆಲವು ಸಂಗತಿಗಳು ಪೂರಕವಾಗಿವೆ.

# ತಿರುಪತಿಯ ನರಸಿಂಹ ಆಲಯಗಳು

ತಿರುಪತಿಯ ಹೊರವಲಯದಲ್ಲಿ ನರಸಿಂಹಸ್ವಾಮಿಯ ದೇವಾಲಯವಿದೆ. ಇದು ಊರಿನ ಪಶ್ಚಿಮದ ದಿಕ್ಕಿನಲ್ಲಿ ಸಿಹಿನೀರಿನ ಕೆರೆಯ ಬಳಿಯಿದೆ. ಇದೊಂದು ಸಾಧಾರಣ ಆಲಯ ನಿತ್ಯಪೂಜೆ ನಡೆಯುತ್ತಿದ್ದರೂ ಅದರಲ್ಲಿ ಯಾವುದೇ ವೈಭವವಿಲ್ಲ. ಸುಮಾರು ಮೂವತ್ತು ವರ್ಷಗಳ ಹಿಂದೆ ಈ ಆಲಯದ ಪುನರುದ್ಧಾರವಾಗಿದೆ. ದೇವಸ್ಥಾನದ ಹೊರಗಡೆ ಬರಹವಿದ್ದು ಕಲ್ಲೊಂದನ್ನು ನೆಡಲಾಗಿದೆ.

ಇದರ ವಿವರಣೆಯಂತೆ ಭೂತವೈದ್ಯ ವೆಂಕಟಮುನಿಯು ಧರ್ಮಕರ್ತನಾಗಿ ಆಲಯದ ನವೀಕರಣ, ಉದ್ಧರಣ ಕಾರ್ಯವನ್ನು ಸಾಗಗೊಳಿಸಿದವನಾಗಿದ್ದಾನೆ. ಇದು ಸಾರ್ವಜನಿಕರ ನೆರವಿನಿಂದ ಆದಂತೆ ತಿಳಿದುಬರುತ್ತದೆ. ಆಲಯದ ಪಕ್ಕದಲ್ಲಿರುವ ಸುಬ್ರಹ್ಮಣ್ಯದ ಗುಡಿಯಲ್ಲಿ ಪೂಜೆಗೊಳ್ಳುತ್ತಿರುವ ನಾಗರಾಜನ ಶಿಲ್ಪವಿದ್ದು ಸುಂದರವಾಗಿದೆ. ಮಂಚಿನೀಳ್ಳಗುಂಟ ಎಂದು ಕರೆಯುವ ಇಲ್ಲಿನ ನೀರಿನ ಆಸರೆಯ ತಾಣದ ಎದುರಿಗೆ ಶಿವನ ದೇವಸ್ಥಾನವಿದೆ ಇದನ್ನು ಕಾಶಿವಿಶ್ವೇಶ್ವರನೆಂದು ಕೂಡಾ ಕರೆಯುತ್ತಾರೆ. ಜೀರ್ಣೋದ್ಧಾರ ಕಾರ್ಯವು ನಡೆದಿದೆ. ಕೆರೆಯೆಂದು ಕರೆಯಬಹುದಾದ ಯಾವುದೇ ಎದ್ದುಕಾಣುವ ಲಕ್ಷಣಗಳಿಲ್ಲವಾದರೂ ಇರುವಷ್ಟು ಪಳೆಯುಳಿಕೆಗಳಿಂದಲೇ ಮನದಲ್ಲಿ ಚಿತ್ರಣವನ್ನು ಮೂಡಿಸಿಕೊಳ್ಳಲು ಕಷ್ಟವೇನಲ್ಲ. ರಂಗನಾಥನ ವಿಗ್ರಹದಂತೆ ಭಾಸವಾಗುವ ಶಿಲ್ಪವನ್ನು ಕುಂಟೆಯ ಪಶ್ಚಿಮದ ದಿಕ್ಕಿನಲ್ಲಿ ಕಾಣಬಹುದಾಗಿದೆ.

ಕೆರೆಯಲ್ಲಿ ನೀರು ತುಂಬಿರುವಾಗ ಈ ವಿಗ್ರಹವು ಅದರಲ್ಲಿ ಮುಳುಗಿ ಶೇಷ ಶಾಯಿಯು ಸಮುದ್ರದಲ್ಲಿ ತೇಲಾಡುವಂತೆ ಕಾಣುವ ಕಲ್ಪನೆ ಊಹೆಗೆ ಮಾತ್ರ ನಿಲುಕು ವಂತಿರುವುದು. ಇತ್ತೀಚೆಗೆ ಈ ಕೆರೆಯು ತುಂಬಿತ್ತೆಂದು ಹೇಳುವ ಫಲಕವೊಂದಿಲ್ಲದೆ. ಈ ಕೆರೆ ಮತ್ತು ಗುಡಿಗಳ ಕಾರಣವಾಗಿ ಇಲ್ಲಿನ ರಸ್ತೆ ನರಸಿಂಹತೀರ್ಥದ ರಸ್ತೆಯೆಂದು ಹೆಸರು ವಾಸಿಯಾಗಿದೆ. ತಿರುಪತಿಗೆ ಇಲ್ಲಿಂದಲೇ ನೀರು ಪೂರೈಕೆಯಾಗುತ್ತಿತ್ತೆಂದು ತಿಳಿದು ಬರುತ್ತದೆ. ಈಗಲೂ ಸಹಾ ಸ್ವಲ್ಪಮಟ್ಟಿನ ಕುಡಿಯುವ ನೀರಿನ ಅಗತ್ಯವನ್ನು ಇದು ಪೂರೈಸುತ್ತಿದೆ. ಶಾಸನಗಳನ್ನು ಆಧರಿಸಿ ನೋಡುವುದಾದರೆ ಇದನ್ನು ಹಲವು ಶಾಸನಗಳಲ್ಲಿ ಸಿಂಗನ್ ಏರಿಯೆಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ಇದಕ್ಕೆ ಸಿಂಹತೀರ್ಥವೆಂದು ಪರ್ಯಾಯ ಹೆಸರು.

ಕಪಿಲತೀರ್ಥವು ತಿರುಪತಿಯ ಪ್ರೇಕ್ಷಣೀಯ ಮತ್ತು ಪೂಜಾಸ್ಥಳವಾಗಿದೆ. ಇಲ್ಲಿನ ಒಂದು ಗುಹೆಯಲ್ಲಿ ಲಕ್ಷ್ಮೀನರಸಿಂಹನ ಮೂರ್ತಿಯಿದೆ. ಇದು ಇಂದು ಪೂಜೆಗೊಳ್ಳದಿದ್ದರೂ ನೋಡಲು ಸುಂದರವಾಗಿ ಕಾಣುತ್ತದೆ. ಅಲಿಪಿರಿಯಿಂದ ಬೆಟ್ಟಕ್ಕೆ ಹೋಗುವ ಮಾರ್ಗದಲ್ಲಿ -ಕಾಲುದಾರಿ- ಒಂದೆಡೆ ಕಾಲುದಾರಿ ನರಸಿಂಹನ ಗುಡಿಯನ್ನು ಕಾಣಬಹುದು. ಈ ಸ್ವಾಮಿಗೆ ಕೂಡಾ ನಿತ್ಯ ಪೂಜಾದಿಗಳು ನೆರವೇರುತ್ತಿವೆ.

# ತಿರುಮಲೆಯ ನರಸಿಂಹ



ತಿರುಮಲೆಯ ಅಳಗಿಯ ಸಿಂಗರ್ ಪ್ರತಿಮೆಯ ಸುಂದರ ನೋಟ.

ಬೆಟ್ಟದ ಒಡೆಯನಾದ ವೆಂಕಟೇಶ್ವರಸ್ವಾಮಿಯ ಗುಡಿಯಲ್ಲಿರುವ ನರಸಿಂಹನು ಮೊದಲಿಗೆ ಪ್ರಧಾನವಾಗಿದ್ದಿರಬೇಕು. ಈ ಸ್ವಾಮಿಯನ್ನು ನಾವಿಂದು ತಿರುಮಾಮಣಿ ಮಂಟಪದ ಉತ್ತರದಲ್ಲಿ ನೋಡಬಹುದು. ಪಶ್ಚಿಮಾಭಿಮುಖವಾಗಿರುವ ಸ್ವಾಮಿಯ ವಿಗ್ರಹವು ಅಂದವಾಗಿದೆ. ಅಳಗಿಯ ಸಿಂಗರ್‌ನ ಪ್ರಸ್ತಾಪವಿರುವ ಶಾಸನವೊಂದು ಕ್ರಿ.ಶ. ೧೪೯೩ಕ್ಕೆ ಸೇರಿದ್ದಾಗಿದೆ. ಇದರಲ್ಲಿ ಈತನನ್ನು ತಿರುವೆಂಕಟಮುಡೈಯಾನ್ ಸನ್ನಿಧಿಯಲ್ಲಿರುವ ನೆಂದು ಹೇಳಲಾಗಿದೆ.

ಶಕವರ್ಷ ೧೪೧೫ರ ಪ್ರಮಾದೀಚ ಸಂವತ್ಸರದಲ್ಲಿ ಮಿಥುನ ಮಾಸದ ಶುದ್ಧ ಬಿದಿಗೆಯಂದು ಪುಷ್ಯನಕ್ಷತ್ರವಿರುವಾಗ ಶನಿವಾರದಂದು ಕುಣಕುಂಟೆಯ ಬ್ರಾಹ್ಮಣನಾದ ದತ್ತಿರಾಜನ ಮಗ ತಿಮ್ಮಯ್ಯನೆಂಬುವನು ಮೂರುನೂರು ನರ್ಪಣಗಳನ್ನು ತಿರುವೆಂಕಟ ಮುಡೈಯಾನನ ಸನ್ನಿಧಿಯಲ್ಲಿರುವ ಅಳಗಿಯ ಸಿಂಗರಿಗೆ ಅರ್ಪಿಸಬೇಕಾದ ನೈವೇದ್ಯಕ್ಕೆ ನೀಡಿರುತ್ತಾನೆ. ಇದರಲ್ಲಿ ಆಯಾ ದಿನಗಳ ವಿಶೇಷತೆಯನ್ನು ಹೇಳಿ ನೀಡಬೇಕಾದ ನೈವೇದ್ಯದ ಪ್ರಮಾಣವನ್ನು ತಿಳಿಸಲಾಗಿದೆ.

ಇದು ತಿರುಮಲೆಯ ಎರಡನೆಯ ಪ್ರಾಕಾರದಲ್ಲಿ, ಪಶ್ಚಿಮದ ಗೋಡೆಯಲ್ಲಿ ಸ್ಥಾನತ್ತಾರರು ಹಾಕಿಸಿದ ಶಿಲಾಶಾಸನವಾಗಿರುತ್ತದೆ. ನೈವೇದ್ಯದ ನಂತರ ಆ ಪ್ರಸಾದವನ್ನು ವಿತರಣೆ ಮಾಡಬೇಕಾದ ರೀತಿಯನ್ನು ಇದರಲ್ಲಿ ವಿವರಿಸಲಾಗಿದೆ. ಆಂಗ್ಲರ ಆಡಳಿತ ಕಾಲದಲ್ಲಿ ಸಹಾ ಈ ಆಲಯವನ್ನು ಗುರುತಿಸಿದ್ದಾರೆ. ಕ್ರಿಶ. ೧೮೭೦ರಲ್ಲಿ ಯೋಗಾನರಸಿಂಹ ಸ್ವಾಮಿಯನ್ನು ಇವರು 'ಬಾಸಿಂಗ ನರಸಿಂಹ'ನೆಂದು ಉಲ್ಲೇಖಿಸಿದ್ದಾರೆ. ಯೋಗಪಟ್ಟಿಕೆಯು ಬಾಸಿಂಗದ ಅರ್ಥವನ್ನು ಯಾರೋ ಅರಿಯದವರ ಮನಸ್ಸಿನಲ್ಲಿ ಪ್ರತಿಬಿಂಬಿಸಿರಬೇಕು. ತಪ್ಪು ಸಾಹಚರ್ಯದಿಂದ ಈ ರೀತಿಯ ಪದರೂಪಗಳು ಸಿದ್ಧವಾಗಿರಬಹುದು ಎಂದು ಊಹಿಸಲಾಗುತ್ತಿದೆ.

ಈ ಹಿಂದೆ ಪ್ರಸ್ತಾಪಿಸಿದ ಕಪಿಲ ತೀರ್ಥದ ನರಸಿಂಹಸ್ವಾಮಿಯ ವಿಚಾರವಾಗಿ ಕೆಲವು ವಿವರಗಳನ್ನು ತಿಳಿದುಕೊಳ್ಳಬಹುದು. ಗುಹಾ ನರಸಿಂಹಸ್ವಾಮಿಯೆಂದು ಈತನನ್ನು ಗುರುತಿಸಬಹುದು. ಮಹಂತರ ಆಡಳಿತದ ಕಾಲದಲ್ಲಿ ಇದರ ಉದ್ಧಾರಕಾರ್ಯ ನಡೆದಿದೆ. ಇದನ್ನು ಧರ್ಮದಾಸಜೀಯವರು ನಡೆಸಿದ್ದಾರೆ. ಕಾಲ ಸರಿಸುಮಾರು ೧೮೬೪-೮೦ ಎಂದಿಟ್ಟುಕೊಳ್ಳಬೇಕು.

ಕಪಿಲತೀರ್ಥದ ದೇವಾಲಯಗಳು ಸಾಕಷ್ಟು ಅಭಿವೃದ್ಧಿಗೊಂಡು ನಿತ್ಯಪೂಜೆ, ಅರ್ಚನೆ ಪಡೆಯುತ್ತಿರುವ ಕಪಿಲೇಶ್ವರ, ವೇಣುಗೋಪಾಲ, ಲಕ್ಷ್ಮೀನಾರಾಯಣ ಮೂರ್ತಿಗಳು ಪ್ರಸಿದ್ಧಿಗೊಂಡಿರುವ ಸ್ಥಳದಲ್ಲಿ ಪೂಜೆಯಿಲ್ಲದೆ ಕೇವಲ ಬಂಡೆಗಳ ನಡುವೆ ಶೋಭಿಸುತ್ತಿರುವ ಲಕ್ಷ್ಮೀನರಸಿಂಹನು ಸುಂದರವಾದ ಮೂರ್ತಿಯಾಗಿ ಕಂಗೊಳಿಸುತ್ತಿದ್ದಾನೆ. ಈ ಸ್ವಾಮಿಯನ್ನು ದರ್ಶಿಸಲು ಸಹ ಯಾರೂ ಆಸಕ್ತಿ ತೋರಿಸದಂತಹ ಪರಿಸ್ಥಿತಿಯಲ್ಲಿ ಇಲ್ಲಿನ ಸನ್ನಿವೇಶವಿದೆ.

## ದಾರಿ ನರಸಿಂಹ

ತಿರುಪತಿ ಬೆಟ್ಟವನ್ನು ಕಾಲುದಾರಿಯಲ್ಲಿ ಸಾಗುವ ಭಕ್ತರಿಗೆ ನೋಡಲು ಅವಕಾಶ ವಿರುವ ದಾರಿನರಸಿಂಹಸ್ವಾಮಿಯ ಗುಡಿಯು, ಹಳೆಯ ವಿಗ್ರಹವನ್ನು ಹೊಸದಾದ ಕಟ್ಟಡದಲ್ಲಿ ಹೊಂದಿರುವ ನರಸಿಂಹ ದೇವರ ಸನ್ನಿಧಿಯಂತೆ ಕಂಡು ಬರುತ್ತದೆ. ಅಲಿಪಿರಿಯಿಂದ ಬೆಟ್ಟದ ಮೇಲಕ್ಕೆ ಮೆಟ್ಟಿಲ ದಾರಿಯುಂಟು. ಇಲ್ಲಿ ದಾರಿಯಲ್ಲಿರುವುದು ಮಹಂತರ ಗೋಪುರ. ರಾತ್ರಿಯ ವೇಳೆ ತಿರುಪತಿಯಿಂದ ನೋಡಿದಾಗ ದೀಪಾಲಂಕಾರದಿಂದ ಅಲಂಕೃತ ಗೊಂಡ ನಾಮ, ಶಂಖ, ಚಕ್ರಗಳಿರುವ ಗೋಪುರವು ಇದೇ ಆಗಿದೆ. ಇಲ್ಲಿಂದ ಮುಂದಕ್ಕೆ ಆಂಜನೇಯನ ವಿಗ್ರಹದ ವಿಶ್ರಾಂತಿಧಾಮ. ಅಲ್ಲಿಂದ ಮುಂದಕ್ಕೆ ನಡೆದರೆ ವಾಹನ ರಸ್ತೆ. ಇದನ್ನು ದಾಟಿಕೊಂಡು ನಡೆದರೆ ಸಿಗುವುದೇ ದಾರಿ ನರಸಿಂಹ. ಮರದ ತುಂಡಿನ ಮೇಲೆ ನರಸಿಂಹಸ್ವಾಮಿಯ ವಿಗ್ರಹವನ್ನು ಕೆತ್ತಿರುತ್ತಾರೆ. ಪ್ರಹ್ಲಾದನಿಗೆ ಪ್ರಸನ್ನನಾಗಿರುವಂತೆ ಸ್ವಾಮಿಯು ಕಂಡುಬರುತ್ತಿದ್ದಾನೆ.

## ಶಾಸನಾಧಾರಗಳು

ತಿರುಪತಿಯ ಶಾಸನ ಸಂಪತ್ತಿನಿಂದ ತೆಗೆಯಲಾದ ಮೂರು ಬರಹಗಳನ್ನು ಕುತೂಹಲವಿಟ್ಟು ಇಲ್ಲಿ ಗಮನಿಸಬೇಕಾಗಿದೆ. ಕ್ರಿಶ. ೧೫೦೭ರಿಂದ ೧೫೧೭ರವರೆಗೆ ಹತ್ತು ವರ್ಷಗಳ ಕಾಲದ ಹರವನ್ನು ಈ ಶಾಸನಗಳು ಹೊಂದಿವೆ. ದೇವಿಸೆಟ್ಟಿಯ ಮಗ ತಿಪ್ಪಶೆಟ್ಟಿಯು ಪ್ರಭವ ನಾಮ ಸಂವತ್ಸರದಲ್ಲಿ ಎಂದರೆ ಕ್ರಿ ೧೫೦೭ರಲ್ಲಿ ಪಣಗಳನ್ನು ನೀಡಿ ಹಲವು ನಿವೇದನೆಗಳನ್ನು ಏರ್ಪಡಿಸಿರುತ್ತಾನೆ. ಅವುಗಳಲ್ಲೊಂದು ಶ್ರೀನಿವಾಸಪುರದ ಅಳಿಗಿಯ ಸಿಂಗರಿಗೆ ಸಂಬಂಧಿಸಿದ್ದಾಗಿದೆ. ಇದರ ನಂತರ ಸುಮಾರು ಐದು ವರ್ಷಗಳಿಗೆ ಸೆನ್ನಮು ಸೆಟ್ಟಿಯು ಮಗ ಪಪ್ಪುಸೆಟ್ಟಿ ಎಂಬುವವನು ಸುಮಾರು ಎರಡೂವರೆ ಸಾವಿರ ಪಣಗಳ ದಾನ ನೀಡಿ ಹಲವು ನಿವೇದನೆಗಳನ್ನು ಏರ್ಪಾಡು ಮಾಡಿರುತ್ತಾನೆ. ಈ ಶಾಸನದ ಕಾಲ ಕ್ರಿ.ಶ. ೧೫೧೨ ಆಗಿದೆ. ಇದರಂತೆ ತಿರುಪತಿಯ ಪಶ್ಚಿಮದ ಶ್ರೀನಿವಾಸಪುರದ ಅಳಿಗಿಯ ಸಿಂಗರಿಗೆ ಅತಿರಸ ಪಡಿನೈವೇದ್ಯವನ್ನು ನೀಡಬೇಕಾಗಿದೆ. ಇದರ ನಂತರ ಸುಮಾರು ಐದು ವರ್ಷಗಳಲ್ಲಿ ಎಂದರೆ ಕ್ರಿ.ಶ. ೧೫೧೭ಕ್ಕೆ ಸರಿಹೋಗುವ ಈಶ್ವರನಾಮ ಸಂತವ್ಸರದಲ್ಲಿ ತಿರುಪತಿಯ ವರ್ತಕ ವೆಂಗಣಾಸೆಟ್ಟಿಯ ಮಗ ಸಿತ್ತಮುಸೆಟ್ಟಿ ಆಲಯಭಂಡಾರಕ್ಕೆ ಸುಮಾರು ಹದಿನೈದು ಸಾವಿರ ನರ್ಪಣಗಳನ್ನು ದಾನ ನೀಡಿದ್ದಾನೆ. ಇದರಿಂದ ಹಲವಾರು ದೇವರುಗಳ ನೈವೇದ್ಯಕ್ಕೆ ಏರ್ಪಾಡು ಮಾಡಿರುತ್ತಾನೆ. ಇವುಗಳಲ್ಲಿ ಮಲೈಸಿಂಗರ್ ಆಲಯದ ಎರಡು ಶೇಷವಾಹನೋತ್ಸವಗಳು ಒಳಗೊಂಡಿವೆ. ನರಸಿಂಹಸ್ವಾಮಿ ಗುಡಿಯ ಕೃಷ್ಣಸ್ವಾಮಿ ಉತ್ಸವ ಪ್ರಸ್ತಾಪವಿದೆ ಸಿಂಗನ್ ಏರಿಯ ದಡದಲ್ಲಿ ತೀರ್ಥವಾರಿಯ ಸಂದರ್ಶನರ ನೈವೇದ್ಯದ ವಿಚಾರವಿದೆ. ಮಲೈಸಿಂಗರ ಧನುರ್ಮಾಸ ಪೂಜೆಯ ಸಂದರ್ಭದ ನೈವೇದ್ಯಕ್ಕಾಗಿ ಅರ್ಪಣೆ ಮಾಡಿದೆ. ಈ ದಾನಿಯ ಆಲಯದ ಪಶ್ಚಿಮಕ್ಕೆ ಒಂದು ಮಂಟಪವನ್ನು

ಕಟ್ಟಿಸುತ್ತಾನೆ. ಅಲ್ಲಿಗೆ ಗೋವಿಂದರಾಜರ ಉತ್ಸವವು ಆಗಮಿಸಿದ (ಬೇಸಿಗೆಯ ಹತ್ತು ದಿನಗಳ ಉತ್ಸವದ ಕಾಲದ ಆರನೆಯದಿನ) ಸಂದರ್ಭದಲ್ಲಿ ತಂಪಾದ ಪಾನೀಯಗಳನ್ನು, ದಧ್ಯೋದನ, ಹಣ್ಣುಗಳನ್ನು ಅರ್ಪಿಸಲು ತಗುಲಬಹುದಾದ ಖರ್ಚಿಗಾಗಿ ಈತನು ದಾನವನ್ನು ನೀಡಿರುತ್ತಾನೆ.

ಮೇಲಿನ ಮೂರು ಶಾಸನಗಳು ಅಳಿಗಿಯ ಸಿಂಗರ್‌ರ ಪ್ರಸ್ತಾಪವನ್ನು ಒಳಗೊಂಡಿರುತ್ತದೆ. ಇದರಲ್ಲಿ ಶ್ರೀನಿವಾಸಪುರದ ಹೆಸರಿದೆ. ತಿರುಪತಿಯ ವಿಸ್ತರಣವೆಂದು ಭಾವಿಸಬಹುದಾದ ಈ ಪ್ರದೇಶವು ಯಾವುದೆಂಬ ವಿಚಾರ ಸ್ಪಷ್ಟವಾಗುತ್ತಿಲ್ಲ. ಇದು ತಿರುಪತಿಯ ಪಶ್ಚಿಮ ಭಾಗದಲ್ಲಿರುವುದೆಂದು ಹೇಳಿದ ಕಾರಣ ಈ ಮೊದಲೇ ತಿಳಿಸಿದ ಸಿಂಗನೇರಿ ನರಸಿಂಹತೀರ್ಥ ಇದೇ ಇದ್ದಿರಬೇಕೆಂದು ಊಹಿಸಬಹುದು. ಇನ್ನೂ ಒಂದು ಮುಖ್ಯವಾದ ಸಂಗತಿಯೆಂದರೆ, ಈ ಶಾಸನದಲ್ಲಿ ಅಳಿಪುಳಿ ಸಿಂಗರ ಜನ್ಮನಕ್ಷತ್ರ ವಸಂತ ಪೂರ್ಣಿಮೆಯ ಪ್ರಸ್ತಾಪವಿರುವುದು. ಅಳಿಪುಳಿ ಸಿಂಗನೆಂದರೆ ಹುಣಸೆಮರದ ಬುಡದಲ್ಲಿರುವ ಕಾರಣ ಸ್ವಾಮಿಗೆ ಇದೇ ಹೆಸರೇ ಬಂದಿರಬಹುದೆಂದು ಭಾವಿಸಬಹುದಾಗಿದೆ.

ಅಲಿಪಿರಿಯಲ್ಲಿ ಹುಣಸೇಮರದ ಕೆಳಗಿರುವ ಸಿಂಗರಕೋಯಿಲು ಇದ್ದಿತೆಂದು ಊಹಿಸಿ ಹೇಳಬಹುದು. ಪಾದಾಲ ಮಂಟಪಮು ಎಂಬ ಬಿದ್ದು ಹೋಗಿರುವ ಗುಡಿಯ ಒಂದು ಭಾಗವನ್ನು ಅಲಿಪಿರಿಯಲ್ಲಿ ಕಾಣಬಹುದು. ಇದನ್ನು ಪೆರಿಯಾಳ್ವಾರ್ ಗುಡಿಯೆಂದು ಗುರುತಿಸಲು ಸಾಧ್ಯ. ನರಸಿಂಹಸ್ವಾಮಿಯ ಗುಡಿಯು ಇದೇ ಏಕಿರಬಾರದೆಂಬ ಪ್ರಶ್ನೆ ಇಲ್ಲಿ ಉದ್ಭವಿಸದಿರದು. ಹೀಗಾಗಿ ಇದರ ಹಿನ್ನೆಲೆಯನ್ನು ಸ್ವಲ್ಪ ವಿವರವಾಗಿ ಗಮನಿಸುವ ಅವಕಾಶವುಂಟಾಗುತ್ತದೆ.

ವಿಜಯನಗರದ ಸುಪ್ರಸಿದ್ಧ ಅರಸನಾದ ಕೃಷ್ಣದೇವರಾಯರಿಗೆ ಸ್ವಲ್ಪಪೂರ್ವದಲ್ಲಿ ಇದ್ದವ ಸಾಳವ ನರಸಿಂಹ. ಈತನು ಚಂದ್ರಗಿರಿಯಲ್ಲಿ ರಾಜ್ಯಭಾರ ಮಾಡುತ್ತಿದ್ದು, ತಿರುಪತಿ, ತಿರುಮಲೆಗಳ ಹಲವಾರು ಕೈಂಕರ್ಯಗಳ ಪ್ರಮುಖನಾಗಿ ಈತನನ್ನು ಗುರುತಿಸಬಹುದಾಗಿದೆ. ಸಾಳುವ ನರಸಿಂಹನು ಒಂದು ನರಸಿಂಹ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿರುತ್ತಾನೆ. ಇದನ್ನು ತಿರುಪತಿಯ ಶಾಸನಸಂಪದದಲ್ಲಿ ನಾವು ನೋಡಬಹುದಾಗಿರುತ್ತೆ. ವಿಶ್ವಾವಸು ನಾಮ ಸಂವತ್ಸರದಲ್ಲಿ ಎಂದರೆ ೧೪೭೫ನೇ ವರ್ಷದ ಏಪ್ರಿಲ್ ತಿಂಗಳ ೨೦ನೇ ತಾರೀಖಿನಂದು "ಶ್ರೀಮತ್ ಶ್ರೀ ವೀರಗುಂಡ ಕ್ಷಿತಿಪತಿ ತನಯಸ್ಸಾರ್ವಭೌಮೋ ನೃಸಿಂಹಃ ಶೇಷಾದ್ರ್ಯಾರೋಹ ವೀಥ್ಯಾಮಕೃತ ಶುಭಕರೀಂ ಶ್ರೀನೃಸಿಂಹ ಪ್ರತಿಷ್ಠಾಂ" - ಶೇಷಾದ್ರಿಯನ್ನೇರುವ ಹಾದಿಯಲ್ಲಿ ಗುಂಡಕ್ಷಿತಿಪತಿಯ ಮಗ ನರಸಿಂಹನು ಲಕ್ಷ್ಮೀ ನರಸಿಂಹಸ್ವಾಮಿಯನ್ನು ಪ್ರತಿಷ್ಠೆ ಮಾಡಿದನೆಂದು ತಿಳಿಸುವ ಈ ಆಲಯದ ಪ್ರಸ್ತಾವನೆ ಬೇರೊಂದು ಶಾಸನದಲ್ಲಿಯೂ ಬಂದಿದೆ.

ಶಕವರ್ಷ ೧೪೧೧ರಲ್ಲಿ, ಎಂದರೆ ೨೫-೧-೧೪೯೦ರಂದು ಉತ್ತರ ಮೇರೂರಿನ ಕಾರ್ವೆಟ್ಟಿ ಪುಳಿಯಳ್ವಾನ್ ಮನ್ನಾರ್ ಪಿಳ್ಳೈ ಎಂಬುವನು ಒಂದು ಇಳಿಯುವ ಬಾವಿಯನ್ನು ಕಟ್ಟಿಸಿದ ಪ್ರಸ್ತಾಪವಿರುವ ಶಾಸನವೊಂದಿದೆ. ಇದರ ಸ್ಥಳ ನಿರ್ದೇಶನ ಈ ರೀತಿಯಿದೆ -

ಶ್ರೀಮನ್ ಮಹಾಮಂಡಲೇಶ್ವರ ಮೇದಿನೀ ಮೀಸರಗಂಡ ಕಠಾರಿಸಾಳುವ ನರಸಿಂಹರಾಯ ಮಹಾರಾಯರ್ ಧರ್ಮವಾದ ಲಕ್ಷ್ಮೀನರಸಿಂಹ ಆಲಯಗೋಪುರಕ್ಕೆ, ದೊಡ್ಡತಿರುಗೋಪುರಕ್ಕೆ ನಡುವೆ ದಕ್ಷಿಣದಲ್ಲಿರುವ ಇಳಿಯುವ ಮೆಟ್ಟಿಲಬಾವಿ- ಇದು ತಮಿಳಿನ ಶಾಸನ. ಇದರ ಚಹರೆಗಳನ್ನು ಇಂದಿನ ಸನ್ನಿವೇಶದಲ್ಲಿ ಪತ್ತೆಹಚ್ಚುವುದು ಸಾಧ್ಯವಾಗಬಹುದು.

ಅಲಿಪಿರಿಯಲ್ಲಿ "ವೃಕ್ಷೋರಕ್ಷತಿ ರಕ್ಷಿತಃ" ಎಂಬ ಹುಲ್ಲುಹಾಸಿನ ಪಟದಲಂಕಾರದ ಪಕ್ಕಕ್ಕೆ ಸುದರ್ಶನ ಕಂಕಣವನ್ನು ಕಟ್ಟುವ ಶಿಖರವೊಂದಿದೆ. ಈ ಶಾಸನದಲ್ಲಿ ಹೆಸರುಗೊಂಡ ಮೆಟ್ಟಿಲ ಬಾವಿ ಇವೆರಡರ ಹಿಂಭಾಗದಲ್ಲಿರುತ್ತದೆ. ಆದರೆ ಇದರಲ್ಲಿ ನೀರಿಲ್ಲ. "ಅಲಿಪಿರಿಯ ಪೆರಿಯಾಳ್ವಾರ್ ಗುಡಿಯ ಪಶ್ಚಿಮ ಭಾಗದ ಗೋಡೆಯ ಬಲಭಾಗದಲ್ಲಿ ಗುಡಿಯ ಪ್ರದೇಶದಲ್ಲಿರುವ ಶಾಸನ" ವೆಂಬ ಟಿಪ್ಪಣಿಯೊಂದು ಶಾಸನವಿರುವ ಸ್ಥಳವನ್ನು ನಿರ್ದೇಶಿಸುತ್ತದೆ. ಆದರೆ ಈ ನಿಲಯವನ್ನು ಬಿಟ್ಟರೆ ಯಾವ ದೇವಾಲಯಗಳು ಇಲ್ಲಿಲ್ಲವೆಂಬುದೂ, ಇಲ್ಲಿದ್ದ ಗುರುತುಗಳಾಗಲೀ ಇಲ್ಲವೆಂಬುದು ನಿರ್ಧಾರಗಳಿಗೆ ಕಡಿವಾಣವನ್ನು ಹಾಕುವಂತಿದೆ.

ಮತ್ತೊಂದು ಗಮನಾರ್ಹ ಅಂಶವೆಂದರೆ, ಸಾಳುವ ನರಸಿಂಹರಾಯನ ಗೆಳೆಯನಾಗಿದ್ದ ಈತನನ್ನು 'ಕವಿತಾ ಪಿತಾಮಹ'ನೆಂದು ಕರೆದಿರುತ್ತಾರೆ. ಇವರು ಒಂದು ಹಾಡಿನಲ್ಲಿ ಅಳಿಪುಳಿಯ ಸಿಂಗನನ್ನು ಸ್ತುತಿಸಿದ್ದಾರೆ. ಅಳಿಪುಳಿ ಸಿಂಗಾನಿ ಸೇವಿಂಚಿದೆಡಲೆರೊ ಎಂದಿರುವ ಈ ಹಾಡಿನಲ್ಲಿ ನರಸಿಂಹಸ್ವಾಮಿಯ ವಿಚಾರವಿದೆಯೆಂದ ಮೇಲೆ ಅಲಿಪಿರಿಯಲ್ಲಿ ನರಸಿಂಹನ ಆಲಯವಿದ್ದದ್ದು ನಿಜವೆಂದೇ ಹೇಳಬೇಕಾಗುತ್ತದೆ.

ಕಂದಾಡೆ ರಾಮಾನುಜ ಅಯ್ಯಂಗಾರ್‌ರವರು ಸಾಳುವ ನರಸಿಂಹರಾಯನಿಗೆ ಹತ್ತಿರವಾಗಿದ್ದವರು. ಇವರು ಹಾಕಿಸಿದ ಶಾಸನಗಳಲ್ಲಿ ಒಂದು ಶ್ರೀನಿವಾಸಪುರದ ಅಳಿಗಿಯ ಸಿಂಗರಿಗೆ ಸಂಬಂಧಿಸಿದೆ. ಇದರ ಕಾಲ ಕ್ರಿ.ಶ. ೧೫೩೦ಕ್ಕೆ ಸರಿಹೊಂದುತ್ತದೆ (ಕಾಲ ೩೧-೩-೧೫೩೦) ವಸಂತ ಪೂರ್ಣಿಮೆಯ ದಿನ ಅಳಿಪುಳಿ ಸಿಂಗನಿಗೆ ಹಲವು ರೀತಿಯ ನಿವೇದನಗಳಿಗೆ ಇವರು ದಾನ ನೀಡಿರುವ ವಿವರವು ಇದರಲ್ಲಿದೆ. ವೆಂಕಟತ್ತುರೈವರ ಮಗ ಪಂಡಿತರ ಪುರುಷೋತ್ತಮಯ್ಯನ ಶಾಸನವೂ ಸಹ ಶ್ರೀನಿವಾಸಪುರದ ವಿಸ್ತರಣದ ನರಸಿಂಹ ಆಲಯವನ್ನು ಹೆಸರ್ಗೊಂಡಿದೆ. ಇದರ ಕಾಲವು ೨೪-೧೧-೧೫೩೬ಕ್ಕೆ ಸರಿಹೊಂದುತ್ತದೆ. ಇದಕ್ಕೂ ಮುಂಚೆ, ಎಂದರೆ ಸುಮಾರು ನೂರು ವರ್ಷಗಳಿಗೆ ಮೊದಲು ೧೪೫೭ರ ನವೆಂಬರ್ ತಿಂಗಳಿನ ೪ನೇ ದಿನಾಂಕದಂದು ಶವರಿ ಪೆರುಮಾಳ್ ಅವರ ಮಗಳು, ನರಸಿಂಹದೇವರ ಆಲಯದ ನರ್ತಕಿ ವೆಂಕಟವಲ್ಲಿ ಎಂಬಾಕೆಯು ತಿರುವೆಂಕಟ ಮುದ್ದೈಯಾನನ ನೈವೇದ್ಯಗಳಿಗೆ ದಾನ ನೀಡಿರುತ್ತಾಳೆ. ಮತ್ತೊಂದು ಶಾಸನವು ಇದನ್ನು ಸಂಸ್ಕೃತ ಭಾಷೆಯಲ್ಲಿ ತಿಳಿಸುತ್ತಿದೆ. ಈಕೆಯ ಸಂಪನ್ನ ಗುಣವನ್ನು ಎರಡು ಶಾಸನಗಳು ತಿಳಿಸುತ್ತವೆಯೆಂದು ಮೇಲೆ ಆಕೆ ನರ್ತಕಿಯಾಗಿದ್ದ ನರಸಿಂಹಸ್ವಾಮಿ ಆಲಯದ ಹೆಚ್ಚುಗಾರಿಕೆಯನ್ನು ಊಹಿಸಬಹುದಾಗಿದೆ. ಇಂಥದ್ದೊಂದು ದೇವಾಲಯವು ಪ್ರಸಿದ್ಧವಾಗಿದ್ದ ವಿಚಾರವು ಇತಿಹಾಸದ ಮಂಜಿನಲ್ಲಿ ಮುಸುಕಿಹೋಗಿದೆ.

## ಆಶಯ

ಕಲಿಯುಗದ ತಿಮ್ಮಪ್ಪನ ಅಗಾಧವಾದ ಹಿರಿಮೆ-ಗರಿಮೆಗಳ ಪ್ರಸ್ತುತ ವಿಚಾರದಲ್ಲಿ ಕೃತಯುಗದ ನರಸಿಂಹನ ದೂರ ಅಗೋಚರ ಸ್ಥಿತಿಯನ್ನು ಸಂಶೋಧನೆಯ ಮೂಲಕವಾಗಿ ದೂರಗೊಳಿಸಿ ಮತ್ತೊಮ್ಮೆ ಸಾಳುವ ನರಸಿಂಹನ ಕಾಲದ ನರಸಿಂಹ ನೆಲೆಗಳ ಪ್ರಾಮುಖ್ಯತೆಯನ್ನು ಅರಿಯುವಂತಾಗಬಹುದೆಂದು ಆಶಿಸಬಹುದು. ಇದರಿಂದ ಕಳಚಿಹೋದ ಇತಿಹಾಸದ ಕೊಂಡಿಗಳನ್ನು ಸೇರಿಸಲು ಸಹಾಯವಾದೀತು.

# ಕದಿರಿ

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಗೆ ಸೇರಿದ್ದು ತಾಲೂಕು ಕೇಂದ್ರವಾಗಿರುವ ಕದಿರಿ ಕ್ಷೇತ್ರಕ್ಕೆ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳಿಂದ ಸಾವಿರಾರು ಭಕ್ತರು ಭೇಟಿ ನೀಡುತ್ತಾರೆ. ಇತರ ರಾಜ್ಯಗಳಿಂದಲೂ ಇಲ್ಲಿಗೆ ಬರುವ ಭಕ್ತರ ಸಂಖ್ಯೆಯು ಕೂಡಾ ಗಣನೀಯವಾಗಿರುತ್ತದೆ. ರೈಲು-ಬಸ್ಸುಗಳ ಮೂಲಕವಾಗಲಿ ಇಲ್ಲವೆ ಸ್ವಂತ ವಾಹನದಲ್ಲಿಯಾಗಲಿ ಈ ಪುಣ್ಯಕ್ಷೇತ್ರವನ್ನು ತಲುಪಬಹುದು. ನರಸಿಂಹ ಕ್ಷೇತ್ರವಾಗಿರುವ ಕದಿರಿಯ ದೇವಾಲಯದ ಪುರಾಣೇತಿಹಾಸಗಳು ರೋಚಕವಾದದ್ದು. ಇಲ್ಲಿನ ದೇವಾಲಯವು ವಿಶಿಷ್ಟ ವಾಸ್ತುವಿಚಾರದಿಂದ ಕೂಡಿ ಪ್ರಸಿದ್ಧವಾದದ್ದು. ತೆಲುಗು ನಾಡಿಗೆ ಕೀರ್ತಿಯನ್ನು ತಂದಿರುವ ಇದರ ಸ್ಥಾನವು ಅದ್ವಿತೀಯವಾದದ್ದಾಗಿದೆ.

ಕದಿರಿಯೆಂಬ ಹೆಸರು ಪ್ರಾಚೀನವಾದದ್ದು. ಈ ಹೆಸರಿನ ಪ್ರಖ್ಯಾತಿಯನ್ನು ಬ್ರಹ್ಮಾಂಡ ಪುರಾಣದಲ್ಲಿ ಕಾಣಬಹುದೆಂಬ ಪೌರಾಣಿಕ ನಂಬಿಕೆ ಬಲವಾಗಿ ಬೇರೂರಿದೆ. ನಾರದ-ರುದ್ರ ಸಂವಾದದಲ್ಲಿ ಇದರ ವಿಚಾರವಿದೆ. ಕೃತಯುಗದ ದೈತ್ಯರಾಜ ಹಿರಣ್ಯಕಶಿಪುವನ್ನು ನರಸಿಂಹ ಅವತಾರವನ್ನೆತ್ತಿ ಮಹಾವಿಷ್ಣುವು ಸಂಹರಿಸುತ್ತಾನೆ. ಅನಂತರದಲ್ಲುಂಟಾದ ಬೆಳವಣಿಗೆಗಳಿಗೆ ಸಂಬಂಧಿಸಿದಂತೆ ಕದಿರಿ ಕ್ಷೇತ್ರವನ್ನು ಗಮನಿಸಬೇಕಾಗುತ್ತದೆ.

ನರಸಿಂಹನು ದೈತ್ಯನ ವಧೆಯ ಕಾಲದಲ್ಲಿ ಮಾಡಿದ ಪ್ರಳಯ ಗರ್ಜನೆಗಳಿಂದ ಗಾಬರಿಗೊಂಡ ದೇವಗಣಗಳು ಭಕ್ತಪ್ರಹ್ಲಾದನನ್ನು ಮುಂದಿಟ್ಟುಕೊಂಡು ಮಹಾಲಕ್ಷ್ಮಿಯ ಮೂಲಕವಾಗಿ ಭಗವಂತನನ್ನು ಶಾಂತಗೊಳಿಸುತ್ತಾರೆ. ಯಾವ ಸ್ಥಳದಲ್ಲಿ ಇವರು ಸ್ತೋತ್ರ ಮಾಡಿದರೋ ಅಲ್ಲಿನ ಬೆಟ್ಟಕ್ಕೆ 'ಸ್ತೋತ್ರಾದ್ರಿ'ಯೆಂಬ ಹೆಸರು ಬಂದಿದೆ. ಇವರ ಸ್ತೋತ್ರಕ್ಕೆ ಮಣಿದ ಭಗವಂತನು ತನ್ನ ಕೋಪವನ್ನು ಉಪಸಂಹಾರ ಮಾಡುತ್ತಾನೆ. ನಂತರ ಪ್ರಸನ್ನ ವದನನಾಗಿ ತನ್ನ ಪಾದಚಿಹ್ನೆಯು ಶಿಲೆಯ ಮೇಲೆ ಶಾಶ್ವತವಾಗಿ ವ್ಯಕ್ತವಾಗುವ ಹಾಗೆ ಮಾಡಿ ಪಶ್ಚಿಮತೀರದಲ್ಲಿನ ಉದ್ಯಾನವನದ ಆಲಯದಲ್ಲಿ ನೆಲೆಸುತ್ತಾನೆ. ಈತನೇ ಇಂದಿನ ಮೂಲವರನಾಗಿ ಪ್ರಸಿದ್ಧನಾಗಿದ್ದಾನೆ. ಮೂಲಮೂರ್ತಿಯ ಜೊತೆಗೆ ಪ್ರಹ್ಲಾದನ ವಿಗ್ರಹವನ್ನು ಇಲ್ಲಿ ಪ್ರತಿಷ್ಠೆ ಮಾಡಲಾಗಿದೆ. ಇಂತಹ ದಿವ್ಯಮಂಗಳ ಮೂರ್ತಿಯ

ದರ್ಶನವನ್ನು ಈ ಸ್ಥಳದಲ್ಲಿ ಮಾಡಬಹುದಾಗಿದೆ. 'ಉಗ್ರ ನರಸಿಂಹನ ದೈತ್ಯ ಸಂಹಾರ ಕ್ರಿಯೆ'ಯು ಪ್ರಕಟಗೊಂಡಿದೆ. ನರಸಿಂಹಶಿಲ್ಪಗಳಲ್ಲಿ ಕುತೂಹಲಜನಕವಾಗಿ ಕಂಡುಬರುವ ಈ ಮೂರ್ತಿಯು ಕೌತುಕವನ್ನುಂಟು ಮಾಡುವಂತಿದೆ.

## ಪುರಾಣ-ಇತಿಹಾಸ

ಭೃಗುಮಹರ್ಷಿಯ ತಪೋಭೂಮಿಯಾದ ಈ ಸ್ಥಳವನ್ನು ವೇದಾರಣ್ಯವೆಂದು ಕರೆಯುತ್ತಾರೆ. ಅನೇಕ ತೀರ್ಥಗಳು ಇಲ್ಲಿ ಅಂತರಗಂಗೆಯಂತೆ ಪ್ರವಹಿಸುತ್ತಿದ್ದು ಇದರ ಮಹಿಮೆಯನ್ನು ಹೆಚ್ಚಿಸಿವೆ. ದಟ್ಟವಾದ ಅರಣ್ಯದಲ್ಲಿ ಹುಲುಸಾಗಿ ಬೆಳೆದಿದ್ದ ಚಂದನ ಮರಗಳ ಕೆಳಗಿನ ಹುತ್ತದಲ್ಲಿ ಈಗಿರುವ ಮೂರ್ತಿಯು ಲಭ್ಯವಾಯಿತೆಂದು ಹೇಳುತ್ತಾರೆ. ಮೊದಲಿಗೆ ಮಹರ್ಷಿಗಳಿಂದ ಪೂಜೆಗೊಳ್ಳುತ್ತಿದ್ದ ಅರ್ಚಾಮೂರ್ತಿಗಳನ್ನು ಹಸನುಗೊಳಿಸಿ ದೇವಾಲಯವನ್ನು ನಿರ್ಮಿಸಿಕೊಟ್ಟಿದ್ದಾರೆ. ಅನಂತರ ಜನವಸತಿಯು ಅಧಿಕವಾಗಿ ಪಟ್ಟಣವನ್ನು ನಿರ್ಮಿಸಲಾಗಿದೆ. ಖದಿರ ವೃಕ್ಷಗಳ ಸಮೂಹದಿಂದ ಕಂಗೊಳಿಸಿ ಖಾದ್ರಿಯೆಂಬ ಅಂಕಿತವನ್ನು ಪಡೆದಿದೆ. ಕಾಲಕ್ರಮದಲ್ಲಿ ಇದೇ ಕದಿರಿಯೆಂದಾಗಿದೆ. ಕ್ಷೇತ್ರದ ಇತಿಹಾಸವನ್ನು ಸಹ ಗಮನಿಸಿದಾಗ ದೇವಾಲಯದ ಕೀರ್ತಿಗೌರವಗಳು ಗಮನಾರ್ಹವಾಗುತ್ತದೆ.

ಹರಿಹರ ರಾಯರ ಕಾಲದಿಂದಲೂ ತನ್ನ ಘನತೆಯನ್ನು ಹೆಚ್ಚಿಸಿಕೊಂಡಿರುವ ದೇವಾಲಯವನ್ನು ಗಮನಿಸಿದಾಗ ಇದರ ಪ್ರಾಚೀನತೆಯ ಅರಿವುಂಟಾಗುತ್ತದೆ. ಪಲ್ಲವರಾಜರಿಂದ ತೊಡಗಿ ಏಳನೆಯ ಶತಮಾನದ ಪಶ್ಚಿಮ ಚಾಲುಕ್ಯರಾಜರವರೆಗೆ, ಅನಂತರ ಹತ್ತನೆಯ ಶತಮಾನದ ಹೊಯ್ಸಳ ಅರಸರ ಆಡಳಿತದವರೆಗೆ ಈ ದೇವಾಲಯದ ಅಭಿವೃದ್ಧಿಯಾಗಿರುವುದು ಗಮನಕ್ಕೆ ಬರುತ್ತದೆ. ಹದಿನಾರನೆ ಶತಮಾನದ ಬಿಜಾಪುರ ನವಾಬರ ಆಳ್ವಿಕೆಯ ಕಾಲದಲ್ಲಿ ಅಭ್ಯುದಯ ಹೊಂದಿದ ಕದಿರಿ ಪ್ರಾಂತ್ಯವನ್ನು ರೇಚರ್ಲ ವಂಶದ ಪದ್ಮನಾಭ ನಾಯಕರು ಆಳುತ್ತಿದ್ದರು. ಇವರ ಕಾಲದಲ್ಲಿ ರೇಪಲ್ಲೆ ಪಟ್ಟಣವು ಅಂದಿನ ರಾಜಧಾನಿಯಾಗಿ ಪ್ರಸಿದ್ಧವಾಗಿತ್ತು. ಈ ಎಲ್ಲ ವಿಚಾರಗಳನ್ನು ಪುಷ್ಟಿಗೊಳಿಸುವ ಶಾಸನಗಳು ಚಾರಿತ್ರಿಕ ದಾಖಲೆಗಳು ಬೆಳಕಿಗೆ ಬಂದಿವೆ.

ರಾಯಲಸೀಮ ಪ್ರಾಂತ್ಯದಲ್ಲಿ ಹೆಸರುವಾಸಿಯಾಗಿರುವ ಕದಿರಿ ದೇವಾಲಯವು ಸಾಕಷ್ಟು ವಿಸ್ತಾರವಾಗಿದೆ. ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ಇಲ್ಲಿನ ಆಲಯವನ್ನು ನಿರ್ಮಿಸಲಾಗಿದೆ. ದೇವಾಲಯದ ಮಂಟಪಗಳು ಸಹಸ್ರ ಕಂಬಗಳಿಂದ ಕೂಡಿವೆ. ನಾಲ್ಕು ಕಡೆಯೂ ನಾಲ್ಕು ದ್ವಾರಗಳಿವೆ. ಎತ್ತರವಾದ ಗೋಪುರಗಳಿಂದ ಕಂಗೊಳಿಸುತ್ತಿವೆ. ದೇವಾಲಯದ ಮುಖ್ಯದ್ವಾರದ ಗೋಪುರ, ರಂಗಮಂಟಪಗಳು ಶ್ರೀರಂಗರಾಯರ ದೈವಭಕ್ತಿಗೆ ನಿದರ್ಶನ. ದಕ್ಷಿಣದ ಗೋಪುರವನ್ನು ಪಾನುಮಲ ಚಿನ್ನಮ್ಮನೆಂಬ ವ್ಯಕ್ತಿಯು ಕಟ್ಟಿಸಿ ತನ್ನ ದೈವಶ್ರದ್ಧೆಯನ್ನು ವ್ಯಕ್ತಪಡಿಸಿದ್ದಾಳೆ. ಪಶ್ಚಿಮ ದಿಕ್ಕಿನ ಗೋಪುರದ ನಿರ್ಮಾಣಕ್ಕೆ ಕೊಕ್ಕಂಟಿ ಮಲ್ಲಪ್ಪನಾಯಿಕರ ಪ್ರೇರಣೆ ಮುಖ್ಯವೆನ್ನಬಹುದು. ಉತ್ತರ ದಿಕ್ಕಿನ ಗೋಪುರವು ಹಿಂದು-ಮುಸ್ಲಿಂ ಭಾವೈಕ್ಯತೆಗೆ

ಉದಾಹರಣೆಯಾಗಿದೆ. ಇದು ನವಾಬರ ಕಾಲದಲ್ಲಾದದ್ದೆಂಬ ವಿಚಾರವು ಶಿಲಾಲೇಖಗಳ ಮೂಲಕ ಬೆಳಕಿಗೆ ಬಂದಿದೆ. ಈ ರೀತಿ ನಾಯಕರು, ಸಾಮಂತರು, ಸಾಮಾನ್ಯ ಜನರು ಸೇರಿ ನಿರ್ಮಿಸಿದ ದೇವಾಲಯವಾಗಿ ಕದಿರಿಯ ಆಲಯವು ಶೋಭಿಸುತ್ತಿದೆ.

ವಿದ್ಯಾನಗರ ಪಾಲಕರಾದ ಬುಕ್ಕರಾಯರು ಈ ಸ್ವಾಮಿಯ ಕೈಂಕರ್ಯಗಳಿಗಾಗಿ ಮಾನ್ಯಗಳನ್ನು ನೀಡಿದ್ದಾರೆ. ಪಲ್ಲೆ ಶ್ರೀನಿವಾಸರಾಯರು ಭಾಗವತ ಹಾಗೂ ರಾಮಾಯಣ ಪ್ರಸಂಗಗಳನ್ನು ಇಲ್ಲಿ ವರ್ಣಚಿತ್ರಗಳ ಮೂಲಕ ಬಿಡಿಸಿಕೊಟ್ಟಿರುತ್ತಾರೆ. ಆದರೆ ಇವು ನೈಸರ್ಗಿಕ ಪ್ರಕ್ರಿಯೆಗಳ ಕಾರಣದಿಂದ ಅಂದಗೆಡುತ್ತಿವೆ. ಇವುಗಳ ಸಂರಕ್ಷಣೆ ಅಗತ್ಯವಾದದ್ದು. ದೇವಾಲಯದ ಕಂಬಗಳು ಶಿಲ್ಪಕಲಾವೈಭವವನ್ನು ಪ್ರದರ್ಶಿಸುವಂತಿವೆ. ರಂಗಮಂಟಪದಲ್ಲಿರುವ ಕಂಬಗಳು ಗಮನಾರ್ಹವಾಗಿವೆ. ಕಲ್ಯಾಣಮಂಟಪದ ಕಂಬಗಳಲ್ಲಿನ ಕೆತ್ತನೆಗಳು ಮತ್ತಷ್ಟು ವಿಶೇಷವಾಗಿವೆ. ಶಯ್ಯಾಮಂಟಪವು ವಿಶೇಷ ಆಕರ್ಷಣೆಯಿಂದಿರುವುದಾಗಿದೆ. ಲಕ್ಷ್ಮೀದೇವಿ ಆಲಯದಲ್ಲಿರುವ ಮಂಟಪದ ಕಂಬಗಳ ಮೇಲೆ ಬಿಡಿಸಲಾಗಿರುವ ವಯ್ಯಾರದ ನೃತ್ಯಭಂಗಿಗಳದ್ದೊಂದು ವಿಶೇಷವೆನ್ನಬಹುದು. ಇದನ್ನು ಅತ್ಯಂತ ಸೂಕ್ಷ್ಮವಾಗಿ ಚಾಕಚಕ್ಯತೆಯಿಂದ ಬಿಡಿಸಲಾಗಿದೆ. ಇಲ್ಲಿರುವ ನಾಲ್ಕು ಕಂಬಗಳನ್ನು 'ನಾಲ್ಕು ಶಿಲ್ಪಖಂಡ' ಗಳೆಂದು ಹೇಳಬಹುದಾಗಿದೆ. ವಿಜಯನಗರ ಶಿಲ್ಪದ ಕಲಾಕೃತಿಯನ್ನು ಇದು ಹೋಲುತ್ತಿದೆ. ಮೇಲುಕಟ್ಟಿನಲ್ಲಿ ಪದ್ಮದ ರಚನೆಗಳಿವೆ. ಇವುಗಳಲ್ಲಿ ಕಲಾನಿಪುಣತೆಯು ಎದ್ದುಕಾಣುತ್ತದೆ. ಈ ರೀತಿಯ ಕೆತ್ತನೆಗಳು ಇಡೀ ದೇವಾಲಯದ ಜೀವಂತ ಪ್ರತೀಕಗಳಾಗಿವೆ.

ದೇವಾಲಯದ ಎರಡು ಬದಿಗಳಲ್ಲಿರುವ ದ್ವಾರಪಾಲಕರ ವಿಗ್ರಹಗಳು ಉತ್ತಮ ಮಾದರಿಯದಾಗಿವೆ. ಇಲ್ಲಿರುವ ಉಪಮುಖ್ಯ ಆಲಯಗಳಲ್ಲಿ ಗೋವಿಂದರಾಜಸ್ವಾಮಿ, ಕೋದಂಡರಾಮ, ಆಂಜನೇಯ ಆಲಯಗಳನ್ನು ಮುಖ್ಯವಾಗಿ ಗಮನಿಸಬೇಕು. ಲಕ್ಷ್ಮೀದೇವಿಯ ಆಲಯವು ಮುಖ್ಯದೇವಾಲಯಕ್ಕೆ ಹೊಂದಿಕೊಂಡಿರುವುದಾಗಿದೆ. ಸ್ವಾಮಿಯ ಸೇವಕಳಾದ ಪಾನುಮಲ ಚಿನ್ನಮ್ಮನಿಗಾಗಿಯೆ ಪ್ರತ್ಯೇಕ ಆಲಯವೊಂದನ್ನು ನಿರ್ಮಿಸಿದ್ದಾರೆ. ಸಹಸ್ರ ಕಂಬಗಳ ಪ್ರಾಂಗಣವನ್ನಲ್ಲದೆ ಕಲ್ಯಾಣಮಂಟಪ, ರಂಗಮಂಟಪ ಮತ್ತು ಅಮ್ಮನವರ ಸಾಲೆಗಳಿವೆ. ಇವೆಲ್ಲವೂ ಭಕ್ತರಿಗೆ ಆಶ್ರಯವಾಗಿದ್ದು ಶುಭಕಾರ್ಯಗಳಿಗೆ ನೆರವಾಗುತ್ತ ಅನುಕೂಲಕರವಾಗಿದೆ.

## ಉತ್ಸವ-ಜಾತ್ರೆ

ನರಸಿಂಹ ಸ್ವಾಮಿಯ ಉತ್ಸವಾದಿಗಳಿಗೆ ವಲ್ಲಭರಾಯಸ್ವಾಮಿ ಮತ್ತು ವಸಂತ ಮಾಧವ ಮೂರ್ತಿಗಳನ್ನು ಬಳಸಲಾಗುತ್ತಿದೆ. ಇಲ್ಲಿನ ಬ್ರಹ್ಮೋತ್ಸವ ಕಾರ್ಯಕ್ರಮಗಳು ಪ್ರತಿವರುಷ ಫಾಲ್ಗುಣ ಶುದ್ಧ ನವಮಿಯಿಂದ ಹನ್ನೆರಡು ದಿನಗಳ ಕಾಲ ತೀರ್ಥವಾರಿವರೆಗೆ ನಡೆಯುತ್ತವೆ. ಆಂಧ್ರದ ಭಕ್ತಕೋಟಿ ಮಾತ್ರವಲ್ಲದೆ ಕರ್ನಾಟಕ, ತಮಿಳುನಾಡುಗಳಿಂದಲೂ ಸಹಸ್ರ ಸಂಖ್ಯೆಯ ಭಕ್ತರು ಈ ಸಮಯದಲ್ಲಿ ತಮ್ಮ ಹರಕೆಯನ್ನು ಸಲ್ಲಿಸಿ ಹೋಗುತ್ತಾರೆ.

ಬ್ರಹ್ಮೋತ್ಸವದ ಸಮಯದಲ್ಲಿ ನಡೆಯುವ ಮೋಹಿನಿ ಉತ್ಸವ ಮತ್ತು ಪ್ರಜಾಗರುಡ ಸೇವೆಗಳಲ್ಲಿ ಅಧಿಕ ಸಂಖ್ಯೆಯ ಜನರು ಭಾಗವಹಿಸುವುದೊಂದು ವಿಶೇಷವೆನ್ನಬಹುದು.

ಕದಿರಿ ನರಸಿಂಹಸ್ವಾಮಿಯ ರಥೋತ್ಸವದ ಸಂದರ್ಭದಲ್ಲಿ ವಿಶೇಷ ಆಚರಣೆಯೊಂದು ಪ್ರಚಲಿತವಾಗಿದೆ. ತಿರುಮಲೆಯ ಒಡೆಯನಿಗೆ ಕದಿರಿ ನರಸಿಂಹಸ್ವಾಮಿಯ ವೈಭವದ ಉತ್ಸವವು ತಲೆನೋವು ಬರಿಸಿದ ವಿಚಾರವಾಯಿತು. ಆ ಕಾರಣದಿಂದ ಈ ಸ್ವಾಮಿಯ ತಲೆಗೆ ಮೆಣಸು ಕಾಳಿನ ಪಟ್ಟಿಯನ್ನು ಹಾಕುವ ಅಂಶವು ಕುತೂಹಲಕಾರಿಯಾದದ್ದಾಗಿದೆ. ಮನೆಯಲ್ಲಿ ಯಾರಿಗಾದರೂ ಖಾಯಿಲೆ ಉಂಟಾದರೆ ಈ ಮೆಣಸುಕಾಳನ್ನು ತಿನ್ನುವುದರಿಂದ ಅದು ನಿವಾರಣೆಯಾಗುತ್ತದೆಂಬ ದೃಢವಾದ ನಂಬಿಕೆಯಿದೆ. ಜಾತ್ರೆ-ಉತ್ಸವ ಮುಂತಾದವುಗಳ ವಿಧಿವಿಧಾನಗಳ ಹಿನ್ನೆಲೆಯಲ್ಲಿ ಜಾನಪದೀಯವಾದ ನಂಬಿಕೆಗಳು ಉಳಿದು ಬಂದಿರುವುದಕ್ಕೆ ಇದೊಂದು ನಿದರ್ಶನವೆಂದು ಹೇಳಬಹುದು.

ನರಸಿಂಹಸ್ವಾಮಿ ದೇವಾಲಯ ಅಭಿವೃದ್ಧಿ ಸಮಿತಿಯ ವತಿಯಿಂದ ಭಕ್ತರಿಗಾಗಿ ಕೆಲವೊಂದು ಕನಿಷ್ಠ ಸೌಲಭ್ಯಗಳನ್ನು ಇಲ್ಲಿ ಕಲ್ಪಿಸಿಕೊಡಲಾಗಿದೆ. ಆಲಯದ ಒಳಾವರಣದಲ್ಲಿ ಧರ್ಮಶಾಲೆಯ ನಿರ್ಮಾಣವಾಗಿದೆ. ಅನೇಕ ದಾನಿಗಳು ಇದಕ್ಕೆ ನೆರವಾಗಿದ್ದಾರೆ. ವೈಖಾನಸಾ ಆಗಮೋಕ್ತ ರೀತಿಯಲ್ಲಿ ಪೂಜಾದಿಗಳು ನೆರವೇರುತ್ತವೆ. ನೀರಿನ ಕೊರತೆಯೊಂದು ಈ ದೇವಾಲಯದಲ್ಲಿ ಎದ್ದುಕಾಣುವಂತಿದೆ. ಅದರ ನಿವಾರಣೆಗಾಗಿ ಸಾಕಷ್ಟು ಪ್ರಯತ್ನ ನಡೆದಿದೆ. ಎಲ್ಲ ಧರ್ಮ ಜಾತಿಗಳವರ ಆರಾಧ್ಯದೈವವಾದ ನರಸಿಂಹಸ್ವಾಮಿಯು ಪ್ರಸಾದಗುಣದಿಂದ ಪ್ರಭಾವವನ್ನು ಬೀರುತ್ತ ತನ್ನ ಸೇವೆಯನ್ನು ಸಲ್ಲಿಸಿದವರ ಮನೋಭೀಷ್ಟಗಳನ್ನು ಪೂರೈಸುತ್ತಿದ್ದಾನೆ.

# ಅಂತರ್ವೇದಿ ನರಸಿಂಹ ಆಲಯ

ಆಂಧ್ರಪ್ರದೇಶದ ಮೂವತ್ತೆರಡು ನರಸಿಂಹಕ್ಷೇತ್ರಗಳಲ್ಲೊಂದಾದ ಅಂತರ್ವೇದಿಯ ಪೂರ್ವ ಗೋದಾವರಿ ಜಿಲ್ಲೆಯ ನರಸಾಪುರಕ್ಕೆ ಸಮೀಪದಲ್ಲಿದೆ. ವಿಶಿಷ್ಟಗೋದಾವರಿಯ ದಂಡೆಯಲ್ಲಿದ್ದರೂ ಪುಟ್ಟದ್ವೀಪದಂತೆ ಕಂಡುಬರುವ ಈ ಸ್ಥಳವನ್ನು ತಲುಪಲು ಜಲಮಾರ್ಗ ಇಲ್ಲವೆ ರಸ್ತೆಯಮಾರ್ಗ ಸೂಕ್ತವಾದದ್ದು. ಸಂಧ್ಯಾಸಮಯದಲ್ಲಿನ ತಂಪು ಸೂರ್ಯನ ಕಿರಣಗಳನ್ನು ತನ್ನ ವಕ್ಷಸ್ಥಳದ ಮೇಲೆ ಧರಿಸುವ ಇಲ್ಲಿನ ಲಕ್ಷ್ಮೀನರಸಿಂಹಸ್ವಾಮಿಯು, ಸಂತಾನವಿಲ್ಲದವರಿಗೆ ಆ ಭಾಗ್ಯವನ್ನು ಕರುಣಿಸುತ್ತಾನೆ. ರಕ್ತವಿಲೋಚನನೆಂಬ್ಬ ಅಸುರನನ್ನು ವಿಷ್ಣು ಸಂಹರಿಸಿದ ಕ್ಷೇತ್ರವಾಗಿ ಅಂತರ್ ವೇದಿಯು ಪ್ರಸಿದ್ಧವಾಗಿದೆ. ದಕ್ಷಿಣದ ಕಾಶಿಯೆಂದೂ ಸಹಾ ಇದು ಹೆಸರು ಪಡೆದಿದೆ. ಇದೆಲ್ಲದರೊಂದಿಗೆ ರಮಣೀಯ ಪ್ರಕೃತಿಯ ಸೊಬಗಿನ ವರದಾನದಿಂದ ಈ ಸ್ಥಳವು ಸೌಭಾಗ್ಯ ಪಡೆದಿದೆಯೆಂದು ಹೇಳುವುದು ಅತಿಶಯೋಕ್ತಿಯು ಮಾತೇನೂ ಅಲ್ಲ.



ವರಾಹ ನರಸಿಂಹ, ಸಿಂಹಾಚಲ

ಹಿಂದೊಮ್ಮೆ ರಕ್ತವಿಲೋಚನನೆಂಬ ಕಂಟಕನು ಇಲ್ಲಿ ಬೀಡು ಬಿಟ್ಟಿರುತ್ತಾನೆ. ಅವನ ಉಪಟಳದಿಂದ ಸಾಧು ಪುರುಷರು ಕಂಗಾಲಾಗುತ್ತಾರೆ. ದುಷ್ಟನ ಹಿಂಸೆಯನ್ನು ಅವರು ತಾಳಲಾರದವರಾಗಿರುತ್ತಾರೆ. ಇದನ್ನರಿತ ವಶಿಷ್ಟರು ಅವರ ಪರವಾಗಿ ವೈಕುಂಠದ ವಿಷ್ಣುವಿನಲ್ಲಿ ಮೊರೆಯಿಡುತ್ತಾರೆ. ವಿಷ್ಣುವಿನಿಂದ ಅಸುರನ ಸಂಹಾರವಾಗುತ್ತದೆ. ನಿರ್ಭೀತವಾದ ಸ್ಥಳದಲ್ಲಿ ವಶಿಷ್ಟ ಮಹರ್ಷಿಯು ಆಶ್ರಮ ಕಟ್ಟಿಕೊಂಡು ವಾಸಮಾಡತೊಡಗುತ್ತಾನೆ. ಅಗತ್ಯವಾದ ನೀರಿನ ಸೌಕರ್ಯಕ್ಕಾಗಿ ಗೋದಾವರಿ ನದಿಯನ್ನೇ ಅವನು ಒಂದು ಕಾಲುವೆಯ ಮೂಲಕ ಹರಿಸುತ್ತಾನೆ. ಹೀಗಾಗಿ ಇದಕ್ಕೆ ಬಂದ ಹೆಸರು 'ವಶಿಷ್ಟಪಯ' ಇದು ಸೃಷ್ಟಿಕರ್ತನಾದ ಬ್ರಹ್ಮನೂ, ಅವತಾರಪುರುಷನಾದ ಶ್ರೀರಾಮಚಂದ್ರನು ಮತ್ತು ವಶಿಷ್ಟಮಹರ್ಷಿಗಳೆಲ್ಲರ ಮಹಿಮಾಕಾರ್ಯಗಳ ಕಾರಣವಾಗಿ ಅಂತರ್ವೇದಿಯು ಪ್ರಸಿದ್ಧಿಪಡೆದು ಪ್ರತಿಷ್ಠಿತವಾಗಿ ಶೋಭಿಸುತ್ತಿದೆ.

ಲಕ್ಷ್ಮೀನರಸಿಂಹಸ್ವಾಮಿಯು ಪಶ್ಚಿಮಾಭಿಮುಖವಾಗಿದ್ದಾನೆ. ನವ ನಾರಸಿಂಹ ರೂಪಗಳಲ್ಲೊಬ್ಬನಾಗಿ ಈತನನ್ನು ಭಾವಿಸಲಾಗುತ್ತಿದೆ. ಈ ಆಲಯದ ಕ್ಷೇತ್ರಪಾಲಕನಾದ ನೀಲಕಂಠೇಶ್ವರ ದೇವಾಲಯವು ಮುಖ್ಯ ದೇವಾಲಯಕ್ಕೆ ಸಮೀಪವಾಗಿದೆ. ಕೃತಯುಗದಲ್ಲಿ ನೂರು ವರ್ಷಗಳ ಯಜ್ಞಯಾಗಾದಿಗಳನ್ನು ನೆರವೇರಿಸಿ ಬ್ರಹ್ಮದೇವನು ನೀಲಕಂಠೇಶ್ವರನನ್ನು ಪ್ರತಿಷ್ಠೆ ಮಾಡಿದನೆಂದು ಹೇಳುವರು. ಪೌರಾಣಿಕ ಹಿನ್ನೆಲೆಯಲ್ಲಿ ಗಮನಿಸಿದಾಗ ಇಲ್ಲಿನ ಪ್ರಧಾನ ಅರ್ಚಾಮೂರ್ತಿಯಾದ ನರಸಿಂಹ ಸ್ವಾಮಿಯನ್ನು ಮತ್ತು ಆಂಜನೇಯಸ್ವಾಮಿಯನ್ನು ವಶಿಷ್ಟರೇ ಪ್ರತಿಷ್ಠೆ ಮಾಡಿದರೆಂದು ಹೇಳುವರು. ಆದರೆ ಪ್ರಾಣದೇವರ ಆಲಯವು ಮುನ್ನೀರಿನಲ್ಲಿ ಮುಳುಗಿಹೋಗಿದ್ದು ಗತಿಸಿಹೋದ ದಾಖಲೆಯೆನ್ನಬಹುದು.

ನರಸಿಂಹಸ್ವಾಮಿಯು ಇಲ್ಲಿ ಪ್ರತಿಷ್ಠೆಗೊಂಡ ಹಿನ್ನೆಲೆಯಲ್ಲಿ ಮತ್ತೊಂದು ಐತಿಹ್ಯ ಅಡಗಿರುವುದು ಸ್ವಾರಸ್ಯಕರ ಸಂಗತಿಯನ್ನು ಹೊರಚೆಲ್ಲುತ್ತದೆ. ಪುರಾಣ ಪುರುಷನಾದ ಸ್ವಾಮಿಯು ನರಸಿಂಹಾವತಾರದ ಉಪಸಂಹಾರದ ಬಳಿಕ ಇಲ್ಲಿನ ಹುತ್ತವೊಂದರಲ್ಲಿ ನೆಲೆಸುತ್ತಾನೆ. ಕೇಶವದಾಸನ ಹಸುಗಳು ಪ್ರತಿನಿತ್ಯವೂ ಇದರಲ್ಲಿನ ಭಗವಂತನಿಗೆ ಹಾಲುಣಿಸುತ್ತಿರುತ್ತವೆ. ಒಂದು ದಿನ ಇದರ ಮರ್ಮವನ್ನು ಅರಿತುಕೊಂಡ ಆತನು ಹುತ್ತವನ್ನು ತೆಗೆಸಿ ಅಲ್ಲಿ ನೆಲೆಸಿದ್ದ ಸ್ವಾಮಿಯನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿಸುತ್ತಾನೆ. ಕಾಲಾನಂತರದಲ್ಲಿ ಅಲ್ಲಿ ದೇವಾಲಯವು ನಿರ್ಮಾಣವಾಗುತ್ತದೆ.

## ಮಹಿಮಾವಂತ ಕ್ಷೇತ್ರ

ಅಂತರ್ವೇದಿಯ ನರಸಿಂಹಸ್ವಾಮಿಯ ಮಹಿಮೆಯನ್ನು ಸಾರುವ ಕೆಲವು ನಂಬಿಕೆಗಳು ಪ್ರಬಲವಾಗಿವೆ. ಮಾಘ ಮಾಸದ ಏಕಾದಶಿಯ ದಿನದಂದು ಈ ಸ್ಥಳಕ್ಕೆ ಆಗಮಿಸಿ ಒದ್ದೆ ಬಟ್ಟೆಗಳನ್ನು ಧರಿಸಿ ಸ್ವಾಮಿಯನ್ನು ಅರ್ಚಿಸಿ, ಆರಾಧಿಸಿ, ಅಂದಿನ ರಾತ್ರಿಯನ್ನು ಅಲ್ಲಿ ಕಳೆಯುವ ಸಂತಾನ ಸೌಭಾಗ್ಯವನ್ನು ಅಪೇಕ್ಷಿಸುವ ದಂಪತಿಗಳಿಗೆ ಸ್ವಾಮಿಯು ವರಪ್ರಸಾದ

ಮಾಡುವನೆಂದು ಹೇಳುತ್ತಾನೆ. ದಂಪತಿಗಳ ಕನಸಿನಲ್ಲಿ ಪ್ರತ್ಯಕ್ಷನಾಗುವ ದೇವರು ಅವರಿಗೆ ಹೂ-ಹಣ್ಣು, ಮಕ್ಕಳ ಆಟಿಕೆಗಳನ್ನು ನೀಡಿದಲ್ಲಿ ಅವರ ಇಷ್ಟಾರ್ಥವು ನೆರವೇರುವುದಂತೆ. ಅಶ್ವತ್ಥ ಪ್ರದಕ್ಷಿಣೆ, ತೀರ್ಥಯಾತ್ರೆ, ಭೂಸುರ ದಾನಗಳಿಂದ ನೆರವೇರದಿರುವ ಸಂತಾನಪ್ರಾಪ್ತಿ ಅಂತರ್ವೇದಿ ನರಸಿಂಹನ ಸನ್ನಿಧಿಯಲ್ಲಿ ಮಾಡುವ ವ್ರತಾಚರಣೆಯಿಂದ ಸಾಧ್ಯವಾಗುವುದೆಂಬ ಕಾರಣಕ್ಕಾಗಿ ಸಹ ಈ ಕ್ಷೇತ್ರಕ್ಕೆ ಇಂತಹ ಪುಣ್ಯದಿನದಲ್ಲಿ ಸಾವಿರಾರು ಭಕ್ತರು ಆಗಮಿಸಿ ತಮ್ಮ ಪೂಜಾದಿಗಳನ್ನು ನೆರವೇರಿಸುತ್ತಾರೆ.

ದೈವಭಕ್ತಿ ಶ್ರದ್ಧೆ ನಂಬಿಕೆಗಳ ಆಗರವಾಗಿರುವ ಅಂತರ್ವೇದಿಯು ಶ್ರೀಮಂತವಾದ ಪ್ರಕೃತಿ ಸಂಪತ್ತನ್ನು ಹೊಂದಿರುತ್ತದೆ. ನಿತ್ಯಹರಿದ್ವರ್ಣದ ಮರ-ಗಿಡಗಳಿಂದ ತುಂಬಿರುತ್ತದೆ. ರಾಜಲಕ್ಷ್ಮಿ, ಭೂದೇವಿ, ಸಂತಾನ ಗೋಪಾಲಕೃಷ್ಣ, ವೆಂಕಟೇಶ್ವರ, ಕೇಶವಸ್ವಾಮಿ ದೇವಾಲಯ ಗಳೂ ಈ ಆಲಯ ಸಂಕೀರ್ಣದಲ್ಲಿದೆ. ನರಸಿಂಹಸ್ವಾಮಿಯನ್ನು ಆರಾಧಿಸುವಷ್ಟೇ ಭಕ್ತಿ ಭಾವನೆಗಳಿಂದ ಇಲ್ಲಿನ ಇತರ ದೇವರುಗಳಿಗೂ ಪೂಜೆ ನೆರವೇರುತ್ತಿದೆ. ಒಟ್ಟಿನಲ್ಲಿ ಜಲ ಸಮೃದ್ಧವಾದ ಪ್ರದೇಶದಲ್ಲಿ ನೆಲೆಸಿರುವ ಇಲ್ಲಿನ ನರಸಿಂಹ ಸ್ವಾಮಿಯು ಆಂಧ್ರನಾಡಿನ ಪ್ರಸಿದ್ಧ ಅರ್ಚಾಮೂರ್ತಿಗಳ ಸಾಲಿಗೆ ಸೇರಿರುತ್ತಾನೆ.

## ಅಕಿರಿಪಳ್ಳಿ

ಆಂಧ್ರಪ್ರದೇಶದ ಅಕಿರಿಪಳ್ಳಿಯಲ್ಲಿರುವ ವ್ಯಾಘ್ರನರಸಿಂಹ ದೇವಸ್ಥಾನವು ಪವಿತ್ರ ವಾಗಿರುವುದರ ಜೊತೆಯಲ್ಲಿಯೇ ಪ್ರಸಿದ್ಧವೂ ಆಗಿದೆ. ಇದು ಕೃಷ್ಣಾ ಜಿಲ್ಲೆಯಲ್ಲಿದೆ. ಇಲ್ಲಿರುವ ನರಸಿಂಹಸ್ವಾಮಿಗೆ 'ಶೋಭನಾಚಲ ನರಸಿಂಹ' ಎಂಬ ಮತ್ತೊಂದು ಹೆಸರಿದೆ. ಗುಹಾದಾಸಿಯಾಗಿರುವ ಭಗವಂತನ ಉದ್ಭವ ರೂಪಕ್ಕೆ ಇಲ್ಲಿನ ನರಸಿಂಹಸ್ವಾಮಿಯನ್ನು ನಿದರ್ಶನವಾಗಿ ನೀಡಬಹುದು.

ಬೆಟ್ಟದ ತುದಿಯಲ್ಲಿರುವ ದೇವಾಲಯವು ರಮ್ಯವಾದ ವಾತಾವರಣವನ್ನು ಅತ್ಯಂತ ಸುಂದರವಾದ ಪರಿಸರವನ್ನು ಹೊಂದಿರುತ್ತದೆ. ಎಂಥವರಿಗಾದರೂ ಇದು ಪ್ರಿಯವಾದ ಸ್ಥಳವಾಗಿ ಕಂಡುಬರುತ್ತದೆ. ಬೆಟ್ಟದ ಮೂಲದಿಂದ ಹಿಡಿದು ಮೇಲುಭಾಗದ ವರೆಗೆ ಮೆಟ್ಟಲುಗಳನ್ನು ನಿರ್ಮಿಸಿರುತ್ತಾರೆ. ಆಳ್ವಾರರ ಗುಡಿಗಳನ್ನು ಕಟ್ಟಲಾಗಿದೆ. ಇಲ್ಲಿರುವ ಇತರ ದೇವಾಲಯಗಳು ರಾಜಲಕ್ಷ್ಮಿ, ಮಲ್ಲೇಶ್ವರ. ವೆಂಕಟಾಚಲರಿಗೆ ಅಂಕಿತವಾಗಿದೆ. ಇಲ್ಲಿರುವ ಪುಷ್ಕರಿಣಿಗೆ 'ವರಾಹ ಪುಷ್ಕರಿಣಿ' ಯೆಂಬ ಹೆಸರಿದೆ. ಸ್ವಾಮಿಯ ಅಭಿಷೇಕಕ್ಕೆ ಇಲ್ಲಿನ ಜಲವನ್ನೇ ಬಳಸುತ್ತಾರೆ.

ಈ ಸ್ಥಳಕ್ಕೆ ಸಂಬಂಧಿಸಿದ ಪುರಾಣದ ಕಥೆಯನ್ನು ಇಲ್ಲಿ ಗಮನಿಸಬಹುದು. ಕೃತ ಯುಗದಲ್ಲಿ ಇಲ್ಲಿ ಶುಭವ್ರತನೆಂಬ ರಾಜನು ಆಳುತ್ತಿರುತ್ತಾನೆ. ಆತನು ಮಹಾವಿಷ್ಣುವನ್ನು ಕುರಿತು ತಪಸ್ಸು ಮಾಡಿ ಅವನಿಂದ ವರವನ್ನು ಪಡೆದುಕೊಳ್ಳುತ್ತಾನೆ. ಲಕ್ಷ್ಮೀಸಮೇತನಾಗಿ

ಂತೆ ವಿಷ್ಣುವನ್ನು ಆತನು ಬೇಡಿಕೊಳ್ಳಲಾಗಿ ನರಸಿಂಹನ ರೂಪದಿಂದ ಇಲ್ಲಿ ನು ನೆಲೆಸುತ್ತಾನೆ. ಶುಭವ್ರತನ ನೆನಪಿನಲ್ಲಿ ಇಲ್ಲಿರುವ ಬೆಟ್ಟಕ್ಕೆ 'ಶೋಭನಾದ್ರಿ'ಯೆಂಬ ಬಂದಿದೆ.

ಈ ಕ್ಷೇತ್ರದ ಬಗ್ಗೆ ಮತ್ತೊಂದು ಪ್ರಚಲಿತವಾದ ನಿರೂಪಣೆಯನ್ನು ನೋಡಬಹುದು. ?ನೇ ಶತಮಾನದಲ್ಲಿ ಅಚ್ಯುತಭಟ್ಟ ಮತ್ತು ಅನಂತಭಟ್ಟ ಎಂಬ ಇಬ್ಬರು ನಕ್ತರು ಇಲ್ಲಿ ನೆಲಸಿರುತ್ತಾರೆ. ಅವರ ಕನಸಿನಲ್ಲಿ ಮಹಾವಿಷ್ಣುವು ಕಾಣಿಸಿಕೊಂಡು ಇಲ್ಲಿನ ಬೆಟ್ಟದ ಮೇಲೆ ನೆಲೆಸಿರುವೆನೆಂದೂ, ಕತ್ತಲಲ್ಲಿ ತಾನು ಹೂಳಲ್ಪಟ್ಟಿರುವೆ ತನಗೆ ಮುಕ್ತಿದೊರಕಿಸಬೇಕೆಂದೂ ಅಪ್ಪಣೆ ನೀಡುತ್ತಾನೆ. ಕನಸಿನ ಆದೇಶದಂತೆ ?ಗೆ ತೊಡಗಿದಾಗ ಶಿವ-ಕೇಶವ ರೂಪದ ಮೂರ್ತಿಯು ಗೋಚರವಾಗುತ್ತದೆ. ಮೂರ್ತಿಗಳನ್ನು ಪ್ರತಿಷ್ಠೆ ಮಾಡಿ ಅರ್ಚನಾದಿಗಳಿಗೆ ವ್ಯವಸ್ಥೆ ಮಾಡಲಾಗುತ್ತದೆ. ದ ಪುಷ್ಕರಿಣಿಯಲ್ಲಿ ಕಾರ್ತೀಕ ಮಾಸ ಮತ್ತು ಫಾಲ್ಗುಣಮಾಸಗಳಲ್ಲಿ ತೆಪ್ಪವನ್ನು ಎಂಡು ಬರಲಾಗುತ್ತಿದೆ.

ಅಕಿರಿಪಳ್ಳಿಯಲ್ಲಿ ರಥಸಪ್ತಮಿಯಂದು ರಥೋತ್ಸವವು ನೆರವೇರುತ್ತದೆ. ದೇವಾಲಯದ ಹೂವಿನ ತೋಟವಿದೆ. ದೇವರ ಪೂಜಾದಿಗಳಿಗೆ ಅನುಕೂಲವಾಗಿದೆ. ಪುಷ್ಯಬಹುಳ ಯಿಂದ ಮಾಘಶುದ್ಧ ಸಪ್ತಮಿಯವರೆಗೆ ಈ ಕ್ಷೇತ್ರದಲ್ಲಿ ಮಾಘೋತ್ಸವವು ಸುತ್ತದೆ. ಕಾರ್ತೀಕ ಹುಣ್ಣಿಮೆಯಂದು ನಡೆಯುವ ದೀಪೋತ್ಸವವು ಈ ಸ್ಥಳದಲ್ಲಿ ವ ವಿಶೇಷ ಉತ್ಸವವಾಗಿ ಪ್ರಸಿದ್ಧವಾಗಿದೆ. ಅಕಿರಿಪಳ್ಳಿಯು ನರಸಿಂಹ ಕ್ಷೇತ್ರವಾಗಿ ವಾದ ಯಾತ್ರಾಸ್ಥಳವಾಗಿದೆ.

## ಯಾದಗಿರಿಗುಟ್ಟ

ಯಾದಗಿರಿಗುಟ್ಟವು ನಲ್ಗೊಂಡ ಮಂಡಲದ ಪುಣ್ಯಸ್ಥಳವಾಗಿ ಪ್ರಸಿದ್ಧವಾಗಿದೆ. ಭೋನಗಿರಿಗೆ ಸಮೀಪವಾಗಿದೆ. ಭುವನಗಿರಿಯೆಂಬುದು ಇದರ ಹಿಂದಿನ ಹೆಸರು. ಗಿರಿಗುಟ್ಟವು ಹೈದರಾಬಾದಿಗೆ ಸುಮಾರು ಎಪ್ಪತ್ತೆರಡು ಕಿಲೋಮೀಟರ್ ದೂರದಲ್ಲಿದೆ. ತ ಇಲ್ಲಿಯವರೆಗೆ ಒಳ್ಳೆಯ ರಸ್ತೆಯ ಸೌಕರ್ಯವಿದೆ. ಸಿಕಂದರಾಬಾದ್-ಖಾಜಿಪೇಟ ದಲ್ಲಿರುವ ರಾಯಗಿರಿ ಸ್ಟೇಷನ್ನಿನಲ್ಲಿ ಇಳಿದು ಸುಮಾರು ನಾಲ್ಕು ಕಿ.ಮೀ. ದೂರ ಯಾದಗಿರಿಗುಟ್ಟವನ್ನು ತಲುಪಬಹುದು.

ಯಾದಗಿರಿಗುಟ್ಟದಲ್ಲಿ ಲಕ್ಷ್ಮೀನರಸಿಂಹ ದೇವಾಲಯವಿದೆ. ಇದು ಸುಮಾರು ನೂರು ಅಡಿ ಎತ್ತರವಾದ ಗುಡ್ಡದ ಮೇಲೆ ಭವ್ಯವಾದ ರೀತಿಯಲ್ಲಿ ಶೋಭಿಸುತ್ತಿದೆ. ವು ಅತಿ ಪ್ರಾಚೀನವಲ್ಲವಾದರೂ ಅನ್ನವರಂ ದೇವಾಲಯದ ಮಾದರಿಯಲ್ಲಿದೆ.

ಅಪಾರ ಜನಾದರಣೆ ಪಾತ್ರವಾಗಿದೆ. ಇದರ ಇತಿಹಾಸವನ್ನು ನಿರೂಪಿಸುವ ಶಾಸನಗಳಾಗಲಿ ಇತರ ಸಾಮಗ್ರಿಯಾಗಲಿ ಯಾವುದೂ ಇಲ್ಲವಾದರೂ ಪುರಾಣದ ಹಿನ್ನೆಲೆಯಂತೂ ಇದಕ್ಕಿದ್ದೇ ಇದೆ.

ಈ ಆಲಯುವನ್ನು ಕುರಿತ ವಿವರಗಳು ಸ್ಕಂದ ಪುರಾಣದಲ್ಲಿ ಲಭ್ಯವಾಗುತ್ತಿವೆ. ಯಾದವನೆಂಬುವನು ಋಷ್ಯಶೃಂಗನ ಮಗನಾಗಿರುತ್ತಾನೆ. ಇವನು ಬಾಲ್ಯದಿಂದಲೂ ವಿಷ್ಣು ಭಕ್ತನಾಗಿರುತ್ತಾನೆ. ಹರಿಯಲ್ಲಿಯೇ ತನ್ನ ಚಿತ್ತವನ್ನು ನೆಟ್ಟವನಾಗಿರುತ್ತಾನೆ. ತನ್ನ ಸ್ವಾಮಿಯನ್ನು ನರಸಿಂಹರೂಪದಲ್ಲಿ ದರ್ಶನ ಮಾಡಬೇಕೆಂಬ ಹಂಬಲಕ್ಕೆ ಇವನು ಒಳಗಾಗಿರುತ್ತಾನೆ. ತನ್ನ ಮನೋರಥವನ್ನು ಈಡೇರಿಸಿಕೊಳ್ಳಲು ತಪಶ್ಚರ್ಯೆಯು ಅಗತ್ಯವಾದದ್ದೆಂಬುದನ್ನು ಮನಗಂಡವನಾಗಿ ಅದಕ್ಕೆ ಈ ಬೆಟ್ಟವೇ ಯೋಗ್ಯವೆಂದು ಅರಿತುಕೊಳ್ಳುತ್ತಾನೆ. ನರಸಿಂಹರೂಪ ತಳೆದ ತನ್ನ ಸ್ವಾಮಿಯನ್ನು ದರ್ಶಿಸಬೇಕೆಂಬ ಆಕಾಂಕ್ಷೆಯಲ್ಲದೆ ಮತ್ತೇನೂ ಅವನ ಮನಸ್ಸಿನಲ್ಲಿರಲಿಲ್ಲ. ಏಕಾಂತದಲ್ಲಿ ತುಂಬ ನಿಷ್ಠೆಯಿಂದ ಅವನ ತಪಸ್ಸು ಸಾಗಿರುತ್ತದೆ. ಕಠಿಣವಾದ ಪರಿಶ್ರಮದಿಂದ ಕೂಡಿರುತ್ತದೆ. ತಪಶ್ಚರ್ಯೆಯಲ್ಲಿ ಇರಬೇಕಾದ ಎಲ್ಲ ಗುಣಗಳಿಂದ ಕೂಡಿದ ಅವನ ತಪಸ್ಸು ಫಲಪ್ರದವಾದುದಾಗಿರುತ್ತದೆ. ತನ್ನ ಭಕ್ತನ ಗಾಢವಾದ ತಪಸ್ಸಿನ ಮಹಿಮೆಯನ್ನರಿತ ಶ್ರೀಮಹಾವಿಷ್ಣುವು ಅವನ ಮುಂದೆ ಪ್ರತ್ಯಕ್ಷನಾಗಿ ಅವನಿಗೆ ಬೇಕಾದ ವರವನ್ನು ಬೇಡಿಕೊಳ್ಳಲು ಆಜ್ಞಾಪಿಸುತ್ತಾನೆ. ತನ್ನ ಹೃದಯವನ್ನು ಕೈವಶಮಾಡಿಕೊಂಡ ಭಗವಂತನ ಮೂರು ರೂಪಗಳನ್ನು ತೋರಬೇಕೆಂದು ಯಾದವನು ಪ್ರಾರ್ಥಿಸುತ್ತಾನೆ.

## ನರಸಿಂಹ ರೂಪ ವೈವಿಧ್ಯ

ಯೋಗಾ ನರಸಿಂಹ, ಜ್ವಾಲಾ ನರಸಿಂಹ, ಗಂಡಭೇರುಂಡ ನರಸಿಂಹರೆಂಬ ಮೂರು ರೂಪಗಳನ್ನು ಭಕ್ತನ ಕೋರಿಕೆಯ ಮೇರೆಗೆ ಭಗವಂತನು ಅನುಗ್ರಹಿಸುತ್ತಾನೆ. ಆದರೆ ಆ ಕ್ಷಣಮಾತ್ರದ ದರುಶನದಿಂದ ಯಾದವನಿಗೆ ತೃಪ್ತಿಯಾಗುವುದಿಲ್ಲ. ಆತನಲ್ಲಿನ ದರ್ಶನಾಕಾಂಕ್ಷೆಯು ನಿರಂತರವಾಗಿ ಸ್ವಾಮಿಯ ಸಾನ್ನಿಧ್ಯದಲ್ಲಿರುವುದು ಅವನಿಗೆ ಬೇಕಾಗಿರುತ್ತದೆ. ಆದಕಾರಣ ಸ್ವಾಮಿಯು ಈ ಮೂರು ರೂಪಗಳಿಂದ ನಿರಂತರವಾಗಿ ಬೆಟ್ಟದ ಮೇಲೆ ನೆಲೆಸಿರಬೇಕೆಂದು ಅವನು ಪ್ರಾರ್ಥಿಸುತ್ತಾನೆ. ಯಾದವನ ತಪಸ್ಸಿಗೆ ಮೆಚ್ಚಿ ನರಸಿಂಹಸ್ವಾಮಿಯು ನೆಲೆಗಿಂತ ತಾಣವೇ ಇಂದು ಯಾದಗಿರಿಗುಟ್ಟವೆಂದು ಪ್ರಸಿದ್ಧಿ ಪಡೆದಿದೆ. ಅದು ಮೊದಲು ಯಾದವಗಿರಿಯಾದದ್ದು ನಂತರ ಯಾದಗಿರಿಯೆಂದಾಗಿರುವುದು ಗಮನಾರ್ಹವಾದದ್ದು.

ನರಸಿಂಹಸ್ವಾಮಿಯ ಮೂರು ರೂಪಗಳು ಶದ್ಧಾಭಕ್ತಿಗಳಿಂದ ಅರ್ಚಿಸುವವರಿಗೆ ಕಂಡುಬರುವುದಾಗಿದೆ. ಕಾಲಕ್ರಮದಲ್ಲಿ ಇಲ್ಲಿ ದೇವಾಲಯವನ್ನು ನಿರ್ಮಿಸಲಾಗಿದೆ. ಇದರ ಹಿನ್ನೆಲೆಯೂ ಸ್ವಾರಸ್ಯವಾಗಿದೆ. ಮೊದಲು ಇದು ಮಾನವ ವಾಸವಿಲ್ಲದ ನಿರ್ಜನವಾದ

ಅರಣ್ಯವಾಗಿತ್ತು. ಈ ಪ್ರಾಂತದ ಗ್ರಾಮಾಧಿಕಾರಿಯ ಕನಸಿನಲ್ಲಿ ಸ್ವಾಮಿಯು ಪ್ರತ್ಯಕ್ಷನಾಗಿ ಬೆಟ್ಟದ ಮೇಲೆ ತನ್ನ ಸನ್ನಿಧಿಯಿರುವುದೆಂದೂ, ಅಲ್ಲಿ ಆಲಯವನ್ನು ನಿರ್ಮಿಸಬೇಕೆಂದೂ ಹೇಳಿದ ಕಾರಣ ಗ್ರಾಮಾಧಿಕಾರಿಯು ಅರ್ಹರಾದ ವ್ಯಕ್ತಿಗಳನ್ನು ತನ್ನೊಂದಿಗೆ ಕರೆದುಕೊಂಡು ಭಗವಂತನ ನೆಲೆಯನ್ನು ಅರಸತೊಡಗುತ್ತಾನೆ. ಹೀಗಿರಬೇಕಾದರೆ ಒಂದು ದೊಡ್ಡಶಿಲೆಯ ಕೆಳಗೆ ಮೂರ್ತಿಗಳು ಕಂಡುಬರುತ್ತವೆ. ಅದನ್ನು ಸಂರಕ್ಷಿಸಿ ಪ್ರತಿಷ್ಠೆಮಾಡಲಾಗುತ್ತದೆ. ನಂತರ ಅರ್ಚನಾದಿಗಳಿಗೆ ವ್ಯವಸ್ಥೆ ಮಾಡಲಾಗುತ್ತದೆ.

ಇದಕ್ಕೆ ಸಂಬಂಧಿಸಿದ ಹಾಗೆ ಮತ್ತೊಂದು ಕಥೆಯು ರೂಢಿಯಲ್ಲಿದೆ. ಇದರ ಪ್ರಕಾರ ಈಗಿರುವ ಸ್ಥಳಕ್ಕೆ ಸುಮಾರು ಎರಡುಮೈಲಿ ದೂರದಲ್ಲಿ ಭಗವಂತನು ಪ್ರಪ್ರಥಮವಾಗಿ ಸ್ವಯಂಭುವಾಗಿ ಆವಿರ್ಭವಿಸುತ್ತಾನೆ. ಇಂದು ಇದು ಹಳೆಯ ನರಸಿಂಹ ಆಲಯವಾಗಿದೆ. ಇಲ್ಲೂ ಕನಸಿನದೇ ಉದಾಹರಣೆಯಿರುತ್ತದೆ. ಅನಂತರ ಸ್ವಾಮಿಯು ಆ ಜಾಗವನ್ನು ಬಿಟ್ಟು ತನ್ನ ಏಕಾಗ್ರತೆಗೆ ಧ್ಯಾನಕ್ಕೆ ಅನುಕೂಲವಾಗುವ ಹಾಗೆ ಈಗಿನ ಬೆಟ್ಟದಲ್ಲಿ ಬಂದು ನೆಲೆಸಿರುತ್ತಾನೆ.

## ಆಲಯ ವೈಭವ

ಬೆಟ್ಟವು ಎತ್ತರವಾಗಿದ್ದು ಕೆಳಭಾಗದಲ್ಲಿ ಮಹಾದ್ವಾರವನ್ನು ನಿರ್ಮಿಸಿದ್ದಾರೆ. ಇದಕ್ಕೆ ಎತ್ತರವಾದ ಗೋಪುರವನ್ನು ಕಟ್ಟಲಾಗಿದೆ. ಇಲ್ಲಿರುವ ದ್ವಾರಕ್ಕೆ ವೈಕುಂಠದ್ವಾರವೆಂದು ಹೆಸರು. ಬೆಟ್ಟದ ಮೇಲೇರಿ ಹೋದರೆ ಮೇಲ್ಭಾಗದಲ್ಲಿ ಒಂದು ಗಿರಿನಗರವೇ ನಿರ್ಮಾಣ ವಾಗಿರುವಂತೆ ಕಂಡುಬರುತ್ತದೆ. ಯಾತ್ರಿಕರ ವಸತಿ ಸೌಕರ್ಯಕ್ಕಾಗಿ ಸುಮಾರು ಐವತ್ತಕ್ಕೂ ಹೆಚ್ಚಾದ ಛತ್ರಗಳನ್ನು ನಿರ್ಮಿಸಿದ್ದಾರೆ. ಇದು ಯಾತ್ರಿಕರ ವಸತಿ ಸಮಸ್ಯೆಯನ್ನು ಪೂರೈಸು ವುದಕ್ಕೆ ಪೂರಕವಾಗಿದೆ.

ನರಸಿಂಹಸ್ವಾಮಿಯ ಆಲಯದ ಸಿಂಹದ್ವಾರವನ್ನು ಪ್ರವೇಶಿಸಿದ ನಂತರ ಬಲಗಡೆಗೆ ಪ್ರಾಣದೇವರ ಗುಡಿಯನ್ನು ಕಾಣಬಹುದು. ಹನುಮಂತ ದೇವರ ವಿಗ್ರಹದ ಕೆಳಗೆ ಸುಮಾರು ಹತ್ತು ಅಂಗುಲ ಅಗಲ ಮತ್ತು ಅರವತ್ತು ಅಡಿಗಳಷ್ಟು ಉದ್ದವಾಗಿ ಸೀಳು ಬಿಟ್ಟಿರುವ ಶಿಲೆಯಿದೆ. ಯಾದವನಿಗೆ ಗಂಡಭೇರುಂಡ ನರಸಿಂಹನ ದರುಶನವಾದ ಸ್ಥಳವಿದೆಂದು ಹೇಳುತ್ತಾರೆ. ಈ ಸ್ಥಳದ ಮಹತ್ತ್ವವನ್ನು ಸಾರಿಹೇಳುವಂತೆ ಎಣ್ಣೆಯ ದೀಪವನ್ನು ಇಲ್ಲಿ ಬೆಳಗಿಸಿರುತ್ತಾರೆ.

ಸಿಂಹದ್ವಾರದ ಎಡಗಡೆಗೆ ತಿರುಗಿದರೆ ಒಂದು ವಿಶಾಲವಾದ ಹಜಾರವನ್ನು ಪ್ರವೇಶಿಸಬಹುದು. ಇದು ಭಕ್ತರು ಕುಳಿತುಕೊಳ್ಳಲು ಅನುಕೂಲವಾದ ಸ್ಥಳವಾಗಿದೆ. ಹಜಾರದ ಎಡಗಡೆಗೆ ಮುಖ್ಯ ಆಲಯವಿದೆ. ಇದರ ಮುಂಭಾಗದಲ್ಲಿ ಸ್ಥಂಭದ ಹಿಂದೆ ಸ್ಥಂಭಗಳಿಂದಲೇ ನಿರ್ಮಿತವಾದ ಗರ್ಭಗೃಹವಿರುತ್ತದೆ. ಇದು ಸುಮಾರು ಮೂವತ್ತು ಅಡಿ ಉದ್ದವಾಗಿ ಹನ್ನೆರಡು ಅಡಿ ಅಗಲವಾಗಿರುತ್ತದೆ. ಇದೊಂದು ಗುಹಾರೂಪದಲ್ಲಿರುವ

ದೈವಸನ್ನಿಧಿಯೆಂದು ಹೇಳಲು ಅಡ್ಡಿಯಿಲ್ಲ. ಪಕ್ಕಕ್ಕೆ ಹೊರಳಿದ ಒಂದು ಅಖಂಡ ಶಿಲೆಯನ್ನು ಕೊರೆದು ದೇವಾಲಯವನ್ನು ನಿರ್ಮಿಸಿರುವ ಹಾಗೆ ಕಂಡುಬರುತ್ತದೆ. ತೀರಾ ಇಕ್ಕಟ್ಟಾದ ಮಾರ್ಗದಿಂದ ಒಳಗೆಹೋಗುವ ಮುನ್ನ ತಲೆಯನ್ನು ತಗ್ಗಿಸಿಕೊಂಡು ಹೋಗುವುದು ಕ್ಷೇಮಕರ. ಹೀಗೆ ಸಹಜನಿರ್ಮಾಣವಾದ ಗುಹೆಯಲ್ಲಿ ನರಸಿಂಹನ ದರ್ಶನಭಾಗ್ಯವು ಲಭಿಸುತ್ತದೆ.

ಗರ್ಭಗುಡಿಯ ಒಳಗೆ ಎಡಗಡೆಯಲ್ಲೊಂದು ಪೀಠವಿದೆ. ಅಲ್ಲಿ ವಿಶೇಷ ಅರ್ಚನಾದಿಗಳು ನೆರವೇರುತ್ತವೆ. ಗುಹೆಯ ಮುಕ್ತಾಯದ ಭಾಗದಲ್ಲಿ ಮೂಲಮೂರ್ತಿಗಳ ದರ್ಶನ ಪಡೆಯಬಹುದು. ಇಲ್ಲಿರುವ ಮತ್ತೊಂದು ಆಕಾರವು ನಮ್ಮ ಗಮನ ಸೆಳೆಯುತ್ತದೆ. ಒಂದಕ್ಕೊಂದು ಹೆಣೆದುಕೊಂಡು ನಡುವೆ ಒಂದದಡಿಯಷ್ಟುಎತ್ತರವಾಗಿ ಅರ್ಧಚಂದ್ರಾಕಾರದಲ್ಲಿರುವ ಹಾಗೆ ಕಂಡುಬರುವ ಎರಡು ಶಿಲೆಗಳು ಗೋಚರಿಸುತ್ತವೆ. ಯಾದವನ ತಪಸ್ಸಿಗೊಲಿದ ವಿಷ್ಣುವು ಜ್ವಾಲಾನರಸಿಂಹ ರೂಪದಲ್ಲಿ ಹೀಗೆ ಕಾಣಿಸಿಕೊಂಡನೆಂದು ಹೇಳುತ್ತಾರೆ. ಇಲ್ಲಿ ಒಂದು ಸರ್ಪವು ಸಂಚಾರಮಾಡುತ್ತಿರುವ ಕಾರಣ ಇದು ಜಾಗೃತವಾದ ಸ್ಥಳವೆಂದು ತಿಳಿಸುತ್ತಾರೆ. ಇದಕ್ಕೆ ಎದುರಾಗಿರುವ ಶಿಲೆಯಮೇಲೆ ಧ್ಯಾನದ ಭಂಗಿಯಲ್ಲಿರುವ ಮತ್ತೊಂದು ಪ್ರತಿಮೆಯಿದೆ. ಇದು ಯಾದವನಿಗೆ ಸಾಕ್ಷಾತ್ಕಾರವಾದ ವಿಷ್ಣುವಿನ ಬೇರೊಂದು ರೂಪವಾದ ಯೋಗಾನರಸಿಂಹನೆಂದು ಹೇಳುತ್ತಾರೆ. ಈ ಎರಡು ರೂಪಗಳನ್ನು ಗರ್ಭಗೃಹದಲ್ಲಿ ಅರ್ಚನಾದಿಗಳಿಂದ ಆರಾಧಿಸಲಾಗುತ್ತಿದೆ.

ನಿಸರ್ಗ ನಿರ್ಮಾಣದ ಯಾವುದೇ ರಚನೆಗಳನ್ನು ಭಗ್ನಗೊಳಿಸಲು ಸಾಧ್ಯವಾಗದು ಎಂಬುದನ್ನು ಯಾದಗಿರಿಗುಟ್ಟದ ನರಸಿಂಹಸ್ವಾಮಿ ಆಲಯವು ಎತ್ತಿಹಿಡಿಯುತ್ತದೆ. ಅದಕ್ಕಾಗಿಯೆ ಇಲ್ಲಿನ ಗುಹಾರೂಪವನ್ನು ಆಧುನಿಕ ರೀತಿಯಲ್ಲಿ ಪರಿವರ್ತಿಸುವ ಪ್ರಯತ್ನಕ್ಕೆ ಕೈಹಾಕಲಾಗಿಲ್ಲ. ಸ್ವಲ್ಪಮಟ್ಟಿನ ಮಾರ್ಪಾಟು ನಡೆದಿರುವುದಾದರೂ ಅದು ಅಗತ್ಯವಾದ ಹಾಗೆ ಅನಿವಾರ್ಯವೂ ಆದದ್ದಾಗಿದೆ. ಇಲ್ಲಿರುವ ವಿಗ್ರಹಗಳ ಸಹಜತೆ ಮತ್ತು ಸ್ವಾಮಿಯ ರಹಸ್ಯವನ್ನು ಕಾಪಾಡುವಂತೆ ಬೆಳ್ಳಿಯ ವಿಗ್ರಹಗಳನ್ನು ಪೂಜೆಗೆ ಅನುಕೂಲವಾಗುವಂತೆ ಮಾಡಿಸಿಟ್ಟಿರುವುದು ಯೋಗ್ಯಕಾರ್ಯವಾಗಿದೆ.

ಯಾದಗಿರಿಗುಟ್ಟದ ಮೇಲಿರುವ 'ಗಿರಿ ನಗರವು' ಎಲ್ಲ ಕಾಲಕ್ಕೂ ಯಾತ್ರಿಕರ ಸಡಗರ, ಸಂಭ್ರಮಗಳಿಂದ ತುಂಬಿಕೊಂಡು ಶೋಭಿಸುತ್ತಿರುತ್ತದೆ. ಮಹಿಮಾವಂತ ಕ್ಷೇತ್ರವಾಗಿ ಹಲವಾರು ರಾಜ್ಯಗಳಿಂದ ಯಾತ್ರಿಕರನ್ನು ಆಕರ್ಷಿಸುತ್ತಿದೆ. ಶ್ರದ್ಧಾಭಕ್ತಿ ನಂಬಿಕೆಗಳಿಂದ ಸೇವೆಮಾಡಿದವರಿಗೆ ಕೆಲವು ವ್ಯಾಧಿಗಳು ನಿವಾರಣೆಯಾಗುತ್ತವೆಯೆಂದು ನಂಬಿಕೊಂಡು ಬರಲಾಗಿದೆ. ಸುಮಾರು ಅರ್ಧ ಶತಮಾನದಿಂದೀಚೆಗೆ ಮಾತ್ರವೇ ಯಾದಗಿರಿ ಗುಟ್ಟ ಕ್ಷೇತ್ರವು ಶೀಘ್ರಗತಿಯಲ್ಲಿ ಅಭಿವೃದ್ಧಿಗೊಂಡು ಸಾಗಿಬಂದಿದೆ. ಹೀಗಾಗಿಯೇ ಅದಕ್ಕೆ ಆಂಧ್ರದ ನರಸಿಂಹ ಕ್ಷೇತ್ರಗಳಲ್ಲಿ ಗಮನಾರ್ಹವಾದ ಪಾಲು ಕೂಡಾ ಸಹಜವಾಗಿಯೇ ಲಭ್ಯವಾಗಿದೆ.

# ಸಿಂಗರಾಯಕೊಂಡ

ಸಿಂಗರಾಯಕೊಂಡವೆಂಬ ಬೆಟ್ಟವು ಆಂಧ್ರಪ್ರದೇಶದ ಪ್ರಕಾಶಂ ಜಿಲ್ಲೆಗೆ ಸೇರಿದೆ. ಹೌರಾ-ಮದ್ರಾಸ್ ರೈಲ್ವೆ ಮಾರ್ಗದಲ್ಲಿರುವ ಗ್ರಾಂಡ್‌ಟ್ರಂಕ್ ರಸ್ತೆಯ ಪೂರ್ವಕ್ಕೆ ಒಂದು ಕಿಲೋಮೀಟರ್ ದೂರದಲ್ಲಿರುವ ಇಲ್ಲಿನ ಬೆಟ್ಟದ ಮೇಲೆ ವರಾಹ ಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯವು ಕಂಗೊಳಿಸುತ್ತಿದೆ. ದಕ್ಷಿಣದ ಸಿಂಹಾಚಲವೆಂಬ ಹೆಸರಿನಿಂದ ಪ್ರಸಿದ್ಧ ಪಡೆದಿದೆ. ಪುಣ್ಯಕ್ಷೇತ್ರವಾಗಿ ಭಗವಂತನ ಸನ್ನಿಧಾನಕ್ಕೆ ಹೆಸರುವಾಸಿಯಾಗಿದೆ. ಪ್ರಸಿದ್ಧ ದೇವಾಲಯವಾದ ಸಿಂಹಾಚಲದ ಮಾರ್ಗದರ್ಶನವನ್ನು ಪಡೆದು ಸಿಂಗರಾಯಕೊಂಡದಲ್ಲಿನ ದೇವಾಲಯವು ಜನಾದರಣೀಯವಾಗಿರುವಂತೆ ಇದನ್ನು ಕಂಡವರಿಗೆ ಭಾಸವಾಗದಿರದು.

ಸಿಂಗರಾಯಕೊಂಡದ ಬೆಟ್ಟದ ಮೇಲೆ ವರಾಹ ನರಸಿಂಹ ದೇವಾಲಯದೊಂದಿಗೆ ಯೋಗಾನರಸಿಂಹನ ಗುಡಿಯೂ ಇರುವುದನ್ನು ಕಾಣಬಹುದು. ಮೂಲ ದೇವಾಲಯದೊಂದಿಗೆ ರಾಮಾಯಣವನ್ನು ಬೆಸುಗೆ ಹಾಕಿದಂತಿರುವ ಜಾನಪದ ಮೂಲದ ಕತೆಯನ್ನು ಈ ದೇವಾಲಯಕ್ಕೆ ಸಂಬಂಧಿಸಿದಂತೆ ಹೇಳುತ್ತಾರೆ. ಚಂದ್ರನು ರಾವಣನ ಸೆರೆಯಿಂದ ಸೀತಾದೇವಿಯನ್ನು ಬಿಡಿಸಿಕೊಂಡು ಬಂದ ನಂತರ ತಾನು ರಾವಣವಧೆಗೈದ ಪಾಪವನ್ನು ಹೋಗಲಾಡಿಸಿಕೊಳ್ಳುವ ಮಾರ್ಗದ ಬಗ್ಗೆ ಚಿಂತಿಸುತ್ತಾನೆ. ಆಗ ನಾರದರು ಸಲಹೆ ಮಾಡಿದ ಪ್ರಕಾರ ವರಾಹ ಲಕ್ಷ್ಮೀನರಸಿಂಹನನ್ನು ಈ ಸ್ಥಳದಲ್ಲಿ ಸ್ಥಾಪಿಸುತ್ತಾನೆ. ತ್ರೇತಾಯುಗಕ್ಕೂ- ಕೃತಯುಗಕ್ಕೂ ಒಂದು ರೀತಿಯ ನಂಟನ್ನುಂಟು ಮಾಡಿದಂತೆ ಈ ಪ್ರಸಂಗವನ್ನು ಗಮನಿಸಬಹುದಾಗಿದೆ. ಬಹುಪಾಲು ದೇವಾಲಯಗಳಿಗೆ ಪುರಾಣ ಪ್ರಸಿದ್ಧರಾದ ಮಹರ್ಷಿಗಳ ಇಲ್ಲವೇ ಚಾರಿತ್ರಿಕ ಮಹಾಪುರುಷರೊಂದಿಗೆ ಸಂಬಂಧವಿರುವುದು ಅದರ ಇತಿಹಾಸದ ಅವಲೋಕನದಿಂದ ತಿಳಿದುಬರುವಂತಿರುತ್ತದೆ.

ವಿಜಯನಗರ ಸಾಮ್ರಾಜ್ಯದ ಅತ್ಯಂತ ಪ್ರತಿಷ್ಠಿತ ರಾಜನಾಗಿದ್ದ ಶ್ರೀಕೃಷ್ಣದೇವರಾಯನು ಈ ದೇವಾಲಯದ ರಾಜಗೋಪುರವನ್ನು ನಿರ್ಮಾಣ ಮಾಡಿಸಿರುತ್ತಾನೆ. ಕರ್ನಾಟಕದ ಇತಿಹಾಸದಲ್ಲಿ ಧ್ರುವತಾರೆಯಂತಿರುವ ಈತನು ಸಕಲಾಂಧ್ರ ಜನರಿಗೂ ಗೌರವಾರ್ಹನಾಗಿದ್ದಾನೆ. ಹಿಂದೂಧರ್ಮವನ್ನು ಪುನರುತ್ಥಾನಗೊಳಿಸಿದ ಕೃಷ್ಣದೇವರಾಯರಿಂದ ಕರ್ನಾಟಕ ಮತ್ತು ಆಂಧ್ರಪ್ರದೇಶದ ನೂರಾರು ದೇವಾಲಯಗಳು ಬೆಳಕುಕಂಡಿವೆ. ಇಂಥವುಗಳ ಸಾಲಿಗೆ ಸಿಂಗರಾಯಕೊಂಡದ ದೇವಾಲಯವನ್ನೂ ಸೇರಿಸಬಹುದು.

ಯೋಗಾನರಸಿಂಹ ದೇವಾಲಯದ ಮೂಲವರರನ್ನು ನಾರದರೇ ಸ್ವಯಂ ಪ್ರತಿಷ್ಠೆ ಮಾಡಿರುವರೆಂದು ಹೇಳುತ್ತಾರೆ. ಈ ಸ್ವಾಮಿಯ ಸೇವೆಮಾಡಿದವರಿಗೆ ರೋಗಬಾಧೆಗಳು ತೊಲಗಿ ಆರೋಗ್ಯ ಸಂತಾನ ಇಷ್ಟಾರ್ಥಗಳು ಪ್ರಾಪ್ತವಾಗುವುದೆಂಬುದು ಸಾಮಾನ್ಯ ನಂಬಿಕೆಯಾಗಿದೆ. ನರಸಿಂಹಸ್ವಾಮಿಯ ಜನಪ್ರಿಯತೆಗೆ ಇಲ್ಲಿ ಪ್ರಚಾರದಲ್ಲಿರುವ ಕತೆಗಳು ಐತಿಹ್ಯಗಳು ಸಾಕ್ಷಿಯಾಗಿದೆ. ಅಸಂಖ್ಯಾತ ಭಕ್ತವೃಂದವು ಈತನ ದರ್ಶನಾಕಾಂಕ್ಷಿಗಳಾಗಿ

ಇಲ್ಲಿಗೆ ಬರುತ್ತಾರೆ. 'ತಾತಗಾರು' ಎಂಬ ಮತ್ತೊಂದು ಹೆಸರನ್ನು ಈ ಸ್ವಾಮಿಯು ಗಳಿಸಿರುವ ಹಿನ್ನೆಲೆಯನ್ನು ಒಂದು ಘಟನೆಯ ಆಧಾರದ ಮೇಲೆ ಪರಿಶೀಲಿಸಬಹುದಾಗಿದೆ.

## ಒಂದು ಐತಿಹ್ಯ

ಯೋಗಾನರಸಿಂಹನ ದರುಶನಾಕಾಂಕ್ಷಿಗಳಾಗಿ ಒಮ್ಮೆ ಓರ್ವ ದಂಪತಿಗಳು ಈ ಕ್ಷೇತ್ರಕ್ಕೆ ಆಗಮಿಸಿರುತ್ತಾರೆ. ಭಗವಂತನ ಕೃಪೆಗಾಗಿ ಹಾರೈಸಿ ಇವರು ಧ್ಯಾನಮಗ್ನರಾಗಿರಬೇಕಾದರೆ ಇವರ ಮೂರು ವರ್ಷದ ಮಗನು ನಿದ್ರೆಮಾಡಿಬಿಟ್ಟಿರುತ್ತಾನೆ. ಬಾಲಕನು ದೇವಾಲಯದ ಮೂಲೆಯೊಂದರಲ್ಲಿ ಮಲಗಿರುತ್ತಾನೆ. ದೇವರ ಧ್ಯಾನವನ್ನು ಮುಗಿಸಿದ ದಂಪತಿಗಳು ಮಗನ ಪರಿವೆಯಿಲ್ಲದೆ ಹೊರನಡೆದು ಬಿಡುತ್ತಾರೆ. ಕೆಲವೇ ಕ್ಷಣಗಳಲ್ಲಿ ತಾಯಿಯಾದವಳಿಗೆ ತನ್ನ ಕಂದನ ನೆನಪು ಬಂದು ದೇವಾಲಯಕ್ಕೆ ಹೋಗಿ ನೋಡುವಲ್ಲಿ ಅರ್ಚಕರು ಮುಂಬಾಗಿಲಿಗೆ ಬೀಗ ಹಾಕಿ ಮನೆಗೆ ಮರಳಿರುತ್ತಾರೆ. ಏನೂ ಮಾಡಲು ದಾರಿ ಕಾಣದ ದಂಪತಿಗಳು ದೇವರ ಮೇಲೆ ಭಾರಹಾಕಿ ಹೊರಗಿನ ಮಂಟಪದಲ್ಲಿ ಅಂದಿನ ರಾತ್ರಿಯನ್ನು ಕಳೆಯುತ್ತಾರೆ.

ಸೂರ್ಯೋದಯವಾಗುತ್ತಿದ್ದಂತೆ ತಮ್ಮ ಕಂದನು 'ಅಮ್ಮಾ' ಎಂದು ತೊದಲುತ್ತ ಬಂದು ಪ್ರೀತಿ-ಸಂಭ್ರಮಗಳಿಂದ ತಾಯಿಯನ್ನು ತಬ್ಬಿಕೊಳ್ಳುತ್ತಾನೆ. ಸಂತೋಷದಿಂದ ತಂದೆ-ತಾಯಿಗಳು ತಮ್ಮ ಮಗುವನ್ನು ಅಪ್ಪಿಕೊಂಡು ಮಗುವಿನ ಮೇಲಿನ ಮಮತೆ ಪ್ರೀತಿ-ವಾತ್ಸಲ್ಯಗಳಿಂದ ಅವನನ್ನು ಮುದ್ದಾಡುತ್ತಾರೆ. ತಾಯಿಯಾದವಳಿಗೆ ತನ್ನ ಕಂದನ ಬಗ್ಗೆ ಕುತೂಹಲ, ಸಂಭ್ರಮಾದಿಗಳು ಅಧಿಕಗೊಂಡು ತನ್ನ ಮಗುವು ಹಿಂದಿನ ದಿನವೆಲ್ಲ ಹೇಗೆ ಕಳೆದನೆಂಬ ವಿಚಾರವನ್ನು ಅರಿತುಕೊಳ್ಳುವ ತವಕವುಂಟಾಗುತ್ತದೆ. ಮಗುವಿನ ಭಯ, ಹಸಿವುಗಳ ಬಗ್ಗೆ ಆಕೆಯು ತಿಳಿದುಕೊಳ್ಳಲು ಉತ್ಸುಕಳಾಗುತ್ತಾಳೆ. ತನ್ನ ತಾಯಿಯ ಸಂದೇಹವನ್ನು ನಿವಾರಿಸುವ ಕೆಲವು ವಿಚಾರಗಳನ್ನು ಪುಟ್ಟ ಬಾಲಕನು ತಿಳಿಸುತ್ತಾನೆ. ತಾನು ತಾತನ ಆಶ್ರಯದಲ್ಲಿದ್ದೆನೆಂದೂ ಅವನೇ ತನಗೆ ತಿನ್ನಲು ಮೊಸರನ್ನವನ್ನು ನೀಡಿ ತನ್ನ ಹಸಿವನ್ನು ನಿವಾರಿಸಿದನೆಂದೂ ಆ ಬಾಲಕನು ತಿಳಿಸುತ್ತಾನೆ. ಮಕ್ಕಳ ಮುಗ್ಧಮನೋಭಾವಕ್ಕೂ ಕುಟಿಲತೆಯಿಲ್ಲದ ಅವರ ಪ್ರೀತಿ ಪ್ರೇಮಗಳಿಗೂ ಈ ಮಾತುಗಳು ನಿದರ್ಶನವೆಂದು ಹೇಳಬಹುದು. ನರಸಿಂಹದೇವನೇ ತಾತನ ರೂಪದಲ್ಲಿ ಬಂದು ತನ್ನ ಕಂದನನ್ನು ಸಲಹಿದ್ದಾನೆಂಬ ವಿಚಾರವು ತಾಯಿಯಾದವಳಿಗೆ ಹೊಳೆಯುತ್ತದೆ. ತನ್ನ ಮಗುವಿನ ಬಗ್ಗೆ ಆಕೆಯಲ್ಲಿ ಧನ್ಯತೆಯ ಭಾವವು ಮೂಡುತ್ತದೆ. ಮಗುವನ್ನು ಕಾಪಾಡಿದ ಆತನ ದೀನಪಾಲಕ ಗುಣದ ಬಗ್ಗೆ ಮತ್ತು ಆತನ ರೂಪಾದಿ ವಿಶೇಷದ ವಿಚಾರವಾಗಿ ಆಕೆಯಲ್ಲಿ ಭಕ್ತಿಭಾವವುಂಟಾಗುತ್ತದೆ. ಅಂದಿನಿಂದ ಯೋಗನರಸಿಂಹನನ್ನು 'ತಾತಗಾರು' ಎಂದು ಕರೆಯುವುದು ರೂಢಿಯಾಯಿತೆಂದು ಸ್ಥಳೀಯರು ಹೇಳುತ್ತಾರೆ. ಇದಲ್ಲದೆ ನರಸಿಂಹಸ್ವಾಮಿಗೆ ಶನಿವಾರದಂದು ಮಾತ್ರವೇ ಮೊಸರನ್ನವನ್ನು ನೈವೇದ್ಯವಾಗಿ ಸಮರ್ಪಣೆ ಮಾಡುತ್ತಿದ್ದ ಪದ್ಧತಿಗೆ ಬದಲಾಗಿ ಪ್ರತಿನಿತ್ಯವೂ ಮೊಸರನ್ನವನ್ನು ಪ್ರಸಾದವಾಗಿ ನೀಡುವ ಪದ್ಧತಿ ಬೆಳೆದಿದೆ.

ಯೋಗಾ ನರಸಿಂಹಸ್ವಾಮಿ ಆಲಯದ ಉತ್ತರದಿಕ್ಕಿಗೆ ವೀರಾಂಜನೇಯ ದೇವಾಲಯ ವಿದೆ. ಇದಕ್ಕೆ ಸುಮಾರು ಒಂದು ಸಾವಿರ ವರುಷಗಳು ಸಂದಿವೆಯೆಂದು ಹೇಳುತ್ತಾರೆ. ಇದಕ್ಕೆ ಆಧಾರ ಶಿಲೆ ಮಾತ್ರವೆ ಎಂದು ಹೇಳಬಹುದು. ಮಕ್ಕಳು ಯಾವಾಗಲೂ ಕೂರು ತ್ತಿದ್ದ ಕಲ್ಲು ಭಾಗವಾಗಿ ಅಲ್ಲಿ ಆಕಾರವೊಂದು ಮೂಡಿಬಂದಿತೆಂದೂ, ಅದನ್ನು ಶ್ರದ್ಧಾಭಕ್ತಿ ಗಳಿಂದ ಪೂಜಿಸಿಕೊಂಡುಬರಲಾಗುತ್ತಿದೆಯೆಂದೂ ತಿಳಿದುಬರುತ್ತವೆ.

ವರಾಹ ನರಸಿಂಹಸ್ವಾಮಿ ಆಲಯದ ಪಡುವಣ ದಿಕ್ಕಿನಲ್ಲಿ ತಟಾಕವಿದೆ. ಇದನ್ನು ಕಣ್ವಮಹರ್ಷಿಗಳ ಕುಂಡವೆಂದೂ, ಭವನಾಶಿನಿ ತೀರ್ಥವೆಂದೂ ಕರೆಯುವರು. ಯೋಗಾ ನರಸಿಂಹ ಆಲಯದ ಪೂರ್ವದಿಕ್ಕಿನಲ್ಲಿರುವ ಕೊಳವು ದೇವೇಂದ್ರನ ವಜ್ರಾಯುಧವು ನೆಲಕ್ಕೆ ತಾಗಿದ ಕಾರಣ ಸೃಷ್ಟಿಯಾಯಿತೆಂದು ತಿಳಿಸುವ ಕತೆ ಪ್ರಚಾರದಲ್ಲಿದೆ. ಸಮೀಪದಲ್ಲಿ 'ಮುಟ್ಲೋಡು' 'ಕಾರಟಾದ್ರಿ'ಗಳಿವೆ. ಈ ಎಲ್ಲ ಸ್ಥಳಗಳೂ ಸಿಂಗರಾಯಕೊಂಡದ ಹೆಗ್ಗಳಿಕೆಯ ಕುರುಹುಗಳಾಗಿವೆ. ಪೋಷಕಬಲ, ಸ್ಥಾನಬಲಗಳಿಂದ ತನ್ನ ಹಿರಿಮೆ-ಗರಿಮೆಗಳನ್ನು ಹೊಂದಿ ಭಕ್ತರಿಗೆ ಪುಣ್ಯಕ್ಷೇತ್ರವಾಗಿ ಸಿಂಗರಾಯಕೊಂಡವು ಪ್ರಖ್ಯಾತವಾಗಿದೆ.

# ಕೊರಕೊಂಡ

ಆಂಧ್ರಪ್ರದೇಶದಲ್ಲಿ ಹರಿಯುವ ನದಿಗಳಲ್ಲಿ ಗೋದಾವರಿಯು ಪ್ರಖ್ಯಾತವಾದದ್ದು. ಅದೇ ಹೆಸರಿನ ಜಿಲ್ಲೆಯೂ ಇಲ್ಲಿದೆ. ಈ ಜಿಲ್ಲೆಯಲ್ಲಿ ಹೆಸರುಗಳಿಸಿರುವ ರಾಜಮಹೇಂದ್ರಿ ತಾಲೂಕಿಗೆ ಸೇರಿದ ಕೊರಕೊಂಡದಲ್ಲಿ ನರಸಿಂಹಸ್ವಾಮಿಯ ದೇವಾಲಯವಿದೆ. ರೆಡ್ಡಿರಾಜರ ಕಾಲದಿಂದಲೂ ಕೊರಕೊಂಡದ ಪ್ರಭಾವವು ಅಧಿಕಗೊಂಡಿರುವುದು ತಿಳಿದುಬರುತ್ತದೆ. ಕೊರಕೊಂಡವು ಇವರ ರಾಜಧಾನಿಯಾಗಿಯೂ ಪ್ರಸಿದ್ಧ ಪಡೆದಿತ್ತು.

ಪ್ರತಾಪ ರುದ್ರದೇವನು ಕಾಕತೀಯ ವಂಶದ ಪ್ರಸಿದ್ಧನಾದ ರಾಜನಾಗಿದ್ದ. ಈತನು ಮಹಮ್ಮದೀಯರ ಮೇಲಿನ ಸಮರದಲ್ಲಿ ಸೋತು ಅವರ ಸೆರೆಯಾಳಾದಾಗ ರಾಜ್ಯವು ಅರಾಜಕವಾಯಿತು. ಇಂತಹ ಸಂದಿಗ್ಧವಾದ ಸಮಯದಲ್ಲಿ ಮಂಚಿಕೊಂಡ ಗೋತ್ರಕ್ಕೆ ಸೇರಿದವನಾದ ಗಣಪತಿ ನಾಯಕನೆಂಬ ವ್ಯಕ್ತಿಯು ಕೊರಕೊಂಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ ವಿಚಾರವನ್ನು ಇತಿಹಾಸದಿಂದ ತಿಳಿದುಬರುವಂತಿದೆ. ಈತನ ಕಾಲದಲ್ಲಿ ಕೊರಕೊಂಡದ ಧರ್ಮ-ಸಂಸ್ಕೃತಿಗಳು ಉತ್ತುಂಗಸ್ಥಿತಿಯನ್ನು ತಲುಪಿತು.

ಕೊರಕೊಂಡ ದೇವಾಲಯಕ್ಕೆ ಸಂಬಂಧಿಸಿದಂತೆ ಒಂದು ಪ್ರಸಿದ್ಧವಾದ ಕತೆಯಿದೆ. ಶೈವಮತಕ್ಕೆ ವಿಶೇಷ ಪ್ರಾತಿನಿಧ್ಯವಿದ್ದ ಕಾಲದಲ್ಲಿ ಮುಮ್ಮಡಿನಾಯಕನು ಶ್ರೀರಂಗದಲ್ಲಿದ್ದ ಶ್ರೀವೈಷ್ಣವ ಗುರುಗಳ ಶಿಷ್ಯನಾಗುತ್ತಾನೆ. ಪರಾಶರಭಟ್ಟರೆಂಬ ಶ್ರೀವೈಷ್ಣವ ಗುರುಗಳು ಶ್ರೀರಂಗದಿಂದ ಬಂದು ಮುಮ್ಮಡಿನಾಯಕರ ಕುಟುಂಬದವರಿಗೆ ವೈಷ್ಣವ ದೀಕ್ಷೆಯನ್ನು

ನೀಡುತ್ತಾರೆ. ಪರಾಶರಭಟ್ಟರು ತಮ್ಮ ಮರಣದ ಸಮಯದಲ್ಲಿ ಮುಮ್ಮಡಿ ನಾಯಕನನ್ನು ಕರೆದು ತಾವು ಸ್ವರ್ಗಸ್ಥರಾದ ನಂತರ ನರಸಿಂಹರೂಪದಲ್ಲಿ ಕೊರಕೊಂಡದ ಬೆಟ್ಟದ ಮೇಲೆ ನೆಲಸುವುದಾಗಿ ಹೇಳಿ ಪ್ರಾಣವನ್ನು ತ್ಯಜಿಸುತ್ತಾರೆ.

ಅನಂತರದ ಕಾಲದಲ್ಲಿ ಆ ಊರಿನ ಪ್ರಸಿದ್ಧ ದೇವದಾಸಿಯಾದ ಲಕ್ಷ್ಮಿಯ ಕನಸಿನಲ್ಲಿ ಪ್ರತ್ಯಕ್ಷರಾದ ಪರಾಶರಭಟ್ಟರು ತಾನು ಕೊರಕೊಂಡ ಬೆಟ್ಟದಲ್ಲಿ ನೆಲೆಸಿರುವುದಾಗಿ ಹೇಳುತ್ತಾರೆ. ದಾಸಿಯು ಈ ವಿಚಾರವನ್ನು ನಾಯಕರಿಗೆ ತಿಳಿಸುತ್ತಾಳೆ. ಅಂತರಂಗದವಳ ಮಾತೆಂದು ಉಪೇಕ್ಷೆ ಮಾಡದೆ ಅವಳ ಮಾತಿಗೆ ನಾಯಕರು ಮನ್ನಣೆ ನೀಡಿ ದೇವಾಲಯ ನಿರ್ಮಾಣಕ್ಕೆ ನೆರವಾಗುತ್ತಾರೆ. ನಮ್ಮ ನಾಡಿನಲ್ಲಿರುವ ಕೆಲವೊಂದು ದೇವಾಲಯಗಳು ಅರಸಿಯರ, ಅಂತರಂಗದ ದಾಸಿಯರ ಪ್ರೇರಣೆಯಿಂದಲೂ ನಿರ್ಮಾಣವಾಗಿರುವುದಕ್ಕೆ ಬೇಲೂರು, ಆಗ್ರಾ ಮೊದಲಾದ ಸ್ಥಳಗಳು ಪುರಾವೆಯನ್ನೊದಗಿಸುತ್ತವೆ.

ಲಕ್ಷ್ಮಿಯ ಕನಸಿನ ಕೂಸಾಗಿ ಕೊರಕೊಂಡದ ದೇವಾಲಯವು ಇಂದು ತನ್ನ ಹಿರಿಮೆಯನ್ನು ಗಳಿಸಿಕೊಂಡಿದೆ. ಇಲ್ಲಿನ ಬೆಟ್ಟವನ್ನು 'ಪರಾಶರಶೈಲ'ವೆಂದು ಕರೆಯುತ್ತಾರೆ. ಬೆಟ್ಟದ ಮೇಲಿರುವ ಆಲಯಕ್ಕೆ ಸುಮಾರು ಆರು ನೂರು ವರ್ಷಗಳ ಇತಿಹಾಸವಿದೆ. ಆಲಯದ ಮಂಟಪಗಳಲ್ಲಿ ರಾಮಾಯಣದ ಪ್ರಸಂಗಗಳನ್ನು ಕೆತ್ತಲಾಗಿರುತ್ತದೆ. ಫಾಲ್ಗುಣ ಶುದ್ಧ ಏಕಾದಶಿಯಂದು ಆರಂಭವಾಗುವ ರಥೋತ್ಸವದ ಕಾರ್ಯಕ್ರಮಗಳು ಐದುದಿನಗಳ ಕಾಲ ನೆರವೇರುತ್ತವೆ.

# ಗೊರವನಹಳ್ಳಿ

ಆಂಧ್ರಪ್ರದೇಶದ ಹಿಂದೂಪುರ ತಾಲೂಕಿಗೆ ಸೇರಿರುವ ಈ ಗ್ರಾಮವು ನರಸಿಂಹ ಆರಾಧನೆಯ ಸ್ಥಳವಾಗಿ ಪ್ರಭಾವವನ್ನು ಹೊಂದಿರುತ್ತದೆ. ಕರ್ನಾಟಕದ ಗೊರವನಹಳ್ಳಿಯು ಇಂದು ಮನೆಮಾತಾಗಿರುವುದಾದರೂ ಅಲ್ಲಿ ಲಕ್ಷ್ಮಿಗೆ ಪ್ರಾಧಾನ್ಯವಿರುವುದನ್ನು ನೆನಪಿನಲ್ಲಿಡ ಬೇಕಾದ ಅಂಶವಾಗಿದೆ. ಗೊರವನಹಳ್ಳಿಯ ನರಸಿಂಹನನ್ನು ಗ್ರಾಮ್ಯಭಾಷೆಯಲ್ಲಿ 'ಗುಂಡಪ್ಪ' ನೆಂದು ಕರೆಯಲಾಗುತ್ತದೆ.

ಇಲ್ಲಿ ಮೊದಲಿಗೆ ಗುಂಡಿನಾಕಾರದ ಪ್ರತಿಮೆಯನ್ನು ಪೂಜಿಸುತ್ತಿದ್ದು ಈಗ ಒಂದು ದಶಕದ ಹಿಂದೆ ಲಕ್ಷ್ಮೀನರಸಿಂಹನ ಮೂರ್ತಿಯನ್ನು ಪ್ರತಿಷ್ಠೆ ಮಾಡಿದ್ದಾರೆ. ಹಳೆಯ ಮಂಟಪದಂತಿದ್ದ ಆಲಯವನ್ನು ಕೆಡವಿ ನೂತನ ದೇವಾಲಯವನ್ನು ನಿರ್ಮಿಸಿದ್ದಾರೆ. ಅಗತ್ಯವಾದ ಮಂಟಪ, ಗರುಡಗಂಬಗಳನ್ನು ನಿಲ್ಲಿಸಿದ್ದಾರೆ. ಹಳೆಯ ಪ್ರತಿಮಾರೂಪವನ್ನು ಅದರ ಮೂಲಸ್ಥಿತಿಯಲ್ಲಿಯೇ ಕಾಪಾಡಿಕೊಂಡು ಬರಲಾಗಿದೆ. ಇಲ್ಲಿ ಸ್ಥಾಪಿಸಿರುವ ಮೂಲ ದೇವರ ಪ್ರಸಂಗವು ಕುತೂಹಲವಾದ್ದದ್ದಾಗಿದೆ.

'ದುಷ್ಟಜನಶಿಕ್ಷಕ ಶಿಷ್ಟರಕ್ಷಕ'ನಾದ ಶ್ರೀಮನ್ನಾರಾಯಣನು ಲೋಕಕಲ್ಯಾಣಾರ್ಥವಾಗಿ ಎತ್ತಿದ ಅವತಾರಗಳಲ್ಲಿ ನರಸಿಂಹಾವತಾರಕ್ಕೆ ನಾಲ್ಕನೆಯ ಸ್ಥಾನವು ಲಭಿಸಿದೆ. ಇದೊಂದು ಸ್ವಾರಸ್ಯಕರವಾದ ಅವತಾರವಾಗಿದೆ. ಇಂತಹ ನರಸಿಂಹ ರೂಪಾದಿಗಳಿಗೆ ಪೂಜಾರ್ಚನೆಗಳಿಗಾಗಿ ಅನೇಕ ನೆಲೆಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ ಪ್ರಸಿದ್ಧವಾದದ್ದು ಅಹೋಬಿಲ. ಅಹೋಬಿಲ ನರಸಿಂಹನ ಸನ್ನಿಧಿಗೆ ಆರಾಧನೆಗಾಗಿ ಪೂರ್ವಕಾಲದಿಂದಲೂ ಅಸಂಖ್ಯಾತ ಕುಟುಂಬಗಳು ಹೋಗಿಬರುತ್ತಿದ್ದರು. ಆಗಿನ ಕಾಲದಲ್ಲಿ ವಾಹನ ಸೌಕರ್ಯವಿರಲಿಲ್ಲ. ಹೀಗಾಗಿ ಕಾಲುನಡಿಗೆ ಅಥವಾ ಎತ್ತಿನ ಗಾಡಿಗಳಲ್ಲಿ ಹೋಗಿಬರಬೇಕಾಗುತ್ತಿತ್ತು. ದಾರಿಯಲ್ಲಿ ಕಳ್ಳಕಾಕರಿಗೂ ಕೊರತೆಯಿರಲಿಲ್ಲ. ಪ್ರಯಾಣಿಕರು ಗುಂಪು ಗುಂಪಾಗಿ ಸಾಗಿಹೋಗುತ್ತಿದ್ದರು. ಸಾಧ್ಯವಾದಷ್ಟು ದೂರ ನಡೆದು ಕತ್ತಲಾಗುತ್ತಿದ್ದ ಹಾಗೆ ತಮ್ಮನ್ನು ದುಷ್ಟಪ್ರಾಣಿಗಳಿಂದ, ದುಷ್ಟಜಂತುಗಳಿಂದ ರಕ್ಷಿಸಿಕೊಳ್ಳಲು ಅನುಕೂಲವಾದೆಡೆ ತಂಗುತ್ತಿದ್ದರು.

ಭಕ್ತಕುಟುಂಬವೊಂದು ಒಮ್ಮೆ ತಮ್ಮ ಹರಕೆಯನ್ನು ಸಲ್ಲಿಸಿ ಬರುವ ಸಲುವಾಗಿ ಅಹೋಬಿಲಕ್ಕೆ ಹೋಗುತ್ತಾರೆ. ಅವರು ಹರಕೆಯನ್ನು ತೀರಿಸಿಕೊಂಡು ತಮ್ಮ ಸ್ವಗ್ರಾಮಕ್ಕೆ ಮರಳಿ ಬರುತ್ತಿರುತ್ತಾರೆ. ಕತ್ತಲಾದ ಕಾರಣ ಅನುಕೂಲಕರವಾದ ಜಾಗದಲ್ಲಿ ಬೀಡು ಬಿಟ್ಟಿರುತ್ತಾರೆ. ರಾತ್ರಿಯ ಊಟಕ್ಕೆ ಭೋಜನ ಸಿದ್ಧಪಡಿಸಬೇಕಾದ ಕಾರಣದಿಂದ ಕುಟುಂಬದ ಯಜಮಾನಿ ಪದಾರ್ಥಗಳ ಗಂಟನ್ನು ಬಿಚ್ಚುತ್ತಾಳೆ. ಅಕ್ಕಿಯ ಚೀಲವನ್ನು ಬಿಚ್ಚಿ ನೋಡಿದಾಗ ಆಕೆಗೆ ಆಶ್ಚರ್ಯವೊಂದು ಕಾದಿರುತ್ತದೆ. ನುಣುಪಾದ ಕರಿಯ ಕಲ್ಲುಗುಂಡೊಂದು ಹಸುಬೆಯ ಚೀಲದಲ್ಲಿ ಸೇರಿಕೊಂಡಿರುತ್ತದೆ ತಾನು ಚೀಲಗಳನ್ನು ಕಟ್ಟತೊಡಗಿದಾಗ ಇದನ್ನು ಮರೆತು ತಂದಿರಬೇಕೆಂದು ಅದನ್ನು ತೆಗೆದು ಹೊರಹಾಕಿ ಅಡುಗೆ ಮುಗಿಸಿ ಊಟಮಾಡಿ ವಿಶ್ರಾಂತಿ ಪಡೆದು ಮಾರನೆಯ ದಿನ ಬೆಳಗ್ಗೆ ಪ್ರಯಾಣ ಮುಂದುವರೆಸುತ್ತಾರೆ.

ಅಕ್ಕಿಚೀಲವನ್ನು ಮರುದಿನ ಬಿಚ್ಚಿನೋಡಲಾಗಿ ಅಲ್ಲಿಮತ್ತೊಮ್ಮೆ ಅದೇ ಕರಿಯಕಲ್ಲು ಪ್ರತ್ಯಕ್ಷವಾಗಿರುತ್ತದೆ. ಇದು ಹುಡುಗರ ಕೀಟಲೆಯಾಗಿರಬಹುದೆಂದು ಭಾವಿಸಿದ ಆಕೆ ಮತ್ತೊಮ್ಮೆ ಅದನ್ನು ಬಿಸಾಕಿಬಿಡುತ್ತಾಳೆ. ಮೂರನೆಯ ದಿನವೂ ಆ ಸಾಲಿಗ್ರಾಮ ಕಲ್ಲು ಪ್ರತ್ಯಕ್ಷವಾದಾಗ ಆಕೆ ದಾರಿಗಾಣದೆ ಕುಟುಂಬದ ಯಜಮಾನರಿಗೆ ವಿಷಯವನ್ನು ತಿಳಿಸುತ್ತಾಳೆ. ಯಜಮಾನನು ಅದನ್ನು ತುಂಬ ತೀಕ್ಷ್ಣವಾಗಿ ಗಮನಿಸುತ್ತಾನೆ. ಅದೊಂದು ಭಗವಂತನ ರೂಪದ ಹಾಗೆ ಕಣ್ಣು-ಬಾಯಿಗಳ ರೂಪದಳೆದು ಗೋಚರವಾಗುತ್ತದೆ. ಜೊತೆಗೆ ನಾಮದ ಅಸ್ಪಷ್ಟ ಚಿಹ್ನೆ. ಆತನಿಗೆ ಇದೇನೋ ಪರೀಕ್ಷೆಯೆಂದು ಅನ್ನಿಸಿತೇ ಹೊರತು ಬೇರೆ ತೋಚಲಿಲ್ಲ.

ಇದು ಹೀಗಿರಬೇಕಾದರೆ ಅಂದಿನ ರಾತ್ರಿ ಕುಟುಂಬದ ಯಜಮಾನನ ಕನಸಿನಲ್ಲಿ ನರಸಿಂಹ ಸ್ವಾಮಿಯು ವೃದ್ಧ ಬ್ರಾಹ್ಮಣನ ವೇಷದಲ್ಲಿ ಕಾಣಿಸಿಕೊಳ್ಳುತ್ತಾನೆ. ತಾನು ಅವರನ್ನೇ ಗುಂಡುಕಲ್ಲಿನ ರೂಪದಲ್ಲಿ ಅನುಸರಿಸುತ್ತಿರುವ 'ಅಹೋಬಿಲ ನರಸಿಂಹ'ನೆಂದು ಹೇಳುತ್ತಾನೆ. ಅವರು ತನ್ನ ದರುಶನದ ಸಲುವಾಗಿ ಶ್ರಮಪಟ್ಟು ಬೆಟ್ಟವನ್ನೇರಿ ಬರುವುದು

ಅಗತ್ಯವಿಲ್ಲವೆಂದೂ, ತಾನಿರುವ ಸ್ಥಳದಲ್ಲಿಯೇ ತನಗೆ ಆಲಯವೊಂದನ್ನು ನಿರ್ಮಿಸಿ ಅಲ್ಲಿಯೇ ಪೂಜಾದಿಗಳಿಗೆ ವ್ಯವಸ್ಥೆ ಮಾಡಲು ಮುಂದಾಗಬೇಕೆಂದೂ ಆಣತಿಯನ್ನು ನೀಡುತ್ತಾನೆ.

ಮರುದಿನ ಮುಂಜಾನೆ ಆ ಗುಂಪಿನ ಯಜಮಾನರು ತಾವು ಹಿಂದಿನ ರಾತ್ರಿ ಬಿಡಾರ ಹೂಡಿದ್ದ ಗ್ರಾಮದ ಮುಖಂಡನಿಗೆ ಕರೆಕಳುಹಿಸಿ ಆತನಲ್ಲಿ ಎಲ್ಲವನ್ನು ನಿವೇದಿಸುತ್ತಾರೆ. ಅವರೂ ಸಹ ಇದರಿಂದ ಚಕಿತಗೊಂಡು ಅಹೋಬಲ ನರಸಿಂಹನೇ ಗುಂಡಿನರೂಪದಲ್ಲಿದ್ದಾನೆಂದು ಭಾವಿಸಿಕೊಳ್ಳುತ್ತಾರೆ. ಆತನು ಇಲ್ಲಿ ಪ್ರತ್ಯಕ್ಷನಾಗಿರುವುದು ತಮ್ಮ ಭಾಗ್ಯವೆಂದು ಭಾವಿಸುತ್ತಾರೆ. ಕೂಡಲೆ ಗ್ರಾಮಸ್ಥರೆಲ್ಲರೂ ಆ ಸ್ಥಳದಲ್ಲಿ ಆಲಯವನ್ನು ನಿರ್ಮಾಣ ಮಾಡುವ ನಿರ್ಧಾರವನ್ನು ತೆಗೆದುಕೊಳ್ಳುತ್ತಾರೆ. ಅಲ್ಲಿ ಅವರೆಲ್ಲರ ಸಂಕಲ್ಪ ಮತ್ತು ಕಾರ್ಯತತ್ಪರತೆಗಳಿಂದ ಚಿಕ್ಕಮಂಟಪವೊಂದು ನಿರ್ಮಾಣವಾಗುತ್ತದೆ. ಇತ್ತೀಚಿನವರೆಗೆ ಇದೇ ಮಂಟಪವೇ ಇಲ್ಲಿ ಅಸ್ತಿತ್ವದಲ್ಲಿದ್ದದ್ದೆಂದು ಹೇಳಬಹುದಾಗಿದೆ. ಇದು ನಡೆದು ಸುಮಾರು ಎರಡು ನೂರು ವರ್ಷಗಳೇ ಆಗಿದ್ದಿರಬಹುದು.

ನರಸಿಂಹನಿಗಾಗಿ ಕಟ್ಟಿದ ಮಂಟಪವು ತೀರ ಇತ್ತೀಚಿನವರೆಗೆ ಎಂದರೆ ಸುಮಾರು ಮೂವತ್ತು-ನಲವತ್ತು ವರ್ಷಗಳವರೆಗೆ ದುಸ್ಥಿತಿಯಲ್ಲಿದ್ದದ್ದು ಕ್ರಮೇಣ ಶಿಥಿಲವಾಗುತ್ತ ಬಂದಿತು. ಅದನ್ನು ತೆಗೆದು ಅದೇ ಸ್ಥಳದಲ್ಲಿ ಮತ್ತೊಂದು ಆಲಯ ನಿರ್ಮಾಣಮಾಡುವ ವಿಚಾರವನ್ನು 'ದೇವಾಲಯ ಜೀರ್ಣೋದ್ಧಾರ ಸಮಿತಿ'ಯವರು ಕೈಗೆತ್ತಿಕೊಂಡರು. ಅದರ ಫಲವೇ ಇಂದು ಇಲ್ಲಿ ಕಂಡುಬರುತ್ತಿರುವ ದೇವಸ್ಥಾನ.

ಈ ದೇವಾಲಯದಲ್ಲಿ ಒಂದು ಹಳೆಯ ಸರ್ಪವು ಸೇರಿಕೊಂಡಿದ್ದಿತೆಂದೂ, ಅದೂ ಸಹ ಸ್ವಾಮಿಯ ಸೇವೆಯಲ್ಲಿ ಭಾಗಿಯಾಗಿತ್ತೆಂದು ಹೇಳುವವರಿದ್ದಾರೆ. ಆದರೆ ಇದರಿಂದ ನರಸಿಂಹಸ್ವಾಮಿಯ ಪೂಜೆಗಾಗಿ ಬರುವ ಭಕ್ತರಿಗೆ ಯಾವ ಅಪಾಯವೂ ಇರಲಿಲ್ಲ. ಆದರೆ ಕೆಲವು ವರ್ಷಗಳ ಹಿಂದೆ ಹಳೆಯ ಮಂಟಪವನ್ನು ತೆಗೆದು ಹೊಸ ದೇವಾಲಯ ನಿರ್ಮಾಣವಾದ ನಂತರ ಅದನ್ನು ಯಾರೂ ಕಂಡವರಿಲ್ಲವೆಂದು ಹೇಳಲಾಗುತ್ತಿದೆ.

ಈ ದೇವಾಲಯದ ಅಭಿವೃದ್ಧಿಗೆ ತಿರುಪತಿ-ತಿರುಮಲೆ ದೇವಸ್ಥಾನಗಳ ಸಮಿತಿಯವರು ಆರ್ಥಿಕ ನೆರವು ನೀಡಿ ಸಹಕರಿಸಿದ್ದಾರೆ. ಹೀಗಾಗಿಯೇ ಒಂದು ಪುಟ್ಟ ಹಳ್ಳಿಯಲ್ಲಿ ಇಂದು ಚೊಕ್ಕವಾದ ಸುಂದರ ದೇವಸ್ಥಾನವನ್ನು ಕಾಣಲು ಸಾಧ್ಯವಾಗಿದೆ. ಆದರೆ ಇಲ್ಲಿ ಪೂಜಾದಿಗಳಿಗೆ ಸರಿಯಾದ ವ್ಯವಸ್ಥೆಯಿಲ್ಲದಿರುವುದು ಭಕ್ತಾದಿಗಳ ಪಾಲಿಗೆ ದೊಡ್ಡ ಕೊರತೆಯಾಗಿ ಎದ್ದು ಕಾಣುತ್ತಿದೆ. ಮುಂಬರುವ ದಿನಗಳಲ್ಲಿಯಾದರೂ ದೇವಾಲಯದ ಉತ್ತರೋತ್ತರ ಅಭಿವೃದ್ಧಿಯಾಗಿ ಇದಕ್ಕೊಂದು ದಿವ್ಯವಾದ ಸ್ಥಾನವು ದೊರೆಯುವಂತಾದರೆ ಸಾರ್ಥಕವಾದೀತು.

# ಧರ್ಮಪುರ

ಭೂಷಣ ವಿಕಾಸ ಶ್ರೀ ಧರ್ಮಪುರ ನಿವಾಸ
ದುಷ್ಟ ಸಂಹಾರ ನರಸಿಂಹ ದುರಿತಾದೂರ

- ಈ ಎರಡು ಸಾಲುಗಳನ್ನು ತೆಲುಗು ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಗಳಿಸಿರುವ ಶತಕದಿಂದ ಆರಿಸಿಕೊಳ್ಳಲಾಗಿದೆ. ಇದನ್ನು ರಚಿಸಿದ ಕವಿ ಶೇಷಪ್ಪ, ಧರ್ಮಪುರಕ್ಕೆ ಸೇರಿದವನಾದ ಈತನು ಅಲ್ಲಿನ ನರಸಿಂಹ ದೇವಾಲಯವನ್ನೆ ತನ್ನ ವಾಸಸ್ಥಳವನ್ನಾಗಿ ಮಾಡಿಕೊಂಡಿದ್ದ, ಅಧ್ಯಾತ್ಮದ ಹಾದಿಯನ್ನು ಅಪೇಕ್ಷಿಸುವವರಿಗೆ ಸುಂದರವಾದ ಪದ್ಯಗಳ ಮೂಲಕ ಬೋಧನೆ ಮಾಡಿದ ಕವಿಯೊಬ್ಬನಿಂದ ಪ್ರಖ್ಯಾತಗೊಂಡ ಕ್ಷೇತ್ರವಾಗಿ, ಭಕ್ತರ ಆರಾಧನೆಯ ಸ್ಥಳವಾಗಿ ಆಂಧ್ರಪ್ರದೇಶದ ಕರೀಂ ನಗರ ಜಿಲ್ಲೆಗೆ ಸೇರಿದ ಧರ್ಮಪುರದಲ್ಲಿ ನಾವಿಂದು ನರಸಿಂಹನ ನೆಲೆಯನ್ನು ಕಾಣಬಹುದು.

ಧರ್ಮಪುರಕ್ಕೆ ಪ್ರಾಚೀನ ಗ್ರಾಮವೆಂಬ ಹೆಗ್ಗಳಿಕೆಯಿದೆ. ಸಾಕಷ್ಟು ಬೆಳೆದಿದೆ. ಇಲ್ಲಿ ಹಿಂದಿನಿಂದಲೂ ಸಂಸ್ಕೃತಿ ವಿದ್ಯಾಭ್ಯಾಸಕ್ಕೆ ಮನ್ನಣೆಯಿದ್ದದ್ದು ತಿಳಿದುಬರುತ್ತದೆ. ಸಂಸ್ಕೃತ ಸಾಹಿತ್ಯ-ಸಂಸ್ಕೃತಿಗಳಲ್ಲಿ ಮಹಿಮಾವಂತರಂತೆ ಕಾಣುವ ಪಂಡಿತರು ಇಲ್ಲಿ ವಾಸಿಸುತ್ತಾರೆ. ಆದ್ದರಿಂದಲೇ ಇದು ಧರ್ಮಪುರವೆಂದು ಹೆಸರು ಪಡೆದಿದೆಯೆಂದು ಆಲೋಚಿಸಿದರೆ ತಪ್ಪೇನಿಲ್ಲ. ನಮ್ಮ ಸ್ಥಳ ವಾಚಕಗಳು ಅಲ್ಲಿನ ವಿಶೇಷತೆಗಳನ್ನು ಸಹ ಪ್ರತಿಬಿಂಬಿಸುತ್ತಿರುವುದು ಅಧ್ಯಯನಗಳಿಂದಲೂ ಶ್ರುತಪಡುವಂತಿದೆ.

ನರಸಿಂಹದೇವಾಲಯವು ಊರಿನ ಆಕರ್ಷಣೀಯ ಕೇಂದ್ರಬಿಂದುವಾಗಿದೆ. ಇದರ ಉಲ್ಲೇಖ ಬ್ರಹ್ಮಾಂಡಪುರಾಣದಲ್ಲಿರುವುದು. 'ಧರ್ಮಪುರ ಕ್ಷೇತ್ರ ಮಹಾತ್ಮೆ'ಯೆಂಬ ಆಕರವೊಂದು ಇಲ್ಲಿನ ವಿಶಿಷ್ಟಸಂಗತಿಗಳನ್ನು ತಿಳಿಸುವ ಸಾಧನವೂ ಆಗಿದೆ. ನರಸಿಂಹನ ಉಗ್ರಸ್ವರೂಪವು ಉಪಸಂಹಾರವಾದ ಪ್ರಸಂಗಕ್ಕೆ ಸಂಬಂಧ ಪಟ್ಟ ಅನೇಕ ವಿಚಾರಗಳನ್ನು ಪುರಾಣೋಕ್ತವಾಗಿಸಲಾಗಿದೆ. ಇದರ ಹಿನ್ನೆಲೆಯಲ್ಲಿಯೇ ಧರ್ಮಪುರದ ಸ್ವಾಮಿಯ ಪ್ರಭಾವ ಪ್ರಸಿದ್ಧಿಗಳನ್ನು ಪರಿಶೀಲಿಸಬಹುದಾಗಿದೆ. ಈ ಕ್ಷೇತ್ರದ ಪ್ರಭಾವಿತನಾದ ವ್ಯಕ್ತಿಯ ತಪೋ ಮಹಿಮೆಗೆ ಮೆಚ್ಚಿದ ನರಸಿಂಹನು ಶಾಂತನೂ, ಯೋಗರೂಪ ಧರಿಸಿದವನೂ ಆಗಿ ಕಾಣಿಸಿಕೊಂಡದ್ದು ಇಲ್ಲಿ ಮುಖ್ಯವಾಗುತ್ತದೆ.

ಆಸೀನಭಂಗಿಯಲ್ಲಿರುವ ದೇವರು ಯೋಗಾಸನ ಮೂರ್ತಿಯಾಗಿ ಕಂಗೊಳಿಸುತ್ತಿದ್ದಾನೆ. ಭಕ್ತಜನರಿಗೆ ಧರ್ಮಬೋಧನೆ ಮಾಡುವಂತೆ ಕಂಡುಬರುತ್ತದೆ ಈ ಆಲಯದಲ್ಲಿ ಕೃಷ್ಣ, ಬಲರಾಮ ಮುಂತಾದ ಇನ್ನಿತರ ಮೂರ್ತಿಗಳಿವೆ. ಫಾಲ್ಗುಣ ಮಾಸದಲ್ಲಿ ಇಲ್ಲಿ ನೆರವೇರುವ ಕಲ್ಯಾಣೋತ್ಸವದಂತಹ ಪ್ರತಿಷ್ಠಿತ ಮತ್ತು ವೈಭವ ಉತ್ಸವವನ್ನು ನೋಡಲು

ಸಾವಿರಾರು ಯಾತ್ರಿಕರು ಆಗಮಿಸುತ್ತಾರೆ. ದೈವ ಸಾಕ್ಷಾತ್ಕಾರವನ್ನು ಕರುಣಿಸಿ ಸಾಂಸ್ಕೃತಿಕ ಪರಂಪರೆಯ ಪ್ರಾತಿನಿಧಿಕ ಕ್ಷೇತ್ರವಾಗಿ ಧರ್ಮಪುರಕ್ಕೆ ಗಮನಾರ್ಹ ಸ್ಥಾನವಿರುವುದನ್ನು ಮನಗಾಣಬಹುದು.

## ಆದವಾನಿ

ಆಂಧ್ರಪ್ರದೇಶದಲ್ಲಿನ ಸುಪ್ರಸಿದ್ಧ ಯಾತ್ರಾಸ್ಥಳವಾದ ಮಂತ್ರಾಲಯಕ್ಕೆ ಹೋಗುವ ಮಾರ್ಗದಲ್ಲಿ ಆದವಾನಿ ಇರುತ್ತದೆ. ಕರ್ನಾಟಕ ರಾಜ್ಯಕ್ಕೆ ಹೊಂದಿಕೊಂಡಂತೆ ಇರುವ ಇದು ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಗೇ ಸೇರಿತ್ತು, ಈಗಲೂ ಸಹ ಆದವಾನಿಗೆ ಹೋದವರಿಗೆ ಕರ್ನಾಟಕದಲ್ಲಿಯೇ ಇರುವೆವೇನೋ ಎಂಬಂತೆ ಭಾಸವಾಗುವುದರಲ್ಲಿ ಎರಡು ಮಾತಿಲ್ಲ.

ಆದವಾನಿಯಲ್ಲಿರುವ ಒಂದೇ ದೇವಾಲಯದ ಪ್ರಾಕಾರದಲ್ಲಿ ಈಶ್ವರ ದೇವರು, ರಾಮದೇವರು, ಕೇಶವ-ಹನುಮಂತ ದೇವರಿದ್ದಾರೆ. ಶ್ರೀನರಸಿಂಹ ದೇವರನ್ನೂ ಹೊಂದಿರುವ ಈ ಆಲಯ ಪ್ರಾಂಗಣವನ್ನು ಗಮನಿಸಿದವರಿಗೆ ಇದರದ್ದೊಂದು ಮಹತ್ತ್ವವು ಅರಿವಾಗುವುದು. ಶ್ರೀನರಸಿಂಹನ ವಿಗ್ರಹವು ಸುಮಾರು ಒಂದೂವರೆ ಅಡಿಯಷ್ಟು ಎತ್ತರವಾಗಿರುವುದು. ಇದು ಕೋಟೆಯ ಪ್ರದೇಶದಲ್ಲಿತ್ತೆಂದೂ, ಅದು ಹಾಳಾದಾಗ ಮೂರ್ತಿಯನ್ನು ಜೋಪಾನವಾಗಿ ತಂದು ಈಗಿನ ಗುಡಿಯಲ್ಲಿ ಪ್ರತಿಷ್ಠೆ ಮಾಡಲಾಯಿತೆಂದೂ ಹೇಳುತ್ತಾರೆ.

## ತಾಡಪತ್ರಿ

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿರುವ ತಾಡಪತ್ರಿಯು ಪಿನಾಕಿನಿ ನದಿ ತೀರದಲ್ಲಿದೆ. ಇಲ್ಲಿ ಚಿಂತಲ ವೆಂಕಟರಮಣಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಇರುವ ರಂಗಮಂಟಪದ ಮಧ್ಯರಂಗದಲ್ಲಿ ಅನೇಕ ಶಿಲ್ಪಗಳಿವೆ. ಇವು ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದೆ. ದಶರಥ ರಾಜನ ಪುತ್ರಕಾಮೇಷ್ಟಿಯಾಗ, ಗೀತೋಪದೇಶ, ಕೃಷ್ಣಲೀಲೆಗಳು, ರಾಮ-ಸೀತೆಯರ ವಿವಾಹ ಮುಂತಾದ ಆಕರ್ಷಕ ಶಿಲ್ಪಗಳು ಇಲ್ಲಿವೆ.

ಶ್ರೀನರಸಿಂಹದೇವರ ವೈಶಿಷ್ಟ್ಯಪೂರ್ಣವಾದ ಶಿಲ್ಪವೊಂದು ತಾಡಪತ್ರಿಯಲ್ಲಿದೆ. ಸಾಮಾನ್ಯವಾಗಿ ಯೋಗಾನರಸಿಂಹನನ್ನೋ ಅಥವಾ ಶ್ರೀಲಕ್ಷ್ಮೀ ನರಸಿಂಹನನ್ನೋ ಇಲ್ಲವೇ ಹಿರಣ್ಯಕಶಿಪುವನ್ನು ಸೀಳುತ್ತಿರುವ ಉಗ್ರನರಸಿಂಹನನ್ನೋ ನಾವು ಶಿಲ್ಪಗಳಲ್ಲಿ ಗಮನಿಸುತ್ತೇವೆ. ಆದರೆ ಹಿರಣ್ಯಕಶಿಪುವಿನೊಂದಿಗೆ ಕುಸ್ತಿ ಮಾಡುವಂತಿರುವ ಬೆರಳೆಣಿಕೆಯಷ್ಟು ಶಿಲ್ಪಗಳಿದ್ದು ತಾಡಪತ್ರಿಯದು ಈ ವರ್ಗಕ್ಕೆ ಸೇರಿದ್ದು ಅಚ್ಚರಿಯನ್ನುಂಟು ಮಾಡುವುದಾಗಿದೆ. ಈ ದೇವಸ್ಥಾನವನ್ನು ವಾಸ್ತುಶಿಲ್ಪದ ದೃಷ್ಟಿಯಿಂದ ವಿಜಯನಗರದ ಅರಸರ ಕಾಲಕ್ಕೆ ಸೇರಿಸಬಹುದಾಗಿದೆ.

# ಕರ್ನಾಟಕದ ನರಸಿಂಹ ದೇವಾಲಯಗಳು

## ಬೆಂಗಳೂರು ಜಿಲ್ಲೆ

### ಘಾಟಿ ಸುಬ್ರಹ್ಮಣ್ಯ



ಘಾಟಿ ಸುಬ್ರಹ್ಮಣ್ಯ ಸ್ವಾಮಿಯ ಮೂಲ ದೇವರು

ಅನಂತನೆಂದರೆ ಆದಿಶೇಷನೆಂದೂ, ವಿಷ್ಣುವೆಂದೂ ಅರ್ಥಗಳಿವೆ. ಅನಂತ ಚತುರ್ದಶಿಯನ್ನು ತುಂಬ ನೇಮ-ನಿಷ್ಠೆಗಳಿಂದ ಆಚರಿಸಲಾಗುತ್ತದೆ. ಸುಬ್ರಹ್ಮಣ್ಯನೆಂಬುದೂ ಸಹ ವಿಷ್ಣುವಿಗೆ ಶಯನಸಂತಿರುವ ಶೇಷನಿಗಿರುವ ಹೆಸರೆಂದೇ ಹೇಳಬಹುದು. ಆಯಾ ಕ್ಷೇತ್ರಗಳಲ್ಲಿ ಆರಾಧನೆಗೊಳ್ಳುತ್ತಿರುವ ಈ ಸ್ವಾಮಿಯ ಹೆಸರನ್ನೆ ಸ್ಥಳವಾಚಕಗಳಾಗಿ ಗಮನಿಸಬಹುದಾಗಿರುತ್ತದೆ. ಕುಕ್ಕೆ ಸುಬ್ರಹ್ಮಣ್ಯ, ಘಾಟಿ ಸುಬ್ರಹ್ಮಣ್ಯ ಮೊದಲಾದ ಸ್ಥಳಗಳನ್ನು ಶುಚಿತ್ವಕ್ಕೆ ಮೀಸಲಾದ ಯಾತ್ರಾಸ್ಥಳಗಳೆಂದು ಹೇಳಬಹುದು. ಸುಬ್ರಹ್ಮಣ್ಯ ನರಸಿಂಹರ ಆರಾಧನೆಗೆ ಹೆಸರುವಾಸಿಯಾಗಿ ಕ್ಷೇತ್ರ ಮಹಾತ್ಮೆಯಿಂದ ಪ್ರಸಿದ್ಧಿಗೊಂಡಿರುವ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲೂಕಿನ ಘಾಟಿ ಸುಬ್ರಹ್ಮಣ್ಯವನ್ನು ಸಂದರ್ಶಿಸಬಹುದು.

ಭೂಮಟ್ಟದಿಂದ ತುಸು ಎತ್ತರವಾದ ಜಾಗದಲ್ಲಿ, ಸ್ವಲ್ಪಮಟ್ಟಿಗೆ ಕಡಿದಾದ ಪ್ರದೇಶದಲ್ಲಿ ಘಟ್ಟಪ್ರದೇಶದಿಂದ ಕೂಡಿರುವುದಾಗಿ ಇದಕ್ಕೆ 'ಘಾಟಿ'ಯೆಂಬ ಸ್ಥಳನಾಮವು ಸಲ್ಲುತ್ತಿದೆ. ದೂಗನಹಳ್ಳಿ ಎಂಬ ಊರಿಗೆ ಹೊಂದಿಕೊಂಡಂತಿರುವ ಈ ಪುಣ್ಯಸ್ಥಳಕ್ಕೆ ರಸ್ತೆ, ಸಾರಿಗೆ ಸೌಕರ್ಯಗಳನ್ನು ಕಲ್ಪಿಸಲಾಗಿದೆ. ರಮಣೀಯ ಪರಿಸರದಿಂದಲೂ ಕೂಡಿದ್ದು ಪ್ರವಾಸಿ ಕ್ಷೇತ್ರವಾಗಿ ಹೆಸರು ಪಡೆದಿದೆ. ಷಷ್ಠಿ ದಿನಗಳಲ್ಲಿ ಇಲ್ಲಿಗೆ ಬರುವ ಯಾತ್ರಿಕರ ಸಂಖ್ಯೆ ಗಣನೀಯ ಪ್ರಮಾಣದಲ್ಲಿರುತ್ತದೆ.

## ಹುತ್ತದಿಂದ ಮೂರ್ತಿ

ಸುಬ್ರಹ್ಮಣ್ಯ ಎಂಬ ಹೆಸರೇ ಸೂಚಿಸುವ ಹಾಗೆ ಇಲ್ಲಿನ ಪ್ರಮುಖ ದೇವರು ಆದಿಶೇಷನಾಗಿದ್ದಾನೆ. ವಾಸುಕಿಯೆಂಬ ಹೆಸರಿನಿಂದ ಪ್ರಖ್ಯಾತನಾದ ಅನಂತನು ಈ ಸ್ಥಳದಲ್ಲಿ ತಪಸ್ಸು ಮಾಡಿದನೆಂದು ಪುರಾಣವು ತಿಳಿಸುತ್ತದೆ: ವಾಸುಕಿಯ ಪ್ರಸ್ತಾಪವು 'ಕ್ಷೀರಸಾಗರ ಮಂಥನ'ದ ಸಂದರ್ಭದಲ್ಲಿ ಪ್ರಚಲಿತವಾಗಿದೆ. ಹುತ್ತದ ರೂಪದಲ್ಲಿ ದೇವರನ್ನು ಪೂಜಿಸುತ್ತಿದ್ದು ಆಧುನಿಕವಾದ ಇಂದಿನ ಕಾಲದಲ್ಲಿ ದೇವತಾಮೂರ್ತಿಯನ್ನಾಗಿ ಪರಿವರ್ತನೆ ಮಾಡಲಾಗಿದೆ. ಸುಂದರವಾದ ಗೋಪುರದಿಂದ ಮಹಾದ್ವಾರ, ಪ್ರದಕ್ಷಿಣಾಪಥ, ಮುಖಮಂಟಪಗಳನ್ನು ನಿರ್ಮಿಸಿ ಆಲಯವನ್ನು ವಿಸ್ತರಿಸಲಾಗಿದೆ. ವರ್ಣಮಯವಾದ ಚಿತ್ರಗಳ ಮೂಲಕ ಪುರಾಣ ಪ್ರಸಂಗಗಳನ್ನು ವಿವರಿಸಲಾಗಿದೆ.

ಗರ್ಭಗೃಹದಲ್ಲಿನ ದೇವತಾಮೂರ್ತಿಯು ಮುಂಭಾಗದಿಂದ ನೋಡಿದಾಗ ಸುಬ್ರಹ್ಮಣ್ಯ ಸ್ವಾಮಿಯ ಆಕಾರದಲ್ಲಿ ಮತ್ತು ಹಿಂಭಾಗವು ನರಸಿಂಹರೂಪಿಯಾಗಿ ಕಂಡು ಬರುವುದೊಂದು ಇಲ್ಲಿನ ವಿಶೇಷ. ನಾಗರಾಜನಿಗೆ ಗರುಡನಿಂದ ಉಂಟಾಗಬಹುದಾದ ಅಪಾಯವನ್ನು ನರಸಿಂಹಸ್ವಾಮಿಯು ಸದಾ ನೆರಳಾಗಿದ್ದು ಈ ರೀತಿಯಲ್ಲಿ ಸಲುಹುತ್ತಿರುವನೆಂಬ ನಂಬಿಕೆ ಇದರಿಂದ ಬಲಗೊಳ್ಳಬಹುದಾಗಿದೆ. ತನ್ನ ಭಕ್ತನಾದ ಪ್ರಹ್ಲಾದನನ್ನು ನಾಗಪಾಶಗಳಿಂದ ಕಟ್ಟಿ ಸಮುದ್ರಕ್ಕೆ ಎಸೆದಿರಲು ಶ್ರೀಹರಿಯು ಅವನನ್ನು ಅದರಿಂದ ಮುಕ್ತಗೊಳಿಸಲು ತನ್ನ ವಾಹನನಾದ ಗರುಡನಿಗೆ ಅಪ್ಪಣೆ ಮಾಡಿದ ಪ್ರಸಂಗವನ್ನು ಪುರಾಣಗಳಲ್ಲಿ ನಾವು

ನೋಡಿರುತ್ತೇವೆ. ಆದರೆ ಅದೇ ವಿಷ್ಣುವಿನ ಅವತಾರ ಸ್ವರೂಪನಾದ ನರಸಿಂಹನು 'ಸುಬ್ರಹ್ಮಣ್ಯ'ನ ರಕ್ಷಕನಾಗಿ ಇಲ್ಲಿ ನೆಲೆಸಿರುವುದು ಕಾಲದ ಅನಂತಮಹಿಮೆಯಿಂದಲ್ಲದೆ ಬೇರೇನೂ ಅಲ್ಲವೆಂಬುದು ನಿಸ್ಸಂದೇಹವಾದ ಸಂಗತಿ. ಸುಬ್ರಹ್ಮಣ್ಯ ಷಷ್ಠಿಯ ದಿನದಂದು ಇಲ್ಲಿ ರಥೋತ್ಸವವು ನಡೆಯುತ್ತದೆ. ಅಸಂಖ್ಯಾತ ಜನರಿಂದ ದೇವರ ಆರಾಧನೆ ಮತ್ತು ವಿಶೇಷ ಉತ್ಸವಗಳು ನೆರವೇರುತ್ತವೆ. ಈ ಸಂದರ್ಭದಲ್ಲಿ ಇಡೀ ಘಾಟಿ ಸುಬ್ರಹ್ಮಣ್ಯ ಕ್ಷೇತ್ರ ಕಂಗೊಳಿಸುತ್ತಿರುತ್ತದೆ.

# ಸಾವನದುರ್ಗ

ಬೆಂಗಳೂರು ಜಿಲ್ಲೆಯ ಮಾಗಡಿಗೆ ಎಂಟು ಕಿ.ಮೀ. ದೂರದಲ್ಲಿರುವ ಸಾವನದುರ್ಗವು ರಮ್ಯವಾದ ಸ್ಥಳವಾಗಿದೆ. ಕೋಟೆಯನ್ನು ಹೊಂದಿರುವ ಉನ್ನತ ಬೆಟ್ಟವಾಗಿರುವ ಇದು ನರಸಿಂಹನ ನೆಲೆಯಾಗಿದೆ. ಈ ಬೆಟ್ಟಕ್ಕೆ ಎರಡು ಶಿಖರಗಳಿವೆ. ಒಂದನ್ನು ಬಿಳಿಬೆಟ್ಟವೆಂದೂ, ಮತ್ತೊಂದನ್ನು ಕರಿಬೆಟ್ಟವೆಂದೂ ಕರೆಯುತ್ತಾರೆ. ಹೊಯ್ಸಳರ ಕಾಲದಲ್ಲಿ ಪ್ರಮುಖವಾದ ನೆಲೆಗಟ್ಟನ್ನು ಹೊಂದಿದ್ದ ಸಾವನದುರ್ಗಕ್ಕೆ ಕೃಷ್ಣರಾಜಗಿರಿಯೆಂಬ ಹೆಸರೂ ಇದೆ. ಮೊದಲು ಸಾಮಂತ ದುರ್ಗವಾಗಿದ್ದದ್ದು ಕಾಲಾನಂತರದಲ್ಲಿ ಸಾವನದುರ್ಗ ಎಂಬುದಾಗಿ ಕರೆಯಲ್ಪಡುತ್ತಿದೆ.

ಇಮ್ಮಡಿ ಕೆಂಪೇಗೌಡನು ತಳಾರಿಗಂಗ ಎಂಬುವವನನ್ನು ಸಂಹರಿಸಿ ಇದನ್ನು ಗೆದ್ದುಕೊಂಡಂತೆ ಚರಿತ್ರೆಯಿಂದ ತಿಳಿದು ಬರುತ್ತದೆ. ದೇವರಾಜನೆಂಬ ಮೈಸೂರಿನ ದಳವಾಯಿಯು ಹದಿನೆಂಟನೆಯ ಶತಮಾನದಲ್ಲಿ ಇದನ್ನು ವಶಪಡಿಸಿಕೊಂಡ.

ಸಾವನದುರ್ಗದಲ್ಲಿ ಎಲ್ಲ ಕಾಲಕ್ಕೂ ಹಸಿರು ತುಂಬಿದ ನಿಸರ್ಗ ದೃಶ್ಯವನ್ನು ಕಾಣಬಹುದಾಗಿದೆ. ಇಲ್ಲಿ ಚೈತನ್ಯವನ್ನು ಚಿಮ್ಮಿಸುವ ಲವಲವಿಕೆಯ ವಾತಾವರಣವಿದೆ. ಇಂತಹ ಸೂಕ್ತವಾದ ಸ್ಥಳವನ್ನು ಆರಿಸಿಕೊಂಡು ಗುಹಾ ದೇವಾಲಯವನ್ನು ಮಾಡಿ ಅಲ್ಲಿ ನರಸಿಂಹ ದೇವರನ್ನು ಪ್ರತಿಷ್ಠೆ ಮಾಡಲಾಗಿದೆ. ಇದಲ್ಲದೆ ಮತ್ತೂ ಒಂದು ನರಸಿಂಹ ದೇವಸ್ಥಾನವನ್ನು ಇಲ್ಲಿ ದರ್ಶಿಸಬಹುದು. ನರಸಿಂಹಸ್ವಾಮಿಯನ್ನು ಬೆಟ್ಟ-ನದಿಗಳಿರುವ ಕಡೆ ಸ್ಥಾಪಿಸಬೇಕೆಂಬ ವಿಚಾರಕ್ಕೆ ಅರ್ಹವಾಗಿ ಸಾವನದುರ್ಗದಂತಹ ಬೆಟ್ಟ ಪ್ರದೇಶದಲ್ಲಿ ನಿರ್ಮಿಸಿರಬೇಕೆಂಬ ಸಂಗತಿ ಯೋಗ್ಯವಾದದ್ದು.

ಇಲ್ಲಿನ ಬೆಟ್ಟದ ಅನೇಕ ಸ್ಥಳಗಳಲ್ಲಿ ಕೋಟೆ ಗೋಡೆಗಳು ಮತ್ತು ಇತರ ಕಟ್ಟಡಗಳ ಅವಶೇಷಗಳಿವೆ. ಭಕ್ತಾದಿಗಳು ಮದುವೆ ಮೊದಲಾದ ಶುಭಕಾರ್ಯಗಳನ್ನು ನೆರವೇರಿಸಲು ಅನುಕೂಲವಾಗುವಂತೆ ಇತ್ತೀಚೆಗೆ ಇಲ್ಲಿ ಛತ್ರಗಳನ್ನು ನಿರ್ಮಿಸಿರುತ್ತಾರೆ. ಮಾಗಡಿಯಿಂದ ಸಾಕಷ್ಟು ವಾಹನ ಸೌಕರ್ಯ ಕೂಡಾ ಲಭ್ಯವಿದೆ. ಇಲ್ಲಿಗೆ ಬರುವ ಯಾತ್ರಿಕರಿಗೆ ಸಾಧ್ಯವಾದಷ್ಟು ಅನುಕೂಲಕರವಾದ ಸೌಲಭ್ಯಗಳನ್ನು ಸಾವನದುರ್ಗ ಕ್ಷೇತ್ರದಲ್ಲಿ ಕಲ್ಪಿಸಲಾಗಿದೆ.

# ಹೆಸರಘಟ್ಟ

ಬೆಂಗಳೂರು ಜಿಲ್ಲೆಗೆ ಸೇರಿರುವ ಹೆಸರಘಟ್ಟವು ಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯವನ್ನು ಹೊಂದಿದ ಗ್ರಾಮವಾಗಿರುತ್ತದೆ. ಬೆಂಗಳೂರು ನಗರದಿಂದ ಈ ಸ್ಥಳಕ್ಕೆ ಸಾಕಷ್ಟು ಸಾರಿಗೆ ಸೌಕರ್ಯವನ್ನು ಒದಗಿಸಲಾಗಿದೆ. ಕೃಷಿಕ್ಷೇತ್ರಕ್ಕೆ ಹೆಸರುವಾಸಿಯಾದ ಈ ಊರಿನ ಸಮೀಪದಲ್ಲಿ ನಾಟ್ಯಕಲೆಯ ರಸದೌತಣವನ್ನು ನೀಡುವ ಪ್ರೊತಿಮಾ ಬೇಡಿಯವರ 'ನೃತ್ಯಗ್ರಾಮ'ವಿದೆ. ದೇವಾಲಯದ ಧಾರ್ಮಿಕತೆ ಮತ್ತು ಸಂಸ್ಕೃತಿಯ ಕಲಾಭಿರುಚಿಗಳನ್ನು ಬಯಸುವವರಿಗೆ ಹೆಸರಘಟ್ಟ ಮತ್ತು ಸಮೀಪದ ಪರಿಸರಗಳು ಮುದನೀಡುತ್ತವೆಯೆಂದು ಹೇಳಬಹುದು.

ಲಕ್ಷ್ಮೀನರಸಿಂಹ ದೇವಸ್ಥಾನವು ಊರಿನ ಮಧ್ಯಭಾಗದಲ್ಲಿದೆ. ಇದು ಧಾರ್ಮಿಕಾಸಕ್ತಿಗಳ ಕೇಂದ್ರವೂ ಹೌದು. ಹೊರನೋಟಕ್ಕೆ ತಿಳಿಯುವಂತೆ ಈ ದೇವಾಲಯದ ಆಡಳಿತವು ಯಾರ ಪ್ರಭಾವಕ್ಕೂ ಒಳಪಟ್ಟಂತಿಲ್ಲ. ಸ್ವಯಂ ಪ್ರೇರಣೆಯಿಂದ ಭಕ್ತಾದಿಗಳು ದೇವರಿಗೆ ಪೂಜಾದಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ವಿಶೇಷವಾದ ಹಬ್ಬ- ಹರಿದಿನಗಳಂದು ಅಭಿಷೇಕ, ಉತ್ಸವಗಳನ್ನು ಏರ್ಪಡಿಸುತ್ತಾರೆ.

ಆಲಯದ ಪ್ರಾಕಾರ ಮತ್ತು ಹೊರಗಿನ ರಚನೆಗಳಿಂದ ಈ ದೇವಾಲಯವು ಸಾಧಾರಣ ರಚನೆಯಿಂದಾಗಿರುವುದು ಮನದಟ್ಟಾಗುತ್ತದೆ. ಯಾವುದೇ ವಿಶೇಷ ಶಿಲ್ಪವೈಭವಗಳಿಲ್ಲದೆ ನವರಂಗ, ಸುಕನಾಸಿ, ಗರ್ಭಗೃಹಗಳನ್ನೊಳಗೊಂಡಿವೆ. ಮುಂಭಾಗದ ನವರಂಗದಲ್ಲಿ ನಾಲ್ಕು ಕಂಬಗಳಿವೆ. ಇಲ್ಲಿ ಉಬ್ಬುಶಿಲ್ಪಗಳ ಕೆತ್ತನೆಯಿದೆ. ಈ ಕಂಬಗಳನ್ನು ಹದಿನಾರು ಮುಖಗಳಾಗಿ ವಿಭಾಗಿಸಿದ್ದಾರೆ. ಪ್ರಧಾನವಾದ ಕೆತ್ತನೆಗಳಾಗಿ ದಶಾವತಾರದ ಶಿಲ್ಪಗಳನ್ನು ಕಂಬಗಳ ಮೇಲೆ ಕಾಣಬಹುದು. ಕಂಬದಿಂದ ಹೊರಬರುತ್ತಿರುವ ನರಸಿಂಹನ ಶಿಲ್ಪವನ್ನು ಇಲ್ಲಿ ಬಿಡಿಸಿದ್ದಾರೆ. ತಪೋನಿರತರಾದ ಸ್ತ್ರೀಯರ ಚಿತ್ರಗಳು, ಮೊಸರು ಕಡೆಯುತ್ತಿರುವ ಮಹಿಳೆ, ಪುಂಗಿ ನುಡಿಸುತ್ತಿರುವ ಪುರುಷ ಚಿತ್ರಗಳಿಂದ ಇವು ಶೋಭಿಸುತ್ತಿವೆ.

ನವರಂಗದ ನಂತರ ಸುಕನಾಸಿಯು ಆರಂಭವಾಗುವ ಮೊದಲು ಪ್ರದಕ್ಷಿಣಾಪಥವನ್ನು ನಿರ್ಮಿಸಲಾಗಿದೆ. ಇದನ್ನು ಅಂತರಾಳವೆನ್ನಬಹುದು. ಗರ್ಭಗೃಹದಲ್ಲಿರುವ ಲಕ್ಷ್ಮೀನರಸಿಂಹ ಸ್ವಾಮಿಯ ಮೂರ್ತಿಯು ಸುಮಾರು ನಾಲ್ಕು ಅಡಿ ಎತ್ತರವಾಗಿದೆ. ಎಡತೊಡೆಯ ಮೇಲೆ ಲಕ್ಷ್ಮಿಯು ವಿರಾಜಿಸಿದ್ದಾಳೆ. ದೂರ್ವಾಸ ಮಹರ್ಷಿಗಳು ಈ ನರಸಿಂಹನನ್ನು ಪೂಜಿಸಿದರೆಂದು ಹೇಳುವರು.

ಇಡೀ ದೇವಾಲಯದ ರಚನೆಯ ಕಾಲವನ್ನು ಹದಿನಾರು ಹದಿನೇಳನೆ ಶತಮಾನಗಳಿಗೆ ಸೇರಿಸಬಹುದು. ನರಸಿಂಹಸ್ವಾಮಿಯ ಬ್ರಹ್ಮರಥೋತ್ಸವವು ಫಾಲ್ಗುಣ ಶುದ್ಧ ಹುಣ್ಣಿಮೆಯ ದಿನದಂದು ವೈಭವವಾಗಿ ನೆರವೇರುತ್ತದೆ.

## ತುಮಕೂರು ಜಿಲ್ಲೆ

# ದೇವರಾಯನದುರ್ಗ



ದೇವರಾಯನದುರ್ಗದ
ಯೋಗಾ ಲಕ್ಷ್ಮೀನೃಸಿಂಹ ಸ್ವಾಮಿ



ದೇವರಾಯನದುರ್ಗದ
ಭೋಗಾ ಲಕ್ಷ್ಮೀನೃಸಿಂಹ ಸ್ವಾಮಿ

ದೇವರಾಯನದುರ್ಗವು ತುಮಕೂರಿಗೆ ಪೂರ್ವದ ದಿಕ್ಕಿನಲ್ಲಿರುವ ಪ್ರಸಿದ್ಧವಾದ ಯಾತ್ರಾಸ್ಥಳವಾಗಿದೆ. ಇದರ ಜೊತೆಯಲ್ಲಿಯೇ ಗಿರಿಧಾಮವಾಗಿ ಅಭಿವೃದ್ಧಿ ಹೊಂದುತ್ತಿದೆ. ಇದನ್ನು 'ಕನಕಗಿರಿಕ್ಷೇತ್ರ' ವೆಂದು ಕರೆಯುತ್ತಾರೆ. ತನ್ನ ಹೆಸರಿನಿಂದಲೇ ಸೂಚಿತವಾಗುವ ಹಾಗೆ ದುರ್ಗದಿಂದ ಕೂಡಿರುವ ಈ ಸ್ಥಳವು ಸಮುದ್ರ ಮಟ್ಟದಿಂದ ಸುಮಾರು ನಾಲ್ಕು ಸಾವಿರ ಅಡಿ ಎತ್ತರದಲ್ಲಿದೆ. ಸುಂದರವಾದ ಹಾಗೂ ರಮ್ಯವಾದ ಪ್ರಕೃತಿ ದೃಶ್ಯಗಳ ಮಧ್ಯದಲ್ಲಿರುವ, ವಿಶಾಲವಾದ ಅರಣ್ಯದ ನಡುವೆ ನೆಲೆಗೊಂಡಿರುವ ದೇವರಾಯನದುರ್ಗದ ಬೆಟ್ಟಪ್ರದೇಶದ ಕೆಳಹಂತದಲ್ಲಿ ಲಕ್ಷ್ಮೀನರಸಿಂಹ ಅಥವಾ ಮಾರ್ಗದ ನರಸಿಂಹ ದೇವಾಲಯವಿದೆ. ಕುಂಭಿಯೆಂದು ಕರೆಯಲಾಗುವ ಬೆಟ್ಟದ ನೆತ್ತಿಯ ಭಾಗದಲ್ಲಿ ಕುಂಭಿನರಸಿಂಹ ದೇವಾಲಯವಿದೆ. ಎರಡು ಪ್ರಮುಖವಾದ ದೇವಾಲಯಗಳಿಂದಲೂ, ನಿಸರ್ಗಸಹಜವಾದ ಝರಿ, ದೋಣೆಗಳಿಂದಲೂ ಕೂಡಿ ಏಳು ದ್ವಾರಗಳಿರುವ ಕೋಟೆಕೊತ್ತಲಗಳನ್ನು ಒಳಗೊಂಡಿರುವ ದೇವರಾಯನದುರ್ಗವು ಪ್ರವಾಸಿ ಕ್ಷೇತ್ರವಾಗಿಯೂ ಇತ್ತೀಚಿನ ದಿನಗಳಲ್ಲಿ ತನ್ನ ಆಕರ್ಷಣೆಯನ್ನು ಹೆಚ್ಚಿಸಿಕೊಳ್ಳುತ್ತಲಿದೆ.

## ಪುರಾಣ ಐತಿಹ್ಯ

ಪುರಾಣಕತೆಯ ಪ್ರಕಾರವಾಗಿ ಅಂಧಕ ಅಥವಾ ಲಿಂಗಕನೆಂಬ ದರೋಡೆಕೋರನು ಈ ಸ್ಥಳದಲ್ಲಿ ಅತ್ಯಂತ ಬಲಶಾಲಿಯಗಿ ಕುಖ್ಯಾತನಾಗಿದ್ದ. ಇವನು ದರೋಡೆಗಾರರ ಗುಂಪಿನ ನಾಯಕನಾಗಿದ್ದು ದರ್ಪತನದಿಂದ ಈ ಸ್ಥಳದಲ್ಲಿ ಬೇರೂರಿದ್ದ. ಮತ್ತೊಬ್ಬ ಸುಮತಿ ಎಂಬ ಅರಸನು ಯದುಪಟ್ಟುದಿಂದ ರಾಜ್ಯವಾಳುತ್ತಿದ್ದ. ಇವನು ಅಂಧಕನನ್ನು ನಿಗ್ರಹಿಸಿ ನೆಲಮಂಗಲದ ಸಮೀಪ ಭೂಮಂಡನವೆಂಬ ನಗರವನ್ನು ನಿರ್ಮಿಸಿಕೊಂಡ. ಗಂಧರ್ವ ಅವತಾರರೂಪಿಯಾದ ಒಂದು ಆನೆಯು ಈ ಅರಣ್ಯ ಪ್ರದೇಶದಲ್ಲಿ ಪಟ್ಟಣವಾಸಿಗಳಾದ ಜನರಿಗೆ ಸಾಕಷ್ಟು ತೊಂದರೆ ಕೊಡುತ್ತಿತ್ತು. ಇಲ್ಲಿನ ಪ್ರಮುಖವಾದ ಕೆರೆಯನ್ನು ತನ್ನ ಜಲಕ್ರೀಡೆಯಿಂದ ಹಾನಿಗೊಳಿಸಿ ಮದೋನ್ಮತ್ತವಾಗಿ ಎತ್ತರವಾದ ಗುಡ್ಡವನ್ನೇರುತ್ತಿದ್ದಾಗ ಕಾಲುಜಾರಿ ಕೆಳಗೆ ಬಿದ್ದಿತು. ಆನೆಯು ಎಲ್ಲಿ ಜಾರಿಬಿದ್ದಿತೋ ಆ ಸ್ಥಳವನ್ನು 'ಆನೆ ಬಿದ್ದ ಝರಿ' ಎಂದು ಕರೆಯುತ್ತಾರೆ.

ಹೊಯ್ಸಳರ ಕಾಲದಲ್ಲಿ ಇಲ್ಲಿ ಒಂದು ಪಟ್ಟಣವೇ ನಿರ್ಮಾಣವಾಗಿದ್ದಂತೆ ತಿಳಿದುಬರುತ್ತದೆ. ದಕ್ಷಿಣ ಮತ್ತು ಪಶ್ಚಿಮ ಪ್ರದೇಶಗಳಿಗೆ ಬಹಳ ಕಾಲದವರೆಗೆ ಈ ಪಟ್ಟಣದ ಹೆಸರು ಉಳಿದಿದ್ದ ಹಾಗೆ ಗೊತ್ತಾಗುತ್ತದೆ. ಕನಕಗಿರಿಯ ಹೆಸರಿಗೆ ಆನೆಯ ವೃತ್ತಾಂತವು ಸೇರಿಕೊಂಡು ದೇವರಾಯನದುರ್ಗಕ್ಕೆ ಪ್ರಾಚೀನ ಪರಂಪರೆಯೊದಗಿದೆ. ದೇವರಾಯನದುರ್ಗದ ಮೂರು ಹಂತಗಳಲ್ಲಿ ಹಳ್ಳಿಯ ಪ್ರದೇಶವು ಕೆಳಹಂತದಲ್ಲಿದೆ.

## ಎರಡು ಆಲಯಗಳು

ಇಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯವನ್ನು ಮೈಸೂರಿನ ಅರಸರಾದ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ನಿರ್ಮಿಸಲಾಗಿದೆ. ಇದರ ಕಾಲವು ಹದಿನೇಳನೇ ಶತಮಾನವಾಗಿರುತ್ತದೆ. ಅನಂತರ ಇದೇ ವಂಶದವರಾದ ಕೃಷ್ಣರಾಜ ಒಡೆಯರು ಹತ್ತೊಂಬತ್ತನೆಯ ಶತಮಾನದಲ್ಲಿ ಇದನ್ನು ನವೀಕರಿಸಿರುವುದು ಇತಿಹಾಸದ ದಾಖಲೆಗಳಿಂದ ತಿಳಿದುಬರುತ್ತದೆ. ಬೆಟ್ಟದ ಕೆಳಗಿನ ಪ್ರದೇಶದಲ್ಲಿರುವ ಮತ್ತೊಂದು ದೇವಾಲಯವು ಆಂಜನೇಯನ ಆರಾಧನೆಗೆ ಹೆಸರುವಾಸಿಯಾಗಿದೆ. ಎರಡು ಕೈಗಳನ್ನು ಜೋಡಿಸಿಕೊಂಡು ನಿಂತಿರುವ ಸಂಜೀವರಾಯರ ವಿಗ್ರಹವು ಅಂದವಾಗಿದೆ. ಈ ಆಲಯವು ನರಸಿಂಹ ದೇವಾಲಯಕ್ಕಿಂತ ಹಳೆಯದೆಂದು ಹೇಳಬಹುದಾಗಿದೆ.

ಮೊದಲು ಆನೆಬಿದ್ದ ಝರಿಯೆಂದು ಹೆಸರನ್ನೊಳಗೊಂಡ ಈ ಪ್ರದೇಶವನ್ನು ನಾಯಕನೊಬ್ಬ ಆಳಿದ ಕಾರಣದಿಂದಾಗಿ ಇದಕ್ಕೆ ಜಡಕನದುರ್ಗವೆಂಬ ಹೆಸರು ಬಂದಿದೆ. ಕಾಲಕ್ರಮೇಣದಲ್ಲಿ ದೇವರಾಯನದುರ್ಗವಾಗಿದೆ. ಈಗಿರುವ ಕೋಟೆಯನ್ನು ನಾಯಕರ ಕಾಲದಲ್ಲಿ ಕಟ್ಟಲಾಗಿದೆಯೆಂದು ಊಹಿಸಬಹುದು. ಸಂಜೀವರಾಯನ ದೇವಾಲಯದ ಹೆಸುಗೊಂಡ ದ್ವಾರದ ಬಳಿ ವೀಣಾಧಾರಿಯೋರ್ವನ ಶಿಲ್ಪವಿದೆ. ಇದನ್ನು ಹದಿನೈದನೆ

ಶತಮಾನದಲ್ಲಿದ್ದ ಸುಕುಮಾರದೇವನ ಮಗನಾದ ಸಂಗೀತ ಕಲಾವಿದ ವಿರೂಪಾಕ್ಷನದ್ದೆಂದು ಗುರುತಿಸಲಾಗಿದೆ. ಶಾಸ್ತ್ರಕಲೆಗಳಿಗೂ ಕೇಂದ್ರಗಳಾಗಿ ಈ ದೇವಾಲಯಗಳು ಸಾಕ್ಷಿಯಾಗಿವೆ.

ದೇವರಾಯನದುರ್ಗದ ಮೇಲಿನ ಹಂತದಲ್ಲಿ ಪೂರ್ವಾಭಿಮುಖವಾಗಿ ಮತ್ತೊಂದು ನರಸಿಂಹ ದೇವಾಲಯವನ್ನು ನಿರ್ಮಿಸಿದ್ದಾರೆ. ಇದನ್ನು ಕುಂಭಿ ನರಸಿಂಹನೆಂದು ಕೂಡಾ ಕರೆಯುತ್ತಾರೆ. ಬೆಟ್ಟದ ಮೇಲಿನ ಭಾಗದಲ್ಲಿರುವ ಕಾರಣ ಇದಕ್ಕೆ ಈ ಹೆಸರು ಬಂದಿದೆ. ಕೆಳಗಿನ ಹಂತದಲ್ಲಿರುವ ದೇವಾಲಯದ ಮಾದರಿಯಲ್ಲಿಯೇ ಇದನ್ನು ಸಹ ಕಟ್ಟಲಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳಿಂದ ಇದು ಶೋಭಿಸುತ್ತಿದೆ. ಇಲ್ಲಿ ಮೂರು ತೀರ್ಥಗಳಿವೆ. ಇವುಗಳನ್ನು ನರಸಿಂಹತೀರ್ಥ, ಪರಾಶರತೀರ್ಥ ಮತ್ತು ಪಾದತೀರ್ಥಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಮೂರನೆಯದಾದ ಪಾದತೀರ್ಥವು ಮೆಟ್ಟಲು ಮೆಟ್ಟಲುಗಳಾಗಿದ್ದು ಇಕ್ಕಟ್ಟಾದ ಗುಹೆಯಲ್ಲಿದೆ. ಈ ಮೆಟ್ಟಲುಗಳು ಅತ್ಯಂತ ತಳಮಟ್ಟದಲ್ಲಿರುವ ಜಲಾಶಯದವರೆಗೆ ಮುಟ್ಟಿವೆ. ದೇವಾಲಯದಿಂದ ಸ್ವಲ್ಪ ಮೇಲುಗಡೆಗೆ ಗರುಡನ ಗುಡಿಯಿದೆ. ಇಲ್ಲಿರುವ ಒಂದು ಗುಂಡನ್ನು 'ದೀವಿಗೆ ಗುಂಡು' ಎಂದು ಕರೆಯುತ್ತಾರೆ. ಇದು ಒಂದು ಬೃಹದಾಕಾರದ ಬಂಡೆಗಲ್ಲಾಗಿದ್ದು ಇದರ ಮೇಲೆ ಕಬ್ಬಿಣದ ದೀಪದ ಕಂಬವನ್ನಿಟ್ಟಿರುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಇಲ್ಲಿ ಬೆಳಗಿಸುವ ಜ್ಯೋತಿಯು ಬೆಂಗಳೂರು ಮತ್ತಿತರ ಸ್ಥಳಗಳಿಗೆ ಕಾಣುವುದೆಂದು ಹೇಳುತ್ತಾರೆ,

ದೇವರಾಯನದುರ್ಗದಲ್ಲಿರುವ ಮತ್ತೊಂದು ಆಕರ್ಷಕ ತಾಣ ನಾಮದ ಚಿಲುಮೆ. ಇದು ನೈಸರ್ಗಿಕವಾದ ತಿಳಿನೀರಿನ ಕಾರಂಜಿಯಾಗಿದೆ. ಅದರ ನೀರು ಬಂಡೆಗಲ್ಲಿನಲ್ಲಿ ತೋಡಿರುವ ಗುಂಡಿಯನ್ನು ತುಂಬಿ ಹೊರಚೆಲ್ಲಿ ಹರಿಯುತ್ತದೆ. ಬೆಟ್ಟಗುಡ್ಡಗಳ ಪ್ರದೇಶಗಳಲ್ಲಿ ಈ ರೀತಿಯ ವಿಶೇಷಗಳನ್ನು ನಮ್ಮ ನಾಡಿನ ಹಲವಾರು ಪ್ರಸಿದ್ಧಸ್ಥಳಗಳಲ್ಲಿ ಕಾಣಬಹುದಾಗಿದೆ. ಜಲಧಾರೆಯ ಸ್ರೋತವು ಎಲ್ಲಿ ಶಾಶ್ವತವಾಗಿ ಆರಿಹೋಗಲು ಸಾಧ್ಯವಿಲ್ಲವೋ ಅಂತಹ ಸ್ಥಳಗಳಲ್ಲಿ ಈ ರೀತಿಯ ಚಿಲುಮೆಗಳು, ನೀರಿನ ತಾಣಗಳು ಉಂಟಾಗಲು ಸಾಧ್ಯವಿದೆ. ಇದೇ ಜಿಲ್ಲೆಗೆ ಸೇರಿದ ಶಿವಗಂಗೆ ಬೆಟ್ಟದಲ್ಲಿರುವ ಪಾತಾಳತೀರ್ಥವು ಇದಕ್ಕೆ ಮತ್ತೊಂದು ನಿದರ್ಶನವೆನ್ನಬಹುದು.

ದೇವರಾಯನದುರ್ಗದಲ್ಲಿ ಎರಡು ತೊರೆಗಳು ಹುಟ್ಟಿ ಹರಿಯುತ್ತವೆ. ಒಂದನ್ನು ಜಯ ಎಂದೂ ಮತ್ತೊಂದನ್ನು ಮಂಗಲಿ ಎಂದೂ ಕರೆಯುತ್ತಾರೆ. ಎರಡೂ ಸೇರಿ ಜಯಮಂಗಲಿ ನದಿಯಾಗಿ ಹರಿಯುತ್ತದೆ. ಈ ನದಿಯ ಪ್ರದೇಶದಲ್ಲಿ ಒಡ್ಡನ್ನು ನಿರ್ಮಾಣ ಮಾಡಿ 'ಬುಕ್ಕಸಾಗರ'ವೆಂದು ಕರೆದಿದ್ದಾರೆ. ಇದು ಜಲಾಶಯವಾಗಿ ಪರಿವರ್ತನೆಗೊಂಡು ನೀರಿನ ಕೊರತೆಯನ್ನು ನೀಗುತ್ತಿದೆ. ಲಕ್ಷ್ಮೀನರಸಿಂಹ ಸ್ವಾಮಿಯ ಬ್ರಹ್ಮೋತ್ಸವವು ಚೈತ್ರ ಮಾಸದಲ್ಲಿ ವಿಜೃಂಭಣೆಯಿಂದ ನೆರವೇರುತ್ತದೆ. ಈ ಸ್ಥಳದಲ್ಲಿ ಕಟ್ಟಲಾಗಿರುವ ವಸತಿಗೃಹಗಳು ಯಾತ್ರಿಕರ ವಸತಿ ಸಮಸ್ಯೆಯನ್ನು ಪೂರೈಸುತ್ತಿವೆ. ಇದರೊಂದಿಗೆ ವ್ಯಾಸರಾಯ ಮಠವು ಇಲ್ಲಿ ಪ್ರಮುಖವಾದ ಸ್ಥಾನದಲ್ಲಿದೆ. ಸಾರ್ವಜನಿಕರು ನೀಡುತ್ತಿರುವ ದಾನ- ದತ್ತಿಗಳಿಂದ ದೇವಾಲಯವು ಪ್ರಗತಿಯತ್ತ ದಾಪುಗಾಲು ಹಾಕಿ ನಡೆದಿದೆ.

# ಶೀಬಿ

ತುಮಕೂರು ಜಿಲ್ಲೆಯಲ್ಲಿರುವ ಶೀಬಿಯು ಜಿಲ್ಲಾ ಕೇಂದ್ರದಿಂದ ಸುಮಾರು ಇಪ್ಪತ್ತನಾಲು ಕಿಲೋಮೀಟರ್ ದೂರದಲ್ಲಿ ರಾಷ್ಟ್ರೀಯ ಹೆದ್ದಾರಿ-೪ರಲ್ಲಿದೆ. ಈ ದೇಗುಲ ಬೆಂಗಳೂರು -ಪುಣೆಯ ಹೆದ್ದಾರಿಗೊಂದು ಕಳಸವನ್ನಿಟ್ಟಂತಿರುತ್ತದೆ. ಇದೊಂದು ಐತಿಹಾಸಿಕ ಮಹತ್ವವನ್ನು ಸಾರುವ ಪ್ರಸಿದ್ಧ ಸ್ಥಳವಾಗಿರುತ್ತದೆ. ಪ್ರಾಚೀನ ಕಾಲದ ಅಗ್ರಹಾರವಾಗಿದ್ದ ಇದನ್ನು ಸುಲ್ತಾನರ ಕಾಲದಲ್ಲಿ ಅಭಿವೃದ್ಧಿಪಡಿಸಲು ಶ್ರಮಿಸಿರುವುದು ಚರಿತ್ರೆಯಿಂದ ಗೊತ್ತಾಗುತ್ತದೆ. ಇಲ್ಲಿನ ದೇವಾಲಯ ದಲ್ಲಿರುವ ವಿಶೇಷ ಚಿತ್ರಕಲೆಯು ಕಲಾಪ್ರಪಂಚಕ್ಕೊಂದು ಕೊಡುಗೆಯನ್ನು ನೀಡುತ್ತಿದೆ. ಹಾಗೆಯೇ ಈ ಊರಿನ ಧಾರ್ಮಿಕ ಪರಿಸರವು ಇಡೀ ಊರಿಗೊಂದು ಶೋಭೆ ಯನ್ನು ಒದಗಿಸಿದೆ. ಶಿರಾ ಪ್ರಾಂತ್ಯಕ್ಕೆ ಒಳಪಟ್ಟಿದ್ದ ಈ ಭಾಗದಲ್ಲಿ ಪಾಳೆಯಗಾರರು ಸಹ ತಮ್ಮ ಆಳ್ವಿಕೆಯ ರೂಪುರೇಷೆಗಳನ್ನು ಬಿಟ್ಟಿರುವುದು ಸುಸ್ಪಷ್ಟವಾಗಿದೆ.

ಸೀಬೂರ್ ಎಂಬ ಹೆಸರಿನಿಂದಲೂ, ಹರಿಹರರಾಯಪುರವೆಂದೂ ಕರೆಯಲಾದ 'ಶೀಬಿ' ಯಲ್ಲಿ ಕಲ್ಲಿನಿಂದ ನಿರ್ಮಾಣವಾದ ನರಸಿಂಹಸ್ವಾಮಿ ದೇವಾಲಯವನ್ನು ದರ್ಶಿಸಬಹುದಾಗಿದೆ. ಎತ್ತರವಾದ ಪ್ರದೇಶದಲ್ಲಿ ವಿಸ್ತಾರವಾಗಿ ತಲೆಯೆತ್ತಿ ನಿಂತಿರುವ ದೇವಸ್ಥಾನವು ಸಾಕಷ್ಟು ಶಿಥಿಲವಾಗಿದೆ. ಆದರೂ ದೇವಾಲಯದ ಪ್ರಾಚೀನ ವೈಭವವನ್ನು ಉಳಿಸಿಕೊಂಡು ಬರುವಲ್ಲಿ ಶ್ರಮಿಸಲಾಗುತ್ತಿದೆ. ಆಲಯದ ಮುಂಭಾಗದಲ್ಲಿರುವ ಪುಷ್ಕರಿಣಿಯನ್ನು ನೋಡಿದಾಗ ಇದನ್ನು ಕಟ್ಟಿದವರಿಗೆ ಮನೋಭಿಲಾಷೆ ಎಷ್ಟು ಅಗಾಧವಾದದ್ದೆನಿಸುತ್ತದೆ.

ದೇವಾಲಯದ ಮುಖಮಂಟಪ ಮತ್ತು ಮಹಾದ್ವಾರಗಳು ಚಿತ್ರಕಲೆಯ ಸೊಬಗನ್ನು ದಾಖಲಿಸುವಲ್ಲಿ ಯಶಸ್ವಿಯಾಗಿವೆ. ಇಲ್ಲಿನ ಅಂಕಣಗಳನ್ನು ಅನೇಕ ಬಣ್ಣದ ಚಿತ್ರಗಳು ಆವರಿಸಿಕೊಂಡಿವೆ. ಒಳಮಾಳಿಗೆ ಮತ್ತು ತೊಲೆಗಳ ಮೇಲೆ ದಶಾವತಾರಗಳನ್ನು ಬಿಡಿಸಿದ್ದಾರೆ. ಶಿವಪುರಾಣ, ರಾಮಾಯಣ ಮತ್ತು ಮಹಾಭಾರತಗಳಿಂದ ಆಯ್ದ ದೃಶ್ಯಗಳನ್ನು ಈ ಭಾಗದಲ್ಲಿ ವರ್ಣಮಯವಾದ ರೀತಿಯಲ್ಲಿ ಚಿತ್ರೀಕರಿಸಿದ್ದಾರೆ.

ಸುಮಾರು ಹದಿನೆಂಟನೆ ಶತಮಾನಕ್ಕೆ ಸೇರಿದ ಇದನ್ನು ಹೈದರನ ಬಳಿ ಅಧಿಕಾರಿಯಾಗಿದ್ದ ನಲ್ಲಪ್ಪನೆಂಬಾತನು ಬರೆಸಿದನೆಂದು ಗೊತ್ತಾಗುತ್ತದೆ. ಶ್ರೀರಂಗಪಟ್ಟಣದ ವರ್ಣಚಿತ್ರಗಳಿಗೆ ಸಮನಾಗಿ ಇವು ಶೋಭಿಸುತ್ತಿವೆ. ಟಿಪ್ಪುವಿನ ಕಾಲದಲ್ಲಿದ್ದ ಮುಸ್ಲಿಂ ಮತ್ತು ಹಿಂದೂ ಗಣ್ಯವ್ಯಕ್ತಿಗಳ ಚಿತ್ರಣಗಳೂ ಇಲ್ಲಿವೆ. ಇವು ಭಾವೈಕ್ಯತೆಗೆ ನಿದರ್ಶನವಾಗಿವೆ.

ಗರ್ಭಗೃಹದಲ್ಲಿರುವ ನರಸಿಂಹಸ್ವಾಮಿಯು ಸಾಲಿಗ್ರಾಮ ರೂಪದಲ್ಲಿ ಆರಾಧನೆಗೊಳ್ಳು ತ್ತಿರುವುದು ಮಹತ್ವದ ಸಂಗತಿಯಾಗಿದೆ. ಇದು ನಮ್ಮ ಆರಾಧನೆಯ ಪ್ರಾಚೀನ ಸ್ವರೂಪಕ್ಕೆ ನಿದರ್ಶನವಾಗಿರುತ್ತದೆ. ಶೀಬಿಯಲ್ಲಿ ಮಾಘ ಮಾಸದಲ್ಲಿ ರಥೋತ್ಸವಾದಿಗಳು ಅತ್ಯಂತ ವಿಜೃಂಭಣೆಯಿಂದ ನೆರವೇರುತ್ತವೆ.

# ದೊಡ್ಡದಾಳವಟ್ಟ

ಕರ್ನಾಟಕ ರಾಜ್ಯಕ್ಕೆ ಸೇರಿರುವುದೆಂದು ಹೇಳಲಾಗುವುದಾದರೂ ಆಂಧ್ರಪ್ರದೇಶದ ಹಿಂದೂಪುರದಿಂದ ಹೋಗಿ ಬರಲು ಹೆಚ್ಚು ಅನುಕೂಲತೆ ಹೊಂದಿರುವ ಹಾಗೆ ಕಂಡು ಬರುವ ನರಸಿಂಹನ ಆರಾಧನೆಯ ನೆಲೆಯಾಗಿರುವುದು ದೊಡ್ಡದಾಳವಟ್ಟ. ಇದು ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿಗೆ ಸೇರಿದ್ದು ಇಲ್ಲಿಗೆ ಬಂದು ಹೋಗುವುದು ತೀರಾ ಶ್ರಮದಾಯಕ. ಆದರೂ ಇಲ್ಲಿನ ಅಭಿವೃದ್ಧಿ ಕಾರ್ಯಗಳು ಶ್ಲಾಘನೀಯವಾಗಿವೆ.

ದಾಳವಟ್ಟದ ನರಸಿಂಹಸ್ವಾಮಿ ಆಲಯವು ವಿಸ್ತಾರ ಭದ್ರತೆಗಳಿಂದ ಕೂಡಿದ್ದಾಗಿದೆ. ಕೋಟೆಯ ರಚನೆಯು ಪ್ರಾಕಾರದಂತೆ ಕಂಡು ಬರುತ್ತದೆ. ಗೋಪುರದ ನವೀಕರಣವಾಗಿ ಎತ್ತರವಾದ ಮಹಾದ್ವಾರದ ನಿರ್ಮಾಣ ಕಾರ್ಯವು ನಡೆದಿದೆ. ಧ್ವಜಸ್ತಂಭ, ಬಲಿಪೀಠಗಳು ಯಾವುದೇ ವಿಷ್ಣು ದೇವಾಲಯಗಳ ಮಾದರಿಯಲ್ಲಿರುತ್ತದೆ. ಇದರ ಸನಿಹದಲ್ಲಿ ರಾಮಾಂಜ ನೇಯರ ಶಿಲಾಪಟ್ಟಿಕೆಯನ್ನಿಡಲಾಗಿದೆ. ಪ್ರಾಕಾರದ ಒಳಭಾಗದ ಗೋಡೆಯನ್ನಾಶ್ರಯಿಸಿದಂತೆ ವಿಶ್ರಮಿಸಿಕೊಳ್ಳಲು ಅನುಕೂಲಕರವಾದ ಕೋಣೆಗಳನ್ನು ಕಟ್ಟಲಾಗಿದೆ. ಸಿಂಹಾಲಮಂಟಪದಲ್ಲಿ ತಾಯಿ ಮುದ್ದಮ್ಮನ ಆರಾಧನೆಗೆ ಅನುಕೂಲವನ್ನು ಕಲ್ಪಿಸಿದ್ದಾರೆ. ಪ್ರಾಕಾರದ ಗೋಡೆಯ ಶಿಲ್ಪಗಳು ಪಾಳೆಯಗಾರರ ಕಾಲಕ್ಕೆ ಸೇರಿದಂತೆ ಕಂಡು ಬರುತ್ತದೆ. ಸುಮಾರು ಇನ್ನೂರು ವರ್ಷಗಳಿಂದೀಚೆಗೆ ಇದನ್ನು ನಿರ್ಮಿಸಿದ್ದಿರಬೇಕು. ಇಲ್ಲಿನ ಆಕರ್ಷಕ ಶಿಲಾಮೂರ್ತಿ ಲಕ್ಷ್ಮೀ ಗಣಪತಿ. ಮತ್ತೊಂದು ಆಂಜನೇಯನ ಶಿಲ್ಪ, ಇದು ಸಹ ಗಮನ ಸೆಳೆಯುವಂತಿದೆ. ಇಲ್ಲಿನ ಪರಿಸರಕ್ಕೆ ಇವುಗಳಿಂದ ದೈವಿಕವಾದ ಶೋಭೆಯುಂಟಾಗಿದೆ.

ಆಲಯದ ಮುಖಮಂಟಪವು ಸರಳವಾದ ರಚನೆಯಾಗಿದೆ. ಸುಮಾರು ಇನ್ನೂರು ಮುನ್ನೂರು ವರ್ಷಗಳ ಆಚೀಚೆಯಲ್ಲಿ ಇದನ್ನು ಕಟ್ಟಲಾಗಿದೆಯೆಂದು ಊಹಿಸಬಹುದು. ಇಲ್ಲಿನ ಕಂಬಗಳು ಕೆಲವು ಉಬ್ಬು ಶಿಲ್ಪಗಳ ಕೆತ್ತನೆಯನ್ನು ಹೊಂದಿದೆ. ನರಸಿಂಹನ ರೂಪಗಳನ್ನು ಬಿಡಿಸಲಾಗಿದೆ. ಕಾಳಿಂಗ ಮರ್ದನ, ಬೆಣ್ಣೆ ಕೃಷ್ಣನ ಭಂಗಿಗಳನ್ನು ಕಡೆಯಲಾಗಿದೆ. ಮುಖಮಂಟಪವನ್ನು ದಾಟಿ ದೇವಾಲಯದ ದ್ವಾರವನ್ನು ಗಮನಿಸಿದವರಿಗೆ ಕೃಷ್ಣಲೀಲೆಯ ಪ್ರಸಂಗಗಳನ್ನೊಳಗೊಂಡ ಶಿಲಾಪಟ್ಟಿಕೆಯು ಕಂಡು ಬರುತ್ತದೆ. ನಂತರ ಸುಕನಾಸಿಯಿದೆ. ಅನಂತರ ಗರ್ಭಗೃಹ.

ದೇವಾಲಯದ ಗರ್ಭಗೃಹವು ಲಕ್ಷ್ಮೀನರಸಿಂಹಸ್ವಾಮಿಯ ದಿವ್ಯಸನ್ನಿಧಿಯನ್ನು ಹೊಂದಿರುತ್ತದೆ. ಮೂರ್ತಿಯ ಪಾದತಳದಲ್ಲಿ ಮೂರು ಶಿಲೆಗಳಿವೆ. ಆರಂಭದಲ್ಲಿ ಪೂಜಾದಿ ಗಳನ್ನು ಸ್ವೀಕರಿಸುತ್ತಿದ್ದ ಇವನ್ನು ಇಂದು ವಿಶೇಷವಾಗಿ ಸಂರಕ್ಷಿಸಲಾಗಿದೆ. ಈ ಸ್ವಾಮಿಯನ್ನು ದಳಮಹಾಮುನಿಗಳು ಪ್ರತಿಷ್ಠೆ ಮಾಡಿ ಅರ್ಚಿಸಿ ಪ್ರಚಾರಗೊಳಿಸಿರುತ್ತಾರೆ. ಅವರಿಂದ ಆರಾಧಿಸಲ್ಪಟ್ಟ ಕಾರಣ ಇದು ದಳಪಟ್ಟ ನರಸಿಂಹನೆಂದು ಪ್ರಖ್ಯಾತವಾಗಿದೆ. ಈ ಊರಿಗೆ ದಾಳವಟ್ಟವೆಂದೂ ಹೆಸರು ಬಂದಿರುತ್ತದೆ.

# ಪ್ರತಿಷ್ಠೆಯ ಹಿನ್ನೆಲೆ

ಈ ಸ್ಥಳದಲ್ಲಿ ನರಸಿಂಹಸ್ವಾಮಿಯ ಆರಾಧನೆಯು ಆರಂಭಗೊಂಡ ಬಗ್ಗೆ ಜನರಲ್ಲಿ ಐತಿಹ್ಯವೊಂದು ಸಾಕಷ್ಟು ಜನಪ್ರಿಯಗೊಂಡಿದೆ. ಇದರ ಹಿನ್ನೆಲೆಯಲ್ಲಿ ದೇವರ ಉದ್ಭವದ ವಿಚಾರದ ನೆಲೆಯಿದೆ. ನಂಬಿಕೆಗೊಂದು ಬಲಬಂದಿದೆ. ಇದು ಸಹಜಸಾಧ್ಯವಾದ ಘಟನೆಯೆಂದು ಹೇಳಬಹುದು. ಸುಗಮ ಸಾರಿಗೆ ಕೊರತೆಯಿದ್ದ ಕಾಲಕ್ಕೆ ಈ ಘಟನೆ ಸಂಬಂಧಪಡುತ್ತಿದೆ. ಆಗಿನ ದಿನಗಳಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗುವುದು ಸಾಮಾನ್ಯರಿಗೆ ಅಸಾಧ್ಯವಾದ ಮಾತಾಗಿತ್ತು. ಅಡಿಕೆ ವ್ಯಾಪಾರ ಮಾಡಿಕೊಂಡು ಊರಿಂದೂರಿಗೆ ಹೋಗುತ್ತಿದ್ದ ಒಂದು ಜನಾಂಗಕ್ಕೆ ದಳವಟ್ಟದ ಈ ನರಸಿಂಹ ದೇವರು ಕುಲದೇವರಾಗಿ ಒದಗಿಬಂದ ಹಿನ್ನೆಲೆಯನ್ನು ಇದು ಸಾದರಪಡಿಸುತ್ತದೆ.

ಅಡಿಕೆ ವ್ಯಾಪಾರ ಮಾಡಿಕೊಂಡು ಬರಲು ದೂರದ ಊರಿಗೆ ಹೋಗಲು ಬಂದ ಕುಟುಂಬಸ್ಥ ಜನರು ಈ ಸ್ಥಳದಲ್ಲಿ ಇಳಿದುಕೊಂಡಿದ್ದರು. ದಟ್ಟವಾದ ಗಿಡ,ಮರಗಳು ಇಲ್ಲಿ ಬೆಳೆದಿದ್ದವು. ಸಂಜೆಯಾದ ಕೂಡಲೆ ರಾತ್ರಿಯ ಊಟಕ್ಕಾಗಿ ಸಿದ್ಧತೆ ಮಾಡಿ ಕೊಳ್ಳುತ್ತಿದ್ದರು. ದವಸ ಧಾನ್ಯ ಸಾಂಬಾರು ಪದಾರ್ಥಗಳೆಲ್ಲ ಇದ್ದವು. ನೀರಿನ ಆಸರೆಯೂ ಇತ್ತು. ಕಾಡಿನ ಪ್ರಾಣಿಗಳ ಉಪಟಳವಂತೂ ಇವರಿಗೆ ಸರ್ವೇಸಾಮಾನ್ಯವಾದದ್ದು. ಅದಕ್ಕಾಗಿ ಸಿದ್ಧತೆಯನ್ನೂ ಮಾಡಿಕೊಂಡಿದ್ದರು. ಆದರೆ ಅವರಿಗಿದ್ದ ಕೊರತೆ ಒಂದೇ ಒಂದು. ಅಡುಗೆ ಮಾಡಿಕೊಳ್ಳಲು ಅಗತ್ಯವಾದ ಒಲೆಯನ್ನು ಹೂಡಲು ಕಲ್ಲುಗಳಿಗಾಗಿ ಹುಡುಕಾಡಿದರು.

ಸಾಮಾನ್ಯವಾಗಿ ಮೂರುಕಲ್ಲುಗಳಿಂದ ಒಲೆಯನ್ನು ಹೂಡಲಾಗುತ್ತದೆ. ಅವರಿಗೆ ದೊರೆತದ್ದು ಎರಡೇ ಕಲ್ಲು. ಮೂರನೆ ಶಿಲೆಗೆ ಹುಡುಕಾಟ ನಡೆಸಿದಾಗ ಸಮೀಪದ ಆಲದ ಮರದ ಕೆಳಗೆ ಕರಿಯ ಕಲ್ಲೊಂದು ಗೋಚರವಾಗುತ್ತದೆ. ಅದನ್ನು ಕಿತ್ತು ತರಲು ಸಾಧ್ಯವಾಗಲೇ ಇಲ್ಲ. ಇಲ್ಲಿ ಅದರ ವಿವರವಾದ ವಿಚಾರಗಳನ್ನು ಬೆದಕುವುದಕ್ಕಿಂತಲೂ ಮುಂದಿನ ಪರಿಣಾಮವನ್ನು ವಿವೇಚಿಸುವುದು ಸೂಕ್ತವೆಂದು ಹೇಳಬಹುದು. ಮೊದಲೇ ತಮಗೆ ದೊರೆತಿದ್ದ ಎರಡು ಕಲ್ಲುಗಳನ್ನು ಮೂರನೇ ಶಿಲೆಗೆ ಹೊಂದಿಸಿ ಅಡುಗೆ ಆರಂಭ ಮಾಡುತ್ತಾರೆ. ಆದರೆ ಆಶ್ಚರ್ಯದ ಘಟನೆ ಅಲ್ಲಿ ನಡೆಯುತ್ತದೆ. ಅನ್ನವಾಗುವ ಬದಲು ರಕ್ತವರ್ಣದ ಅಂಬಲಿಯಾಗುತ್ತದೆ. ಕೌತುಕ ತುಂಬಿದ ಅವರು ಮತ್ತೊಂದು ಪಾತ್ರೆಯಲ್ಲಿ ಅನ್ನವನ್ನು ಮಾಡತೊಡಗುತ್ತಾರೆ. ಆದರೆ ಅದೂ ಹಾಗೆಯೇ ಆಗುತ್ತದೆ. ಬೇರೆ ದಾರಿ ಕಾಣದಾಗುತ್ತದೆ.

ಅಷ್ಟರಲ್ಲಿ ಆ ಗುಂಪಿನಲ್ಲಿದ್ದ ಬಾಲಕನಿಗೆ ಆವೇಶವುಂಟಾಗುತ್ತದೆ. ಅವನು ಅಸ್ಪಷ್ಟವಾಗಿ ನರಸಿಂಹ, ನರಸಿಂಹ ಎಂದೇನೋ ಬಡಬಡಿಸುತ್ತಾನೆ. ವ್ಯಾಪಾರಿಗಳಲ್ಲಿ ಜಾಗೃತಿಯುಂಟಾಗುತ್ತದೆ. ಮೊದಲು ಆ ಸಾಲಿಗ್ರಾಮದಂತಹ ಕಲ್ಲಿನ ಮಹತ್ವವನ್ನರಿಯದ

ಅವರು ನಂತರ ತಾವು ಮಾಡಿದ ತಪ್ಪಿಗೆ ಕ್ಷಮೆಯನ್ನು ಯಾಚಿಸುತ್ತಾರೆ. ಶಿಲೆಯನ್ನು ಶುದ್ಧೀಕರಿಸಿ ಅದಕ್ಕೆ ಭಗವಂತನ ಸ್ಥಾನವನ್ನು ನೀಡಿ ಪೂಜಾದಿಗಳನ್ನು ನೆರವೇರಿಸುತ್ತಾರೆ. ಕಾಲಾನುಕ್ರಮದಲ್ಲಿ ಇಲ್ಲಿ ದೈವಿಕ ಆವರಣದ ನಿರ್ಮಾಣವಾಗುತ್ತದೆ. ಮುಂದೊಮ್ಮೆ ಇದಕ್ಕೆ ಸುಂದರ ದೇವಾಲಯದ ಸ್ವರೂಪ ದೊರೆತು ಆರಾಧನೆಯ ಆಗರವಾಗಿ ಪರಿಣಮಿಸುತ್ತದೆ.

ಜಾನಪದ ಸಮಾಜವು ಶಿಷ್ಟಸಮಾಜವಾಗುತ್ತ ದಾಪುಗಾಲು ಹಾಕುತ್ತಿರುವ ವರ್ತಮಾನ ಪರಿಸ್ಥಿತಿಯಲ್ಲಿ ಮೇಲಿನಂತಹ ಘಟನೆಗಳು ಮರೆಯಾಗುತ್ತಿದೆ. ಆದರೆ ಇದರ ಅಸ್ತಿತ್ವವು ಸಡಿಲಗೊಳ್ಳಲಾರದೆಂಬುದಕ್ಕೆ ಇಂದು ನಮ್ಮ ನಡುವೆ ಇರುವ ಅನೇಕ ಆಚರಣೆಗಳು ಪೂಜಾವಿಧಿ ವಿಧಾನಗಳೇ ಸಾಕ್ಷಿಯೆಂದು ಹೇಳಬೇಕು. ಇದು ದೊಡ್ಡದಾಳವಟ್ಟಕ್ಕೆ ಮಾತ್ರ ಅನ್ವಯಿಸುವುದಲ್ಲ. ನಮ್ಮಲ್ಲಿ ರಹಸ್ಯವಾಗಿ ಉಳಿದು ಹೋಗಿರುವ ಲೆಕ್ಕವಿಲ್ಲದಷ್ಟು ಪೂಜಾನೆಲೆಗಳಿಗೆ ಸಂಬಂಧಪಡುವುದಾಗಿವೆ.

## ಜಾತ್ರೆ-ಉತ್ಸವ

ನರಸಿಂಹಸ್ವಾಮಿಯು ತನ್ನೆಡೆಗೆ ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿದ್ದಾನೆ. ಪ್ರತಿವರ್ಷ ಆಷಾಢ ಶುದ್ಧ ದಶಮಿಯಿಂದ ಹಿಡಿದು ಒಂದು ವಾರದ ಕಾಲ ಇಲ್ಲಿ ಜಾತ್ರೆ-ಉತ್ಸವಗಳ ಸಡಗರ- ಸಂಭ್ರಮಗಳು ತುಂಬಿರುತ್ತದೆ. ಪರಸ್ಥಳಗಳಿಂದಲೂ ತಂಡ ತಂಡವಾಗಿ ಇಲ್ಲಿಗೆ ಜನರು ಆಗಮಿಸುತ್ತಾರೆ.

ಇಲ್ಲಿ ನಡೆಯುವ ಕಲ್ಯಾಣೋತ್ಸವವು ವಿಶಿಷ್ಟವಾದ್ದೆಂದು ಹೇಳಬೇಕು. ಇದರ ಹಿಂದಿನ ದಿವಸದ ರಾತ್ರಿ ಸುತ್ತಮುತ್ತಲಿನ ಹಳ್ಳಿಗಳಿಂದ ಮದುವೆ ದಿಬ್ಬಣ ಬರುತ್ತದೆ. ತಮಟೆ, ಓಲಗ, ಮತಾಪು-ದೀವಟಿಗೆ, ಹಾಡು- ಕುಣಿತದಿಂದ ಕೂಡಿದ ವರನ ಕಡೆಯವರು ನರಸಿಂಹಸ್ವಾಮಿಯ ಮದುವೆಯನ್ನು ವೈಭವದಿಂದ ನಡೆಸುತ್ತಾರೆ. ರೈತ ಜನಾಂಗದವರದೇ ಇಲ್ಲಿ ಪ್ರಧಾನಪಾತ್ರವಾದ್ದರಿಂದ ಸಾಕಷ್ಟು ಸಂಖ್ಯೆಯ ಎತ್ತಿನ ಗಾಡಿಗಳು ಬಂದು ಸೇರು ವುದೊಂದು ವೈಶಿಷ್ಟ್ಯ. ಪಾಂಚರಾತ್ರಾಗಮದ ಪದ್ಧತಿಗೆ ಅನುಗುಣವಾಗಿ ಇಲ್ಲಿನ ಪೂಜಾದಿಗಳು ನೆರವೇರುತ್ತವೆ. ಆಷಾಢ ಶುದ್ಧ ದ್ವಾದಶಿಯ ದಿನದಂದು ಬ್ರಹ್ಮ ರಥೋತ್ಸವವು ಸಾಂಗವಾಗಿ ನಡೆಯುತ್ತದೆ.

ದೊಡ್ಡದಾಳವಟ್ಟಕ್ಕೆ ಸ್ವಾಮಿಯ ದರ್ಶನ ಸೇವೆಗಳಿಗಾಗಿ ಬರುವ ಭಕ್ತರ ಅನುಕೂಲತೆ ಗಳನ್ನು ನೋಡಿಕೊಳ್ಳಲು ಇಲ್ಲಿನ ಸ್ಥಳೀಯ ಸಮಿತಿಯವರು ಸಾಕಷ್ಟು ಶ್ರಮಿಸುತ್ತಿದ್ದಾರೆ. ಸಾರಿಗೆ ವ್ಯವಸ್ಥೆಯು ಕೊಂಚ ಉತ್ತಮಗೊಂಡು ಸಾಮಾನ್ಯ ಜನರಿಗೆ ಇಲ್ಲಿ ಬಂದು ಸೇರಲು ಹೆಚ್ಚಿನ ಅವಕಾಶಗಳಾಗಬೇಕು. ಈ ಕ್ಷೇತ್ರದ ಅಭಿವೃದ್ಧಿಗೆ ಇದು ಪೂರಕವಾಗುತ್ತದೆ. ಇದರೊಂದಿಗೆ ಭಕ್ತಜನರಿಗೆ ಪ್ರಶಾಂತವಾದ ನಿರ್ಮಲವಾದ ಸಾನ್ನಿಧ್ಯವು ದೊರೆಯು ವಂತಾಗುತ್ತದೆ.

# ನೊಣವಿನಕೆರೆ

ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿಗೆ ಸೇರಿದ ಮತ್ತೊಂದು ಹಳ್ಳಿ ನೊಣವಿನ ಕೆರೆ. ಯೋಗಾನರಸಿಂಹನ ನೆಲೆ. ಇದು ತಿಪಟೂರಿನ ಆಗ್ನೇಯಕ್ಕೆ ಹತ್ತು ಕಿಲೋಮೀಟರ್ ದೂರದಲ್ಲಿದೆ. ನೊಳಂಬರ ಕಾಲದಲ್ಲಿ ಇದನ್ನು 'ನೊಣಬನಕೆರೆ'ಯೆಂದು ಕರೆಯಲಾಗಿದೆ. ಹೆಬ್ಬಾರ್ ಶ್ರೀವೈಷ್ಣವರ ಪಂಚಗ್ರಾಮಗಳಲ್ಲಿ ಒಂದಾದ ಇಲ್ಲಿ ವಿಷ್ಣುವಿನ ಅಧಿಪತ್ಯಕ್ಕೆ ಸೇರಿದ ಎರಡು ಗುಡಿಗಳಿವೆ. ಒಂದು ಬೇಟೆರಾಯನೆಂದು ಕರೆಯಲಾಗುವ ಶ್ರೀನಿವಾಸ- ವೆಂಕಟೇಶ ಸ್ವಾಮಿಯದಾದರೆ ಮತ್ತೊಂದು ಈಗಾಗಲೇ ತಿಳಿಸಿದ ಯೋಗಾ ನರಸಿಂಹ.

ನೊಣವಿನಕೆರೆಯ ತ್ರಿಕೂಟಾಚಲ ಮಾದರಿಗೆ ಸೇರಿದ ಗೋಪಾಲಕೃಷ್ಣ ದೇವಾಲಯದ ಮೂರು ಗರ್ಭಗೃಹಗಳಲ್ಲಿ ಕೇಶವ-ವೇಣುಗೋಪಾಲ-ಯೋಗಾನರಸಿಂಹರನ್ನು ಕಾಣಬಹುದಾ ಗಿದೆ. ದ್ರಾವಿಡ ಶೈಲಿಯನ್ನು ಸರಿಹೊಂದಿರುವ ಈ ದೇವಾಲಯದ ಗರ್ಭಗುಡಿಯು ಕೇಶ ವನ ಅರ್ಚನಾದಿಗಳಿಗೆ ಯಥಾಪ್ರಕಾರ ಮೀಸಲಾಗಿದೆ. ಉತ್ತರಕ್ಕಿರುವ ಗರ್ಭಗುಡಿ ಯೋಗಾ ನರಸಿಂಹನದಾದರೆ, ದಕ್ಷಿಣಕ್ಕಿರುವ ಗರ್ಭಗೃಹದಲ್ಲಿ ವೇಣುಗೋಪಾಲನು ಕಂಗೊಳಿಸುತ್ತಿದ್ದಾನೆ.

ಈ ಸ್ಥಳವು 'ಸ್ಥಳಪುರಾಣ'ದ ಪ್ರಕಾರ ಕಾಡಿನ ಪ್ರದೇಶವಾಗಿತ್ತು. ಗೋಪಾಲಕೃಷ್ಣನ ಚೆಲುವಾದ ಮೂರ್ತಿಯು ಹುತ್ತದಲ್ಲಿ ಹುದುಗಿದ್ದು ಪ್ರತಿನಿತ್ಯ ಅಲ್ಲಿ ಹೋಗಿ ಹಾಲು ಕರೆಯುವ ಕಾಮಧೇನುವಿನ ಮೂಲಕ ಇದು ಪ್ರಕಟವಾಯಿತೆಂದು ಹೇಳುತ್ತಾರೆ. ಶ್ರೀವೈಷ್ಣವ ರಲ್ಲಿ ಪ್ರಮುಖವ್ಯಕ್ತಿಯಾದ ಕೊನೇರಿ ಅಯ್ಯಂಗಾರ್‌ರವರ ಧರ್ಮ ಪರಾಯಣತೆಯ ಕಾರಣವಾಗಿ ಈ ಊರಿನ ಎಲ್ಲ ದೇವಾಲಯಗಳಿಗೆ ಮಹತ್ವ ಬಂದಿರುವುದರಲ್ಲಿ ಸಂದೇಹವೇ ಇಲ್ಲ. ನೊಣವಿನಕೆರೆಯು ನರಸಿಂಹನ ಆವಾಸಸ್ಥಾನವಾಗಿ ಇಲ್ಲಿನ ಭಕ್ತಜನಸಮೂಹಕ್ಕೆ 'ಯೋಗ'ದ ಮಹತ್ವವನ್ನು ತಿಳಿಸಿಕೊಡುತ್ತ ದರ್ಶನಯೋಗ್ಯವಾದ ಸ್ಥಳವಾಗಿದೆ.

# ವಿಘ್ನಸಂತೆ

ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿಗೆ ಸೇರಿರುವ ವಿಘ್ನಸಂತೆಯು ಹೊಯ್ಸಳರ ಶಿಲ್ಪಕಲೆಗೆ ಒಳಪಡುತ್ತಿರುವ ಲಕ್ಷ್ಮೀನರಸಿಂಹದೇವಾಲಯವನ್ನು ಹೊಂದಿ ಪ್ರಸಿದ್ಧವಾಗಿದೆ. ಇಗ್ಗನಸಂತೆಯೆಂಬ ಇದರ ಮೊದಲಿನ ರೂಪವೆ ವಿಘ್ನಸಂತೆಯಾಗಿದೆ. ಇಲ್ಲಿರುವ ಈ ಪ್ರಸಿದ್ಧವಾದ ದೇವಾಲಯವು ತ್ರಿಕೂಟಾಚಲವಾಗಿದ್ದು ಉತ್ತರಾಭಿಮುಖ ವಾಗಿದೆ. ಇದನ್ನು ಹದಿಮೂರನೆಯ ಶತಮಾನದಲ್ಲಿ ಕಟ್ಟಲಾದ ಬಗ್ಗೆ ಶಾಸನೋಕ್ತವಾದ ದಾಖಲೆಗಳಿವೆ. ಹೊಯ್ಸಳ ಮನೆತನದ ಅಂದಿನ ಅರಸನಾದ ಮೂರನೇ ನರಸಿಂಹನ ದಂಡಾಧಿಕಾರಿಗಳಾಗಿದ್ದ ಅಪ್ಪಯ್ಯ, ಗೋಪಾಲ ಮತ್ತು ಮಾಧವ ಎಂಬ ಸೋದರರು

ಇದರ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಇವರು ಮತ್ತೊಬ್ಬ ಮುಖ್ಯ ದಂಡನಾಯಕನಾಗಿದ್ದ ಮಲ್ಲಿದೇವನ ಮಕ್ಕಳಾಗಿರುತ್ತಾರೆ. ಇಂತಹ ಸೋದರರ ಭ್ರಾತೃತ್ವ ಧರ್ಮ-ಸಂಸ್ಕೃತಿಗಳ ಮೇಲಿನ ಅಭಿಮಾನಗಳಿಂದ ನಾವಿಂದು 'ವಿಘ್ನಸಂತೆ' ಯ ಒಂದು ಉತ್ತಮ ಕಲಾಶೈಲಿಯ ಸ್ಮಾರಕವನ್ನು ಕಾಣಲು ಸಾಧ್ಯವಾಗಿರುತ್ತದೆ.

ಲಕ್ಷ್ಮೀನರಸಿಂಹ ದೇವಾಲಯದ ಮುಖ್ಯ ಗರ್ಭಗೃಹಕ್ಕೆ ಹೊಂದಿಕೊಂಡು ಸುಕನಾಸಿ ಮತ್ತು ಇದರ ಮೇಲೆ ಗೋಪುರಗಳಿವೆ. ಇಲ್ಲಿ ಕೇಶವನ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ಇದರಿಂದ ಹೊಯ್ಸಳರಿಗೆ ಕೇಶವನ ಬಗೆಗಿದ್ದ ಭಕ್ತಿ-ಪ್ರೇಮಗಳು ವ್ಯಕ್ತವಾಗುತ್ತವೆ. ಉಳಿದ ಎರಡು ಗರ್ಭಗೃಹಗಳಲ್ಲಿ ಎಡಭಾಗದಲ್ಲಿರುವ ಲಕ್ಷ್ಮೀನರಸಿಂಹನಾದರೆ ಬಲಗಡೆಗೆ ವೇಣುಗೋಪಾಲಸ್ವಾಮಿಯು ಶೋಭಿಸುತ್ತಿದ್ದಾನೆ. ಈ ಎಲ್ಲ ಮೂರ್ತಿಗಳೂ ಉತ್ತಮ ಕೆತ್ತನೆಯಿಂದ ಕೂಡಿದ್ದು ಇವುಗಳ ಪ್ರಭಾವಳಿಗಳಲ್ಲಿ ದಶಾವತಾರ ಶಿಲ್ಪಗಳನ್ನು ಬಿಡಿಸಿದ್ದಾರೆ. ಮುಖ್ಯ ದೇವಾಲಯದ ಗರ್ಭಗೃಹ ಮತ್ತು ಸುಕನಾಸಿಗಳ ದ್ವಾರಬಂಧಗಳು ಗಜಲಕ್ಷ್ಮಿ ಮತ್ತು ಲಕ್ಷ್ಮೀನಾರಾಯಣರ ಶಿಲ್ಪಗಳನ್ನು ಹೊಂದಿವೆ. ಮತ್ತೆರಡು ಗರ್ಭಗೃಹಗಳಲ್ಲಿ ಎಡಗಡೆಯ ದ್ವಾರಬಂಧವು ಯೋಗಾನರಸಿಂಹನಿಂದ ಅಲಂಕೃತವಾಗಿದ್ದರೆ ಬಲಗಡೆಯ ದ್ವಾರಬಂಧವು ವೇಣುಗೋಪಾಲನಿಂದ ಕಂಗೊಳಿಸುತ್ತಿದೆ. ಹಾಗೆಯೇ ಸುಕನಾಸಿಯ ಪ್ರವೇಶ ದ್ವಾರವು ಸಹ ಕೆತ್ತನೆಯ ಶಿಲ್ಪಗಳಿಂದ ಅಲಂಕಾರಗೊಂಡಿರುತ್ತದೆ. ಇಲ್ಲಿರುವ ಶಿಲ್ಪಗಳನ್ನು ಗಣಪತಿ ಮತ್ತು ಮಹಿಷಮರ್ದಿನಿಯರೆಂದು ಗುರುತಿಸಲಾಗಿದ್ದು ವಿಷ್ಣು ದೇವಾಲಯವಾದರೂ ಸಹ ಶಿವಸಂಬಂಧ ಅಥವಾ ಶಕ್ತಿಸಂಬಂಧ ಶಿಲ್ಪಗಳಿಗೂ ಮಾನ್ಯತೆಯಿದ್ದದ್ದು ತಿಳಿದುಬರುತ್ತದೆ.

ದೇವಾಲಯದ ನವರಂಗ ಮತ್ತು ಮುಖಮಂಟಪಗಳು ಸಹ ಹಲ ಕೆಲವು ಕೆತ್ತನೆಯ ವಿಶೇಷಗಳಿಂದ ಕೂಡಿರುತ್ತವೆ. ಮುಖಮಂಟಪ ಶೇಷಭಾಗವನ್ನು ಇಲ್ಲಿ ಕಾಣ ಬಹುದಾಗಿರುತ್ತೆ, ನವರಂಗದ ಕಂಬಗಳು ತೊಲೆಗಳಿಗೆ ಆಧಾರವಾಗಿದ್ದು ಇಲ್ಲಿ ಮಣಿ ಹಾಗೂ ಸುರುಳಿಯ ಅಲಂಕಾರವನ್ನು ಕಾಣಬಹುದಾಗಿದೆ. ಮುಖಮಂಟಪದ ಒಳಚಾವಣಿ ಮತ್ತು ನವರಂಗದ ಮಧ್ಯಚಾವಣಿಗಳಲ್ಲಿ ಗುಮ್ಮಟಗಳಿವೆ. ಇವುಗಳ ಮಧ್ಯದಲ್ಲಿ ತಾವರೆಯ ಮೊಗ್ಗನ್ನು ಇಳಿಬಿಟ್ಟಿರುವ ರೀತಿ ಕಲಾಮಯವಾಗಿದೆ. ಹೊಯ್ಸಳ ಶೈಲಿಯ ಮುಖ್ಯ ಲಕ್ಷಣಗಳಲ್ಲೊಂದಾದ ಇದರಿಂದ ಈ ಭಾಗಕ್ಕೆ ಶೋಭೆಯುಂಟಾಗಿದೆ. ಮುಖಮಂಟಪವನ್ನು ಎರಡು ಅಲಂಕೃತ ಕಂಬಗಳು ಹೊತ್ತುನಿಂತಿವೆ. ಇಲ್ಲಿನ ಮೂಲೆಗಳಲ್ಲಿ ಆನೆಗಳ ಮೇಲೆರಗು ತ್ತಿರುವ ಸಿಂಹಶಿಲ್ಪಗಳನ್ನು ಕಾಣಬಹುದು.

ದೇವಾಲಯದ ಹೊರಗೋಡೆಗಳು ಯಾವುದೇ ವಿಶೇಷವಾದ ಅಲಂಕಾರಿಕ ಕೆತ್ತನೆ ಗಳನ್ನು ಹೊಂದಿರದೆ ಹಲವು ರೀತಿಯ ಹೂಗಳ ಚಿತ್ರಣದಿಂದ ತುಂಬಿವೆ. ಅಲ್ಲಲ್ಲಿ ಸಣ್ಣ ಗೋಪುರದಂತಹ ರಚನೆಗಳನ್ನು ಗೋಡೆಗಂಬಗಳನ್ನು ಹೊಂದಿವೆ. ಗೋಡೆಯ ಚಾಚುಭಾಗಗಳು ಸಿಂಹದ ಸಾಲಿನಿಂದಲೂ, ಮಣಿ ಕೆಲಸದ ಕೆತ್ತನೆಗಳನ್ನು ಧರಿಸಿವೆ. ಸುತ್ತಲೂ ಇರುವ ಸೂರಿನ ಭಾಗದಲ್ಲಿ ಕೆಲವು ಸಾಧಾರಣ ಕೆತ್ತನೆಗಳನ್ನು ಕಾಣಬಹುದು.

ದೇವಾಲಯದ ಚಾರಿತ್ರಿಕ ದಾಖಲೆಯಾಗಿ ಇಲ್ಲೊಂದು ಶಾಸನವಿದೆ. ಇದರ ಮೇಲುಭಾಗದಲ್ಲಿ ಮಧ್ಯದಲ್ಲಿ ಕೇಶವ ಎಡಗಡೆಗೆ ಲಕ್ಷ್ಮೀನರಸಿಂಹ ಮತ್ತು ಬಲಗಡೆಗೆ ವೇಣುಗೋಪಾಲರ ನಿಂತಿರುವ ಚಿತ್ರಗಳನ್ನು ಸೂಕ್ಷ್ಮವಾದ ರೂಪದಲ್ಲಿ ಕೆತ್ತಲಾಗಿದೆ. ಒಳಗಿರುವ ನರಸಿಂಹನು ಆಸೀನಮೂರ್ತಿಯಾಗಿರುವನೆಂಬುದು ಇಲ್ಲಿ ಗಮನಾರ್ಹ. ಈಗಾಗಲೇ ತಿಳಿಸಿರುವ ದೇವಾಲಯ ನಿರ್ಮಾಣದ ವಿಚಾರವನ್ನು ಈ ಶಾಸನವು ಬಿಂಬಿಸುತ್ತಿದೆ.

ಲಕ್ಷ್ಮೀನರಸಿಂಹಸ್ವಾಮಿಯ ವಿಗ್ರಹವನ್ನು ಉತ್ತಮ ರೀತಿಯಲ್ಲಿ ಕಡೆಯಲಾಗಿದೆ. ಸುಖಾಸನದಲ್ಲಿ ಕುಳಿತಿರುವ ಸ್ವಾಮಿಯು ಕೈಗಳಲ್ಲಿ ಶಂಖ-ಚಕ್ರ-ಗದಾ-ಪದ್ಮಗಳು ಶೋಭಿಸುತ್ತಿವೆ. ಎಡಗಡೆಯ ತೊಡೆಯನ್ನು ಲಕ್ಷ್ಮಿಯು ಅಲಂಕರಿಸಿದ್ದಾಳೆ. ತಿಪಟೂರಿನ ಆಗ್ನೇಯಕ್ಕೆ ಸುಮಾರು ಹದಿನಾಲ್ಕು ಕಿಲೋಮೀಟರ್ ದೂರದಲ್ಲಿರುವ ವಿಘ್ನಸಂತೆಯು ಇದೇ ತಾಲೂಕಿನ ಮತ್ತೊಂದು ನರಸಿಂಹ ದೇವಾಲಯವನ್ನು ಹೊಂದಿರುವ ನೊಣವಿನಕೆರೆಗೆ ಮೂರು ಕಿಲೋಮೀಟರ್ ಸಮೀಪದಲ್ಲಿರುವುದು ಮತ್ತೊಂದು ಸ್ವಾರಸ್ಯಕರವಾದ ಸಂಗತಿಯೆನ್ನಬಹುದು.

# ಕುಣಿಗಲ್ಲು

ಬೆಂಗಳೂರು ನಗರದಿಂದ ಸುಮಾರು ಎಪ್ಪತ್ತೈದು ಕಿಲೋಮೀಟರ್ ಹಾಗೂ ತುಮಕೂರಿನ ದಕ್ಷಿಣಕ್ಕೆ ಮೂವತ್ತೈದು ಕಿ.ಮೀ. ದರದಲ್ಲಿರುವ ಕುಣಿಗಲ್ಲನ್ನು 'ಕುಣಿಂಗಲು' ಎಂದೂ ಸಹ ಹೆಸರಿಸಲಾಗಿರುತ್ತದೆ. ಈ ರೂಪವನ್ನು 'ಕುಣಿಯುವ ಕಲ್ಲು' ಎಂಬುದರಿಂದ ನಿಷ್ಪನ್ನ ಮಾಡಲು ಸಾಧ್ಯವಿದೆ. 'ಶಿವತಾಂಡವ ನಡೆದ ಸ್ಥಳವಿದು' ಎಂಬ ಕಾರಣಕ್ಕೆ ಈ ಸ್ಥಳಕ್ಕೆ ಈ ಹೆಸರು ಬಂದಿರುವುದಾಗಿದೆ. ಇದೊಂದು ಪರಂಪರಾಗತವಾದ ಐತಿಹ್ಯ. ನಮ್ಮ ಇತಿಹಾಸ ಮತ್ತು ಧರ್ಮದ ದೃಷ್ಟಿಯಿಂದ ಪ್ರಖ್ಯಾತವಾದ ಹೆಸರನ್ನು ಗಳಿಸಿರುವ ಶಿವಗಂಗೆಯ ಬೆಟ್ಟಗಳಲ್ಲಿ ಹುಟ್ಟುವ ನಳಿನಿ, ನಾಗಿನಿ ಮತ್ತು ಕಮಲಾ ಎಂಬ ಹೊಳೆಗಳ ಸಂಗಮಸ್ಥಳವಾಗಿ ಕುಣಿಗಲ್ಲು ಪ್ರಸಿದ್ಧಿ ಪಡೆದಿರುತ್ತದೆ.

ಗಂಗರದೊರೆ ಶಿವಮಾರನು ಕುಣಿಗಲ್ಲನ್ನು ಆಳುತ್ತಿದ್ದ, ಶ್ರೀಪುರುಷನ ಮಗನಾದ ಈತನ ವಶದಲ್ಲಿ ಈ ಪ್ರದೇಶವು ಸೇರ್ಪಡೆಯಾಗಿತ್ತು. ಇಲ್ಲಿನ ರಾಜ್ಯಪಾಲನಾಗಿ ಶಿವಮಾರನಿಗೆ 'ಗಂಗರ ಇತಿಹಾಸ'ದಲ್ಲೊಂದು ಸ್ಥಾನವಿದ್ದದ್ದು ತಿಳಿದುಬರುತ್ತದೆ. ಆ ಕಾಲದಲ್ಲಿಯೇ ಇದ್ದ ವೀರಬಂಕಯ ರಾಯನು ಕುಣಿಗಲ್ ಕೋಟೆಗೆ ಶಂಕುಸ್ಥಾಪನೆ ಮಾಡಿದವನಾಗಿದ್ದಾನೆ. ಹೊಯ್ಸಳರ ಕಾಲದಲ್ಲಿ ಇದೊಂದು ಅಗ್ರಹಾರವಾಗಿತ್ತು. ಶೋಭಾಯಮಾನವಾಗಿತ್ತು. ಮಾಗಡಿ ಪ್ರಭುಗಳು ಇದರ ಆಡಳಿತ ಹೊಂದಿದ್ದರು. ಅವರ ಕಾಲದಲ್ಲಿ ಇಲ್ಲಿನ ಕೋಟೆಯನ್ನು ನಿರ್ಮಾಣ ಮಾಡುವುದರ ಮೂಲಕ ಈ ಸ್ಥಳಕ್ಕೆ ವಿಶೇಷ ಮಹತ್ವ ಬರುವಂತೆ ಮಾಡಲಾಯಿತು.

ಕುಣಿಗಲ್‌ನಲ್ಲಿರುವ ನರಸಿಂಹ ದೇವಾಲಯವು ವಿಶಾಲವಾಗಿದೆ. ಇದನ್ನು ಹೊಯ್ಸಳರ ಕಾಲಕ್ಕೆ ಸೇರಿಸಬಹುದಾಗಿದೆ. ವಿಜಯನಗರ ಅರಸರ ಕಾಲದಲ್ಲಿ ಇಲ್ಲಿ ಕೆಲವು ಬದಲಾವಣೆಗಳನ್ನು ಮಾಡಲಾಯಿತು. ದೇವಾಲಯದ ಮೂಲರಚನೆಯ ಕಾಲದಲ್ಲಿ ಗರ್ಭಗುಡಿ, ಸುಕನಾಸಿ ಮತ್ತು ನವರಂಗಗಳನ್ನು ಮಾತ್ರವೇ ಹೊಂದಿದ್ದ ಇದನ್ನು ವಿಸ್ತಾರಗೊಳಿಸಿ ವಿಜೃಂಭಿಸುವಂತೆ ಮಾಡಲಾಯಿತು. ಇಲ್ಲಿ ನರಸಿಂಹನ ಆರಾಧನೆ ಪ್ರಸಿದ್ಧವಾಗಿರುವುದಾದರೂ ಗರ್ಭಗೃಹದಲ್ಲಿ ಮೂಲವಿಗ್ರಹದ ಸ್ಥಾನವನ್ನು ಜನಾರ್ದನ ಸ್ವಾಮಿಯು ಅಲಂಕರಿಸಿ ಕೊಂಡಿರುತ್ತಾನೆ. ಸುಮಾರು ಮೂರು ಅಡಿಗಳಿಗಿಂತ ಸ್ವಲ್ಪ ಹೆಚ್ಚಾಗಿದ್ದಂತಹ ನರಸಿಂಹಸ್ವಾಮಿಯನ್ನು ಇಲ್ಲಿ ನೂರಾರು ವರ್ಷಗಳಿಂದ ಆರಾಧಿಸಲಾಗುತ್ತಿದ್ದು ಅದು ಇಲ್ಲಿನ ಕೆರೆಯೊಂದರಲ್ಲಿ ದೊರೆತ ಕಾರಣ ಅದನ್ನು 'ಪ್ರಾಚ್ಯವಸ್ತು ಇಲಾಖೆ'ಗೆ ಸೇರ್ಪಡಿಸಲಾಗಿದೆ. ಇದೇನೇ ಇದ್ದರೂ ಸಹ ಕುಣಿಗಲ್‌ನ 'ನರಸಿಂಹ ಆರಾಧನೆ'ಯನ್ನೆ ಇಲ್ಲಿನ ಎಲ್ಲ ಆರಾಧನಾ ಸಂಪ್ರದಾಯಗಳೂ ಸಹ ಅನುಸರಿಸುತ್ತಿರುವುದು ವಿಶೇಷವೆಂದು ಹೇಳಬಹುದು.

## ಗದಗ ಜಿಲ್ಲೆ

# ಗದಗ

ಕುಮಾರವ್ಯಾಸನಿಗೆ ಕನ್ನಡದಲ್ಲಿ ಭಾರತವನ್ನು ಬರೆಯಲು ಸ್ಫೂರ್ತಿಯ ನೆಲೆಯಾದ ಗದುಗಿನ ವೀರನಾರಾಯಣಸ್ವಾಮಿಯ ದೇವಸ್ಥಾನದ ಒಂದು ಭಾಗದಲ್ಲಿ ಲಕ್ಷ್ಮೀನರಸಿಂಹ ದೇವರ ಗುಡಿಯಿರುತ್ತದೆ. ಚಾಲುಕ್ಯ ಶಿಲ್ಪದ ಸುಂದರ ಶಾಲಾ ಮಂದಿರದಲ್ಲಿ ನರಸಿಂಹ ಸ್ವಾಮಿಯು ಉತ್ತರಾಭಿಮುಖವಾಗಿ ವಾಸವಾಗಿದ್ದಾನೆ. ಲಕ್ಷ್ಮೀನರಸಿಂಹ ದೇವರು ತನ್ನ ತೊಡೆಯ ಮೇಲೆ ಲಕ್ಷ್ಮೀದೇವಿಯನ್ನು ಕೂರಿಸಿಕೊಂಡು ತನ್ನ ಹಸ್ತಗಳಲ್ಲಿ ಶಂಖ-ಚಕ್ರಗಳಿಲ್ಲದೆ ಶೋಭಿಸುತ್ತಿದ್ದಾನೆ. ಮತ್ತೊಂದು ಹಸ್ತದಲ್ಲಿ ಅಭಯಪ್ರದನಾಗಿರುತ್ತಾನೆ.

'ಕೃತಪುರ ಮಹಾತ್ಮೆ' ಎಂಬ ಕೃತಿಯಲ್ಲಿ ಈ ನರಸಿಂಹನ ಮಹಿಮೆಯನ್ನು ವರ್ಣಿಸಲಾಗಿದೆ. ಪುಂಡರೀಕ ಎಂಬ ಭಕ್ತನ ತಪಸ್ಸಿಗೆ ಮೆಚ್ಚಿ ಈ ನರಸಿಂಹ ಇಲ್ಲಿಗೆ ಬರುತ್ತಾನೆ. ಆ ಭಕ್ತನ ಅಭೀಷ್ಟದ ಮೇರೆಗೆ ನರಸಿಂಹ ಇಲ್ಲಿಗೆ ಬರುತ್ತಾನೆ. ಆ ಭಕ್ತನ ಅಭೀಷ್ಟದ ಮೇರೆಗೆ ನರಸಿಂಹನು ಕೃತಪುರದಲ್ಲಿ ನೆಲೆಸಿರುತ್ತಾನೆ. ಅಂದಿನಿಂದ ಕೃತಪುರವು ನರಸಿಂಹ ಕ್ಷೇತ್ರವಾಗಿ ಪ್ರಸಿದ್ಧವಾಯಿತೆಂದು ವರ್ಣಿತವಾಗಿದೆ. ಆ ಪುಂಡರೀಕನ ನರಸಿಂಹ ಸ್ತೋತ್ರವು ಇಂದು 'ನರಸಿಂಹತಾಪಿನಿ ಸ್ತೋತ್ರ'ವೆಂದು ಪ್ರಸಿದ್ಧವಾಗಿದೆ. ಈ ಸ್ತೋತ್ರದಲ್ಲಿ ನರಸಿಂಹ, ನಾರಾಯಣ, ಕೃಷ್ಣ, ಹರಿ, ವಿಷ್ಣು ಇವರಲ್ಲಿ ಅಭೇದವನ್ನು ಹೇಳಿ ಹರಿಯೇ ಸರ್ವೋತ್ತಮನೆಂದು ವಿವರಿಸಿದೆ.

ವೀರನಾರಾಯಣನ ಅರ್ಚಕರೇ ಈ ದೇವರನ್ನೂ ಸಹ ಪೂಜಿಸುತ್ತಿದ್ದಾರೆ. ಮೊದಲು ಈ ನರಸಿಂಹನಿಗೆ ಅಭಿಷೇಕ-ಪೂಜೆ ನೈವೇದ್ಯಗಳು ನಡೆಯುವ ಸಂಪ್ರದಾಯವಿದೆ.

ವೀರ ನಾರಾಯಣ ದೇವಸ್ಥಾನದಲ್ಲಿರುವ ಅಭಿಷೇಕದ ತೀರ್ಥಕ್ಕೆ ನರಸಿಂಹ ತೀರ್ಥವೆಂಬ ಹೆಸರಿದೆ. ವೀರನಾರಾಯಣ ದೇವಾಲಯದ ಎಂಟುಕಾಲಿನ ಮಂಟಪದಲ್ಲಿ ಕುಳಿತು ತನ್ನ ಕರ್ಣಾಟ-ಭಾರತ ಕಥಾಮಂಜರಿಯನ್ನು ರಚಿಸಿದ ಕವಿ ಗದುಗಿನ ನಾರಾಣಪ್ಪ, ಈ ಮಹಾಕವಿಯು ನರಸಿಂಹ ಶಿಲ್ಪವಿರುವ ಕಂಬದ ಬಳಿ ಕುಳಿತು ತನ್ನ ಕೃತಿಯನ್ನು ರಚಿಸಿರುತ್ತಾನೆ. ಇದನ್ನು 'ಕುಮಾರವ್ಯಾಸ ಕಂಬ'ವೆಂದು ಕರೆಯುತ್ತಾರೆ.

ಹೊಸತಾಗಿ ರಚಿತವಾದ ಜಿಲ್ಲೆಗಳಲ್ಲಿ ಒಂದಾದ 'ಗದಗು' ಮೊದಲಿಗೆ ಧಾರವಾಡ ಜಿಲ್ಲೆಯಲ್ಲಿ ಸೇರ್ಪಡೆಯಾಗಿತ್ತು. ಈ ಊರಿಗೆ ಸಾಕಷ್ಟು ಸಾರಿಗೆ ಸೌಕರ್ಯವಿದೆ. ಉತ್ತರ ಕರ್ನಾಟಕದ ಅನೇಕ ಪ್ರಖ್ಯಾತ ಸ್ಥಳಗಳನ್ನು ಸಂದರ್ಶಿಸುವವರು ಗದುಗಿನ ಮೂಲಕವೇ ಹಾದುಹೋಗುತ್ತಾರೆ. ರೈಲ್ವೆ ಜಂಕ್ಷನ್ ಸಹ ಆಗಿರುವ 'ಗದುಗು'ವು ಕರ್ನಾಟಕದ ಪ್ರಖ್ಯಾತ ಸ್ಥಳಗಳಲ್ಲಿ ಒಂದಾಗಿ ಪ್ರಾಮುಖ್ಯತೆಯನ್ನು ಹೊಂದಿದೆ.

# ಮುಂಡರಗಿ

ಗದುಗಿನ ವೀರನಾರಾಯಣನ ಕಿಂಕರತ್ವವನ್ನು ಹೊಂದಿದವರೆಲ್ಲರನ್ನು ಪಾಲಿಸುತ್ತ ಇಲ್ಲಿಗೆ ಸಮೀಪವಾದ ಮುಂಡರಗಿಯೆಂಬ ಸ್ಥಳದಲ್ಲಿ ಕನಕ ನರಸಿಂಹನ ದಿವ್ಯಸನ್ನಿಧಾನವಿದೆ. ಗದಗಿಗೆ ಸುಮಾರು ನಲ್ವತ್ತು ಕಿಲೋಮೀಟರ್ ದೂರದಲ್ಲಿರು ಮುಂಡರಗಿಯು ತಾಲೂಕು ಕೇಂದ್ರವೂ ಆಗಿರುತ್ತೆ. ಈ ಸ್ಥಳವನ್ನು ನಮ್ಮ ನಾಡಿನ ಸ್ವಾತಂತ್ರ್ಯ ಹೋರಾಟವೆಷ್ಟು ಪ್ರಚಲಿತವೋ ಹಾಗೆಯೇ ಇವರ ವಂಶಸ್ಥರು ಪ್ರತಿಷ್ಠೆ ಮಾಡಿ ಅರ್ಚಿಸಿ, ಆರಾಧಿಸಿ, ನೆಲೆಯೊಂದನ್ನು ನಿರ್ಮಿಸಿ ಅಲ್ಲಿನ ಅಭಿವೃದ್ಧಿಗಳಿಗೆ ಕಾರಣವಾದ ಕನಕ ನರಸಿಂಹನ ದೇವಾಲಯವೂ ಅಷ್ಟೇ ಮುಖ್ಯವಾದದ್ದು.

ಮುಂಡರಗಿ ಎಂಬ ಹೆಸರಿನ ಬಗ್ಗೆ ಸ್ವಲ್ಪ ಗೊಂದಲವುಂಟಾಗುತ್ತದೆ. 'ಮುಂಡ' ಎಂಬುದನ್ನು 'ಮೊಂಡ' ಎಂದು ಬದಲಾಯಿಸಿಕೊಂಡು 'ರಗಿ' ಎಂಬುದನ್ನು ವರ್ಣವ್ಯತ್ಯಯ ಮಾಡಿ 'ಗಿರಿ' ಎಂದಾಗಿಸಿಕೊಂಡಲ್ಲಿ ಇದರ ಅರ್ಥ ಸ್ವಲ್ಪ ಸಮೀಪವಾಗಬಹುದು. ಮೊಂಡಾಗಿದ್ದ ಗಿರಿಯು ಇಂದು ಮುಂಡರಗಿಯೆಂಗಾದಿರಬಹುದೆ. ಇಲ್ಲಿನ ಬಸ್ ನಿಲ್ದಾಣದಲ್ಲಿಳಿದು ನರಸಿಂಹನ ದೇವಾಲಯವೆಂದು ನೀವು ಕೇಳಿದಲ್ಲಿ ಪರದಾಡಬೇಕಾದೀತು. ಇಲ್ಲಿ ಇದನ್ನು ಕನಕಪ್ಪನ ಗುಡಿಯೆಂದು ವ್ಯವಹರಿಸುತ್ತಾರೆ. ಕನಕಾಚಲದ ಮರಿಯಾಗಿ ವಾಸ್ತುಶಿಲ್ಪದಲ್ಲಿ ಇಲ್ಲಿ ಇದನ್ನು ನೋಡಬೇಕಾಗಿದೆ.

ದೇವಾಲಯವನ್ನು ಊರಿನಿಂದಾಚೆ ಒಂದು ವಿಶಾಲವಾದ ಕಲ್ಲುಬಂಡೆಯ ಎತ್ತರವಾದ ಸ್ಥಳದಲ್ಲಿ ನಿರ್ಮಿಸಲಾಗಿದೆ. ಸುಮಾರು ಐವತ್ತು ಮೆಟ್ಟಿಲುಗಳನ್ನೇರಿ ದೇವರ ಸನ್ನಿಧಿಯನ್ನು ತಲುಪಬಹುದು. ಇಲ್ಲಿ ಮುಂಭಾಗಕ್ಕೆ ಒಂದು ಕಲ್ಲಿನ ಮಂಟಪ. ಒಳಭಾಗಕ್ಕೆ ಬಂಡೆಯನ್ನು ಕೊರೆದು ಒಂದು ಸಾಲಿಗ್ರಾಮ ಶಿಲೆಯಲ್ಲಿ ಪ್ರತಿಷ್ಠೆ ಮಾಡಿದ್ದಾರೆ. ಇದಕ್ಕೇ

ಪೂಜೆ. ಇದನ್ನೇ ನರಸಿಂಹನೆಂದು ಕರೆಯುವುದು. ಮತ್ತೆ ನಮ್ಮ ಮನಸ್ಸಿನಲ್ಲಿ ನರಸಿಂಹನ ರೂಪ-ಆಕಾರಗಳ ಹಿನ್ನೆಲೆಯ ಕೌತುಕತನಕ್ಕೆ ಸಂಚಾರ ಸಿಗಬಹುದಲ್ಲವೆ.? ಇಂತಹ ಕೇವಲ ಗುಂಡಾದ, ಒರಟಾದ ಗಾತ್ರದಲ್ಲಿ ಹಿರಿದೂ ಕಿರಿದೂ ಆಗಿರುವ ಶಿಲ್ಪಕ್ಕೆ ನಮ್ಮಲ್ಲಿ ನರಸಿಂಹ ಎಂಬ ಹೆಸರಿನಲ್ಲಿ ಪೂಜೆ ನಡೆಯುತ್ತಿರುವುದು ಈ ಸ್ವಾಮಿಯ ಮಹಿಮೆಗೆ ನಿದರ್ಶನವೆಂದು ಮತ್ತೊಮ್ಮೆ ಈ ಸಂದರ್ಭದಲ್ಲಿ ಹೇಳಬೇಕು.

ಮುಂಡರಗಿಯ ನಾಡಗೌಡರಾಗಿದ್ದವರು ಶ್ರೀರಂಗರಾಯರೆಂಬುವರು. ಇವರು ಪ್ರತಿ ವರ್ಷವೂ ಕನಕಗಿರಿಗೆ ಹೋಗಿ ನರಸಿಂಹನ ಸೇವೆ ಮಾಡಿ ಬರುತ್ತಿದ್ದರು: ಆದರೆ ವೃದ್ಧಾಪ್ಯವೊದಗಿದಾಗ ಇದಕ್ಕೆ ಅವಕಾಶವಾಗಲಿಲ್ಲ. ತನ್ನ ಸ್ವಾಮಿಯ ಆರಾಧನೆ ನಡೆಸಲಾಗಲಿಲ್ಲವಲ್ಲ ಎಂಬ ಕೊರಗು ಇವರನ್ನು ಕಾಡಿತು. ತನ್ನ ಭಕ್ತನ ಈ ಪರಿಸ್ಥಿತಿಗೆ ಪರಿತಾಪಕ್ಕೆ ಕರಗಿದ ಭಗವಂತನು ಆ ಭಕ್ತನಿದ್ದೆಡೆಗೇ ಆಗಮಿಸಿದ. ಭಕ್ತರೊಡನೆಯನಾದ ಭಗವಂತನು ಹೇಗೆ ತನ್ನನ್ನು ಭಜಿಸಿದವರಿಗೆ ಇದ್ದ ಸ್ಥಳದಲ್ಲಿಯೇ ದರುಶನ ನೀಡುವನೆಂಬುದಕ್ಕೆ ಸಾಕ್ಷಿಯಾಗಿ ಇಲ್ಲಿನ ದೈವಸನ್ನಿಧಾನವು ಪ್ರಸಿದ್ಧವಾಗಿದೆ.

ಊರ ಹೊರಗಡೆ ವಾಯುವ್ಯ ದಿಕ್ಕಿನಲ್ಲಿ ಹೊಳೆಯ ದಂಡೆಯಲ್ಲಿರುವ ಗುಟ್ಟಾದ ಮೇಲಿರುವ ಈ ಸ್ವಾಮಿಯ ಬ್ರಹ್ಮರಥೋತ್ಸವವು 'ರಂಗಪಂಚಮಿ'ಯಂದು ನೆರವೇರುತ್ತದೆ. ನಾಡಗೌಡರ ಮನೆಯವರಿಂದ ಗುಂಡಾರತಿ ಸ್ವಾಮಿಯ ಪಾದಗಳಿಗೆ ಅರ್ಪಣೆಯಾದ ನಂತರ ರಥೋತ್ಸವವು ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಸೇರುವ ಭಕ್ತಾದಿಗಳನ್ನು ನಾಡಗೌಡರ ಮನೆಯವರು ಮಾತ್ರವಲ್ಲದೆ ಊರವರೆಲ್ಲ ವಿಶೇಷವಾಗಿ ಸತ್ಕರಿಸುತ್ತಾರೆ.

ದೇವಾಲಯದ ರೂಪರಚನೆಯನ್ನು ಸ್ಥೂಲವಾಗಿ ಗಮನಿಸಿದಲ್ಲಿ ಇದರ ಗರ್ಭಗೃಹವು ಸುಮಾರು ಒಂದೂವರೆ ಶತಕ ಎಂದರೆ ಹಿಂದಿನ ಶತಮಾನದ ಕಡೆಯ ಭಾಗದಲ್ಲಿ ನಿರ್ಮಾಣವಾಗಿದ್ದಿರಬೇಕು. ಈಚಿನ ಹತ್ತಿಪ್ಪತ್ತು ವರ್ಷಗಳಲ್ಲಿ ಗರ್ಭಗೃಹದ ಮುಂಭಾಗದ ಮುಖಮಂಟಪ ನಿರ್ಮಾಣವಾಗಿದೆ. ಗರ್ಭಗೃಹವನ್ನೇ ಒಂದು ಗುಹಾಂತರ ಮಂಟಪವೆಂದು ಕರೆಯುವುದಾದರೆ ಇಲ್ಲಿ ವೈಷ್ಣವ ಆಳ್ವಾರರ ವಿಗ್ರಗಳನ್ನಿಡಲಾಗಿದೆ. ಮುಖಮಂಟಪದ ಒಳಭಾಗದ ಚಾವಣಿಯಲ್ಲಿ ಪದ್ಮದ ಕೆತ್ತನೆಯಿದೆ. ನಾಗಬಂಧದ ಚಿತ್ರವನ್ನು ಬಿಡಿಸಿದೆ. ಇಲ್ಲಿನ ಎರಡು ಮಗ್ಗುಲಗಳಲ್ಲಿ ಗರುಡ ಮತ್ತು ಆಂಜನೇಯರ ವಿಗ್ರಹಗಳಿವೆ. ವಿಷ್ಣುವಿನ ದಶಾವತಾರದ ತೈಲವರ್ಣದ ಕೆಲವು ಚಿತ್ರಗಳನ್ನು ಬಿಡಿಸಿರುತ್ತಾರೆ.

ಕನಕ ನರಸಿಂಹನ ದೇವಾಲಯಕ್ಕೆ ಹೊಂದಿಕೊಂಡಂತೆ ಪಕ್ಕದ ಗುಡ್ಡದ ಮೇಲೆ ಪ್ರಾಣದೇವರ ಶಿಲ್ಪವನ್ನಿಟ್ಟಿರುತ್ತಾರೆ. ಇದಕ್ಕೆ ಸಾಧಾರಣವಾದ ಆಲಯವನ್ನು ನಿರ್ಮಿಸಿರುತ್ತಾರೆ. ಉತ್ತಮ ಸನ್ನಿಧಾನವಾಗಿದೆ. ದೇವಾಲಯದ ಕೆಳಭಾಗದಲ್ಲಿ ನಾಲ್ಕಾರು ವೃಕ್ಷಗಳಿದ್ದು ಇವು ನೆರಳು-ಗಾಳಿಗಳನ್ನು ಪೂರೈಸುತ್ತಿವೆ. ಇಲ್ಲಿಯೇ ದೇವನ ರಥವಿದೆ. ಒಟ್ಟಾರೆ ಒಂದು ಸಂಕಲ್ಪ ಮಾತ್ರದಿಂದ ನಿರ್ಮಾಣವಾಗಿರುವ ನರಸಿಂಹನ ಸನ್ನಿಧಾನವಿರುವ ಸ್ಥಳವಾಗಿ ಮುಂಡರಗಿ ಸಾಗಿಬಂದಿದೆ.

## ಕೊಪ್ಪಳ ಜಿಲ್ಲೆ

# ಕನಕಗಿರಿ

*"ಕಣ್ಣಿದ್ದವರು ಕನಕಗಿರಿ ನೋಡಬೇಕು*
*ಕಾಲಿದ್ದವರು ಹಂಪೆ ನೋಡಬೇಕು"*

- ಈ ವಾಕ್ಯಗಳು ವೇದೋಕ್ತನುಡಿಗಳಂತೆ ಭಾಸವಾಗುತ್ತದೆ. ಶಾಸನೋಕ್ತವಾದ ಮಾತುಗಳೆಂದು ನಂಬುವಂತಿರುವ ಇದರ ಯಥಾರ್ಥತೆ ಮುಖ್ಯವಾದದ್ದು. ಇಲ್ಲಿ ಉಕ್ತ ವಾಗಿರುವ ಕನಕಗಿರಿ-ಹಂಪೆ ಎರಡೂ ಸ್ಥಳಗಳನ್ನು ಕಂಡವರಿಗೆ ಇದರಲ್ಲಿ ಅಡಕವಾಗಿರುವ ಪದ ಸ್ವಾರಸ್ಯದ ಅರಿವಾಗಬಹುದೆಂದು ಹೇಳುವುದರಲ್ಲಿ ಸಂಶಯವಿಲ್ಲ. ಈ ಸ್ಥಳಗಳ ದರ್ಶನ ಮಾಡಿದವರು ಅತಿಶಯದ ವ್ಯಾಪ್ತಿಗೆ ಒಳಗಾಗದೆ ಸಹಜತೆಯ ಚಿತ್ರಣವನ್ನು ಮೂಡಿಸಿಕೊಳ್ಳಲು ಸಾಧ್ಯವಾಗುತ್ತದೆ.

ಕನಕಗಿರಿಯು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿರುವ ಚರಿತ್ರಾರ್ಹವಾದ ಸ್ಥಳ. ಇದೊಂದು ಕಾಲಕ್ಕೆ ವಿಜಯನಗರ ಅರಸರ ಸಾಮಂತರಾಗಿದ್ದ ನಾಯಕ ಕುಲದವರಿಗೆ 'ತಲೆಮಣಿ'ಯಾಗಿ ಮೆರೆದಿತ್ತು. ಆದರೆ ಈಗ ಗತಿಸಿಹೋದ ವೈಭವದ ಕುರುಹಾಗಿ ಅನಾ ದರಣೆಗೆ ಒಳಗಾದ ಸ್ಮಾರಕವಾಗಿ ಉಳಿದಿದೆ. ಪುರಾಣ-ಇತಿಹಾಸಗಳೆರಡರ ಘಟನೆಗಳನ್ನು ಪ್ರಜಾವರ್ಗಕ್ಕೆ ಸಾರಿಹೇಳುತ್ತಿರುವ ಇಲ್ಲಿನ ಸಂಗತಿಗಳು ಕುತೂಹಲಕರವಾಗಿವೆ. ಕನಕವೃಷ್ಟಿ ಯಾದ ಈ ಸ್ಥಳದ ಮೇಲೆ ಜನರ ದೃಷ್ಟಿ ಇನ್ನೂ ಹೆಚ್ಚಿನ ರೀತಿಯಲ್ಲಿ ಬೀಳಬೇಕಾದ ಅಗತ್ಯವಿರುತ್ತದೆ.

## ಸ್ಥಳದ ಹಿರಿಮೆ

ಕನಕಮುನಿಗಳು ವಾಸಿಸುತ್ತಿದ್ದ ಈ ಪ್ರದೇಶವು ಮೊದಲಿಗೆ ದೊಡ್ಡದಾದ ಅರಣ್ಯ ವಾಗಿತ್ತು. ಪುಷ್ಪ ಮತ್ತು ಜಯಂತಿ ಎಂಬ ಎರಡು ನದಿಗಳು ಇಲ್ಲಿ ಒಟ್ಟಿಗೆ ಸೇರುತ್ತವೆ. ಆನೆಗೊಂದಿ ಅರಸರ ಕೃಪೆಯಿಂದ ಈ ನೆಲದಲ್ಲಿ ದೈವಿಕವಾದ ನೆಲೆಯು ನಿರ್ಮಾಣವಾಗಿದೆ. ಕನಕಮುನಿಗಳಿಗೆ ಒಲಿದ ಭಗವಂತನ ಮಹಾತ್ಮೆಯು ಪ್ರಬಲವಾಗಿದೆ. ಹೇಮಗಿರಿ, ಸುವರ್ಣಗಿರಿ, ಕನಕಗಿರಿಗಳೆಂಬ ಅಭಿದಾನವು ಬೇರೆಬೇರೆ ಕಾಲದ ಹಂತಗಳಲ್ಲಿ ಇಲ್ಲಿಗೆ ಅನ್ವಯವಾಗುತ್ತದೆ ಎಂಬುದು ಪುರಾಣಾಧಾರದಿಂದ ತಿಳಿಯುವ ವಿಚಾರ. 'ಸ್ಕಂದ ಪುರಾಣ'ದ ನಿದರ್ಶನವನ್ನು ನೀಡಿ ಇಲ್ಲಿನ ಸ್ಥಳಮಹಿಮೆಯನ್ನು ಹೇಳಲಾಗುತ್ತಿದೆ.

ಕನಕಗಿರಿಯನ್ನು ಹಂಪೆಯ ತಲೆಬಾಗಿಲೆಂದೇ ಹೇಳುತ್ತಾರೆ. ಈ ಮಾತಿನ ಸತ್ಯಾ ಸತ್ಯತೆಗಳಿಗಿಂತಲೂ, ಇಂದಿನ ಪ್ರಾಚೀನ ಕುರುಹುಗಳನ್ನು ಹಿಡಿದು ನೋಡುವಲ್ಲಿ ಇದೊಂದು ಗತಿಸಿದ ಸಾಮ್ರಾಜ್ಯದ ತುಣುಕಾಗಿ ಕಂಡುಬರುವುದರಲ್ಲಿ ಸಂದೇಹವಿಲ್ಲ. ದೇವಾಲಯದ



ಉಗ್ರನರಸಿಂಹ, ಬೇಲೂರು



ನರಸಿಂಹಸ್ವಾಮಿ ಕಂಬ, ಬೇಲೂರು



ಉಗ್ರನರಸಿಂಹಸ್ವಾಮಿ, ಮದ್ದೂರು.



ಲಕ್ಷ್ಮೀ ನರಸಿಂಹ ಸ್ವಾಮಿ, ಅಕ್ಕಿ ಹೆಬ್ಬಾಳು

ಹೊರಪ್ರಾಕಾರವನ್ನು ಸುತ್ತುವರಿದು ಕೋಟೆಗೋಡೆಯು ನಿಂತಿದೆ. ಈ ಕೋಟೆಯ ಹೊರಗೆ ದೇವಾಲಯದ ಮುಂಭಾಗದಲ್ಲಿಯೇ ಮೂರೂ ನದಿಗಳ 'ಸಂಗಮ'ವಿದೆ. ಇದೊಂದು ಸಹಜವಾದ ಕಂದಕವನ್ನುಂಟು ಮಾಡಿರುತ್ತದೆ. ಕೋಟೆಯ ಬಾಗಿಲುಗಳನ್ನು ಹಿಡಿದು ಇದನ್ನು "ಮೂರಗಸಿಲೂರು, ಮೂರುನಾಮದ ದೇವರು" ಎಂದು ಕರೆದಿದ್ದಾರೆ. ಕೋಟೆಯ ಬಾಗಿಲಿಂದ ಒಳಗೆ ಬಂದವರಿಗೆ ಭವ್ಯವಾದ ಗೋಪುರದಿಂದ ಕೂಡಿದ ಮಹಾದ್ವಾರವು ಸ್ವಾಗತವನ್ನು ಕೋರುತ್ತದೆ.

*ಕನಕಮುನಿತಪಗೈದ ಕನಕಮಯ ಕಾಲತ್ರ*
*ದಿನಕರನ ತೇಜದಲಿ ದಿವ್ಯಕ್ಷೇತ್ರ*

- ಈ ಸಾಲುಗಳು ಸ್ಥಳೀಯ ಭಕ್ತರೊಬ್ಬರ ರಚನೆಯಾಗಿದೆ. ನೂರಾರು ರಚನೆಗಳನ್ನು ಇಲ್ಲಿನ ಜ್ಞಾನಿಗಳೊಬ್ಬರು ಮಾಡಿದ್ದು ಅದು ಬೆಳಕಿಗೆ ಬಂದಿಲ್ಲ. ಅದರ ಹಸ್ತಪ್ರತಿಯೇ ಮಾಯವಾದ ಸಂಗತಿಯನ್ನು ಅತ್ಯಂತ ವಿಷಾದದಿಂದ ಸ್ಥಳೀಯ ಪುರೋಹಿತರು ತಿಳಿಸುತ್ತಾರೆ. ದಿವಂಗತ ಜಯತೀರ್ಥರಾಜ ಪುರೋಹಿತರು ಸಹ ಈ ಸ್ಥಳದ ವಿಚಾರಗಳನ್ನು ಪುಸ್ತಕ ರೂಪದಲ್ಲಿ ಹೊರತಂದಿದ್ದಾರೆಂದು ತಿಳಿದುಬರುತ್ತದೆ. ವಿಜಯದಾಸರ ಸುಳಾದಿಗಳಲ್ಲಿ ಕನಕಗಿರಿಯ ನರಸಿಂಹನ ಸ್ತುತಿಯನ್ನು ಕಾಣಬಹುದಾಗಿದೆ. ಹರನ ಸುತನ ಪುರಾಣದಲ್ಲಿ-ಸ್ಕಂದ ಪುರಾಣದಲ್ಲಿ -ಈ ಕ್ಷೇತ್ರದ ಪ್ರಸ್ತಾಪವಿರುವುದನ್ನು ದಾಸರು ಸಾಂದರ್ಭಿಕವಾಗಿ ಸೂಚಿಸಿದ್ದಾರೆ. 'ತುಂಗಾಮಹಾತ್ಮೆಯೊಳಗೆ ವಿರಾಜಿಸಿದೆ ನೋಡಿ ಶತಅಧ್ಯಾಯ' -ಎಂಬ ದಾಸರ ಸುಳಾದಿ ಯಲ್ಲಿನ ಸಾಲುಗಳೂ ಇದಕ್ಕೆ ಆಧಾರವಾಗಿದೆ.

ಕನಕರಾಯನೆಂದು ಪ್ರಸಿದ್ಧವಾದ ನರಸಿಂಹಸ್ವಾಮಿಯ ದೇವಾಲಯವನ್ನು ಸುಮಾರು ಮೂರು-ನಾಲ್ಕು ಶತಮಾನಗಳ ಹಿಂದೆ ರಚಿಸಲಾಗಿದೆ. ಇಲ್ಲಿನ ವಿಸ್ತಾರ, ವೈಭವಗಳನ್ನು ಕಲೆಗಾರಿಕೆಯನ್ನು ದೇವಾಲಯದ ಸ್ಥೂಲವಾದ ಪರಿಶೀಲನೆಯಿಂದ ಅರಿಯಬಹುದು. ಇಲ್ಲಿನ ಗಾರೆ-ಗಚ್ಚಿನ ಕೆಲಸವು ಮನಮುಟ್ಟುವ ರೀತಿಯಲ್ಲಿದೆ. ಆದರೆ ಬಹುಪಾಲು ಹಾಳಾಗಿದೆಯೆನ್ನುವುದು ಖೇದದ ಸಂಗತಿಯಾಗಿದೆ. ಹೆಚ್ಚಿನ ಮಟ್ಟಿಗೆ ಇದರ ನಿರ್ಮಾಣವು ವಿಜಯನಗರದ ವಾಸ್ತುಶಿಲ್ಪಕ್ಕೆ ಅನುಗುಣವಾದದ್ದು, ಅದರ ಪ್ರತಿಕೃತಿಯೆಂದೂ ಹೇಳಲು ಅಡ್ಡಿಯಿಲ್ಲ.

ಆಲಯದೊಳಗೆ ಪ್ರವೇಶಿಸುತ್ತಿದ್ದಂತೆ ಒಳಪ್ರಾಕಾರದ ಹಲವು ಮಂಟಪಗಳು ಗಮನಸೆಳೆಯುತ್ತವೆ. ಶ್ರೀವೈಷ್ಣವ ಲಾಂಛನಗಳನ್ನು ಗಾರೆಯಲ್ಲಿ ನಿರ್ಮಿಸಿರುತ್ತಾರೆ. ಚತುರ್ಮುಖ ಬ್ರಹ್ಮ, ರುದ್ರದೇವರುಗಳಿಗೆ ಪ್ರತ್ಯೇಕವಾದ ಸ್ಥಾನವನ್ನು ನೀಡಲಾಗಿದೆ. ಆರಾಧ್ಯ ದೈವವಾದ ಲಕ್ಷ್ಮೀನರಸಿಂಹನ ಶಿಲಾಮೂರ್ತಿಯನ್ನು ಇಲ್ಲಿ ಸ್ಥಾಪನೆ ಮಾಡಲಾಗಿದೆ. ...ಮಂಟಪವು ದೇವರ ಕಲ್ಯಾಣೋತ್ಸವ ಮತ್ತು ಇತರ ವಿಶೇಷ ದಿನಗಳಂದು ...ಕಾದ ಸೇವಾಕಾರ್ಯಗಳಿಗೆ ಅನುಕೂಲವಾಗುವ ರೀತಿಯಲ್ಲಿ ನಿರ್ಮಾಣವಾಗಿದೆ.

ಉತ್ಸವಗಳಿಗೆ ಬಳಸುವ ಹನುಮಂತ, ಗರುಡ ಮತ್ತಿತರ ವಾಹನಗಳಿವೆ. ಅದರಲ್ಲಿಯೂ ಗರುಡ ವಾಹನವು ಉತ್ತಮ ಗುಣಮಟ್ಟವನ್ನು ಹೊಂದಿದೆ. ಗರುಡಾಳ್ವಾರರ ಸನ್ನಿಧಿ ದೇವರಿಗೆ ಎದುರಾಗಿದೆ.

## ಕಂಭಗಳ ವಿಶಿಷ್ಟತೆ

ಆಲಯದ ಮಧ್ಯರಂಗ ಅಥವಾ ನಾಟ್ಯಶಾಲೆಯು ಇಲ್ಲಿನ ಅತ್ಯಂತ ಆಕರ್ಷಕವಾದ ಮತ್ತು ಪ್ರಮುಖವಾದ ಭಾಗವಾಗಿದೆ. ಇಲ್ಲಿರುವ ಕಂಬಗಳು ವಿಜಯನಗರ ಶೈಲಿಯ ಉನ್ನತವಾದ ಪ್ರತೀಕಗಳಾಗಿ ಕಂಗೊಳಿಸುತ್ತಿವೆ. ಒಂದೊಂದು ಕಂಬವೂ ಸಹ ಸುಮಾರು ಹನ್ನೆರಡು ಅಡಿಗಳು ಎತ್ತರವಾಗಿದ್ದು, ಇದರ ಸುತ್ತಳತೆ ಸುಮಾರು ಇಪ್ಪತ್ತು ಅಡಿಗಳಿಗಿಂತ ಹೆಚ್ಚಾಗಿರಬಹುದೆಂದು ಅಂದಾಜು ಮಾಡಬಹುದು. ಇದರ ಕೆತ್ತನೆಯಲ್ಲಿ ಉತ್ಕೃಷ್ಟತೆಯಿದೆ. ಪುರಾಣ, ಭಾಗವತ, ರಾಮಾಯಣ ಪ್ರಸಂಗಗಳ ಚಿತ್ರಣವಿದೆ. ಹಂಪೆಯ ಕೃಷ್ಣಸ್ವಾಮಿ ದೇವಾಲಯವನ್ನು ಕಟ್ಟಿದ ಕಾಲದಲ್ಲಿಯೇ ಇದನ್ನೂ ಕಟ್ಟಲಾಗಿರುವುದೆಂದು ಊಹಿಸಬಹುದು. ಅಲ್ಲಿರುವಂತೆಯೇ ಇಲ್ಲಿಯೂ ಚೌಕಾಕಾರದ ಕಂಬಗಳಿರುತ್ತವೆ. ಕಂಬಗಳ ನಾಲ್ಕು ಮುಖಗಳಲ್ಲಿ ಸಾಮಾಜಿಕ ಜೀವನದ ಹಲವು ಮುಖಗಳಿರುವಂತೆ ನಿಸರ್ಗದಲ್ಲಿನ ಪ್ರಾಣಿ, ಪಕ್ಷಿ, ತರು-ಲತೆಗಳನ್ನೊಳಗೊಂಡ ಉಬ್ಬು ಶಿಲ್ಪಗಳನ್ನು ಬಿಡಿಸಿದ್ದಾರೆ. ಆನೆಗಳನ್ನು ಮೆಟ್ಟುತ್ತಿರುವ ಸಿಂಹಗಳು, ರಾವುತರು, ಯಕ್ಷ-ಯಕ್ಷಿಯರಿಂದ ಕೂಡಿದ ನಾಟ್ಯಮಂಟಪವು ಚಿತ್ತಾಕರ್ಷಕವಾಗಿದೆ.

ಮಧ್ಯರಂಗದ ಕಂಬಗಳ ಮೇಲಿರುವ ಕೆಲವು ಶಿಲ್ಪಗಳು ಹೆಸರಿಸತಕ್ಕವಾಗಿವೆ. ನರಸಿಂಹನ ವಿವಿಧ ಬಗೆಯ ರೂಪಗಳನ್ನು ಇಲ್ಲಿ ಕಾಣಬಹುದು. ಲಕ್ಷ್ಮೀನರಸಿಂಹ ಯೋಗಾನರಸಿಂಹರು ಒಂದೆಡೆಯಲ್ಲಿದ್ದರೆ, ಎರಡು ಕೈಗಳ ನರಸಿಂಹನ ಕೆತ್ತನೆಯಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ವೆಂಕಟೇಶನ ಶಿಲ್ಪವನ್ನು ಇಲ್ಲಿ ಬಿಡಿಸಲಾಗಿದೆ. ಅವತಾರಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರಾಮ, ಕೃಷ್ಣರನ್ನು ಕಾಣಬಹುದು. ಅಶೋಕವನದಲ್ಲಿನ ಸೀತೆ, ಕೃಷ್ಣನ ಗೋವರ್ಧನೋದ್ಧರಣ ಶಿಲ್ಪಗಳು ಇಲ್ಲಿನ ಆಕರ್ಷಣೆಯಾಗಿವೆ.

ನಾಟ್ಯಶಾಲೆಯ ಮತ್ತೊಂದು ಪ್ರಮುಖ ಆಕರ್ಷಣೆಯಾಗಿ ಒಳಚಾವಣಿಗೆ ಅಂಟಿಕೊಂಡಂತೆ ಮರದ ಹಲಗೆಗಳ ಆಸರೆಯನ್ನು ಬಳಸಿ ಸುತ್ತಲೂ ಬಣ್ಣದ ಗೊಂಬೆಗಳನ್ನಿಟ್ಟಿರುವುದನ್ನು ಕಾಣಬಹುದು. ಇದನ್ನು ಗಾರೆ-ಗಚ್ಚು-ವರ್ಣ, ಮರಗಳಿಂದ ನಿರ್ಮಿಸಲಾಗಿದೆ. ಕೆಲವು ಗೊಂಬೆಗಳ ಸಮೂಹವು ಏಳೆಂಟು ಅಡಿ ಅಗಲ ಮೂರು-ನಾಲ್ಕು ಅಡಿ ಎತ್ತರ ಎದೆ. ಇವುಗಳಲ್ಲಿ ಹಿರಣ್ಯಕಶಿಪುವನ್ನು ಸೀಳುತ್ತಿರುವ ನರಸಿಂಹ, ಗಿರಿಜಾಕಲ್ಯಾಣ, ವೈಕುಂಠದ ಘಟನೆಗಳು, ಸ್ಥಳೀಯ ಮಹತ್ವವನ್ನು ನಿರೂಪಿಸುವ ಪ್ರಸಂಗಗಳು ಪ್ರಮುಖವಾದ್ದೆಂದು ಹೇಳಬೇಕು.

ಮಧ್ಯರಂಗವನ್ನು ದಾಟಿ ಒಳಗಡೆಗೆ ಪ್ರವೇಶಿಸಿದರೆ ನಮಗೆ ಇಲ್ಲೊಂದು ಕೌತುಕವು ಕಾದಿದೆ. ಹಂಪೆಯ ವಿರೂಪಾಕ್ಷ ದೇವಾಲಯವನ್ನು ಸಂದರ್ಶಿಸಿದವರಿಗೆ ಅಲ್ಲಿನ ಗೋಪುರದ ನೆರಳು ಒಂದೆಡೆ ಬೀಳುವುದನ್ನು ಕಂಡ ನೆನಪಾಗಬಹುದು. ಅದೇ ರೀತಿ ಇಲ್ಲಿಯೂ ಸಹ ದಕ್ಷಿಣದ ಬಾಗಿಲಿನ ಕಡೆ ಹಾಸುಕಲ್ಲಿನ ಮೇಲೆ ಗೋಪುರದ ಪ್ರತಿಬಿಂಬವಿರುವುದು ಕಾಣುತ್ತದೆ. ಇದಲ್ಲದೆ ದೇವರಿಗೆ ಎದುರಾಗಿರುವ ಗರುಡಮಂಟಪದ ಹಿಂಭಾಗದ ಕಿಂಡಿಯಿಂದ ಸಂಕ್ರಮಣ ದಿನದಂದು ನರಸಿಂಹ ಸ್ವಾಮಿಯ ಮೇಲೆ ಸೂರ್ಯಕಿರಣವು ಬೀಳುವುದೆಂದು ಹೇಳುತ್ತಾರೆ.

## ಸಾಲಿಗ್ರಾಮ ನರಸಿಂಹ

ನರಸಿಂಹ ಸ್ವಾಮಿಯ ಅರ್ಚಾಮೂರ್ತಿಯೆಂದರೆ ಇಲ್ಲಿರುವ ಸಾಲಿಗ್ರಾಮ, ಸುಮಾರು ಒಂದು ಅಡಿ ಎತ್ತರ ಮತ್ತು ಎರಡು ಅಡಿ ಅಗಲವಿರಬಹುದಾದ ಇದರ ಮೇಲೆ ನರಸಿಂಹನ ಮುಖವಾಡವನ್ನು ತೊಡಿಸಲಾಗಿರುತ್ತದೆ. ಸಾಲಿಗ್ರಾಮ ಮೂರ್ತಿಯ ಮೇಲೆ ಶಂಖ-ಚಕ್ರ ಆಕಾರವನ್ನು ಹೋಲುವ ರಚನೆಗಳಿವೆ. ಇಡೀ ಸಾಲಿಗ್ರಾಮ ಲಿಂಗಾಕಾರವನ್ನು ಹೋಲುತ್ತದೆ.

ಇದನ್ನು ಕುರಿತು ವಿಜಯದಾಸರ ಸುಳಾದಿಯಲ್ಲಿ ಹೇಳಿದೆ-

ಧರೆಯೊಳು ಮೂರು ಲಿಂಗಾಕಾರವಾಗಿ ಶ್ರೀ
ಹರಿಯೆ ಮೆರೆವುತಿಪ್ಪ ತಿಳಿಯಬೇಕು ।
ಪರುಷ ರೂಪಾತ್ಮಕ ರೂಪಗಳೀಪರಿ
ಕರೆಸಿಕೊಂಡವು ಕೇಳಿ ನಾಮನಿತ್ಯ
ಪರಮ ಶೋಭಿತವಾದ ವಾರಣಾವತಿ ಎಂಬ
ಪುರದಲ್ಲಿ ಜಯಂತ ನಾರಸಿಂಹ
ಮರಳಿ ಲಾಲಿಸಿ ಇದನೆ ಕನಕನಾಮಕವೆನ್ನಿ
ನರಸಿಂಹನೆಂಬೋದೆ ನಿಜಕಾಣಿರೋ
ಶರಧಿ ತೀರದಲೊಂದು ಕಡೆ ಸಿಂಹಾಲಯವೆಂಬ
ಪುರದಲ್ಲಿ ನಿಂದಿಹ ನಾರಸಿಂಹನೊ
ಎರಡೊಂದು ಸ್ಥಳದಲ್ಲಿ ಪೂಜೆಗೊಳುತ ಇನಿತು
ಮೆರೆವುತಿಪ್ಪನು ನೋಡಾ ನಾರಾಯಣ ॥

ಗರ್ಭಗುಡಿಯ ಮುಂಭಾಗದ ಕೋಣೆಯಲ್ಲಿ ಉತ್ಸವಮೂರ್ತಿಗಳನ್ನಿಟ್ಟಿರುತ್ತಾರೆ. ಇದಕ್ಕೆ ವೆಂಕಟೇಶನೆಂದು ಕರೆಯುತ್ತಾರೆ. ಆದರೆ ಇದು ಕೇಶವನ ಶಿಲ್ಪವೆಂಬುದು ಸ್ಪಷ್ಟ. ಹಿಂದಿನ ಎರಡು ಕೈಗಳಲ್ಲಿ ಶಂಖ- ಚಕ್ರಗಳನ್ನೂ, ಮುಂದಿನ ಎರಡು ಹಸ್ತಗಳಲ್ಲಿ ಗದಾ- ಪದ್ಮಗಳನ್ನೂ ಸ್ವಾಮಿಯು ಧರಿಸಿದ್ದಾನೆ.

ನರಸಿಂಹದೇವಾಲಯದ ಪಕ್ಕದಲ್ಲಿರುವ ಗುಡಿಯಲ್ಲಿ ಲಕ್ಷ್ಮೀದೇವಿಯ ಮೂರ್ತಿಯನ್ನು ಪ್ರತಿಷ್ಠೆ ಮಾಡಿದ್ದಾರೆ. ಪೀಠದ ಮೇಲೆ ಕುಳಿತಿರುವ ಲಕ್ಷ್ಮಿಯ ವಿಗ್ರಹವು ಚೆಲುವಾಗಿದೆ. ನರಸಿಂಹ-ಲಕ್ಷ್ಮಿಯರಿರುವ ಗರ್ಭಗುಡಿಗಳು ಜೋಡಿ ದೇವಾಲಯದ ರಚನೆಯಂತೆ ಕಂಡುಬರುತ್ತವೆ.

## ನಾಯಕರ ಸಾಧನೆ

ಕನಕಾಚಲಸ್ವಾಮಿಯ ದೇವಾಲಯವು ಪಾಳೆಯಗಾರರ ಕಾಲದ ಸುಂದರ ಕಲಾಕೃತಿಯಾಗಿದೆ. ಇದರ ನಿರ್ಮಾಣಕ್ಕೆ ಮುಖ್ಯ ಕಾರಣನಾದ ವ್ಯಕ್ತಿ ಉಡಿಚಪ್ಪನಾಯಕ. ಈತನಿಗೆ ಇನ್ನಿಬ್ಬರು ಸೋದರರಿದ್ದರು. ಒಬ್ಬ ವೆಂಕಟಪ್ಪ ನಾಯಕ, ಮತ್ತೊಬ್ಬ ಕನಕಪ್ಪ ನಾಯಕ. ಉಡಿಚ ನಾಯಕನ ರಾಣಿ ಲಕ್ಷ್ಮೀದೇವಿ, ತಾಯಿ ಅಚ್ಚಮ್ಮ. ಈ ಐದು ಜನರ ವಿಗ್ರಹಗಳನ್ನು ಒಟ್ಟಾಗಿ ದೇವಾಲಯದ ಹೊರಗಡೆಯಿರುವ ಮತ್ತೊಂದು ಪ್ರಶಸ್ತವಾದ ಕಟ್ಟಡದಲ್ಲಿಡಲಾಗಿದೆ. ಈ ಮೂರ್ತಿಗಳನ್ನು ನೋಡುತ್ತಿದ್ದಂತೆ ಪಾಳೆಯಗಾರರ ಗಂಭೀರ ನಿಲುವು, ಉನ್ನತ ಮೈಲಕ್ಷಣಗಳು ಮನವರಿಕೆಯಾಗದೆ ಹೋಗುವುದಿಲ್ಲ. ಇದನ್ನು ಸಮಪ್ರಮಾಣದಲ್ಲಿ ಕಡೆಯಲಾಗಿದ್ದು ಶಿಲ್ಪಿಯ ಕೈಚಳಕ ಮತ್ತು ಆತನ ಕಲೆಗಾರಿಕೆಯ ಉತ್ತಮ ರೀತಿಯನ್ನು ಪ್ರದರ್ಶಿಸುವಂತಿದೆ. ಮಾನವ ರೂಪಗಳನ್ನು ಕಲ್ಲಿನಲ್ಲಿ ಕಡೆದಾಗ ಸಹಜತೆ, ಸ್ಪಷ್ಟತೆಗಳನ್ನು ತರಲು ಸಾಧ್ಯವೆಂಬುದನ್ನು ಈ ಶಿಲ್ಪಗಳು ಪ್ರದರ್ಶಿಸುತ್ತಿವೆ. ಕಟ್ಟಡದ ಹೊರಭಾಗದಲ್ಲಿ ಸವಾರಿ ಭಂಗಿಯಲ್ಲಿರುವ ಬೇಟೆಗಾರನ ವಿಗ್ರಹವಿದೆ. ಇದರಲ್ಲಿ ಚೆಲುವಿನ ಗುಣವು ಸ್ಪಷ್ಟಗೊಂಡಿರುತ್ತದೆ. ಇದೇ ರೀತಿಯ ಹಲವಾರು ಕಲ್ಲಿನ ಶಿಲಾಮೂರ್ತಿಗಳನ್ನು ದೇವಾಲಯದ ಒಳಭಾಗದಲ್ಲಿ ಕಾಣಬಹುದು. ಆದರೆ ಇವುಗಳ ಕೆಲವೊಂದು ಭಾಗಗಳು ಹಾಳಾಗಿವೆ. ಶಿಲ್ಪಸಂಗ್ರಹಾಲಯಕ್ಕೆ ಇವು ಮೂಲಸಾಮಗ್ರಿಯಾಗಬಹುದೆಂದು ಅಭಿಪ್ರಾಯಪಡಬಹುದು.

ಗೋಕರ್ಣದ ಗಣಪತಿ, ಶೃಂಗೇರಿಯ ಶಾರದಾಮಂದಿರಗಳನ್ನು ಮಹಾದ್ವಾರದ ಎಡ-ಬಲಭಾಗಗಳಲ್ಲಿ ಕಾಣಬಹುದು. ಕನಕಗಿರಿಕ್ಷೇತ್ರವನ್ನು ಆ ಪುಣ್ಯಸ್ಥಳಗಳಿಗೆ ಸಮನಾಗಿ ಪರಿಗಣಿಸಲಾಗುವುದು. ಗಣೇಶನ ಮೂರ್ತಿಯು ಸುಂದರವಾಗಿರುವುದಲ್ಲದೆ ಉನ್ನತವಾದ ಆಕಾರವನ್ನು ಹೊಂದಿದೆ. ಸುಮಾರು ಮೂರುವರೆ ಅಡಿಗಳಷ್ಟು ಎತ್ತರವಾಗಿರುವ ಶಿಲ್ಪದ ಕೆತ್ತನೆಯಲ್ಲಿ ಕೌಶಲ್ಯವಿದೆ. ಶಾರದೆಯು ಜ್ಞಾನದಾಯಿನಿಯಾಗಿ ಇಲ್ಲಿ ಶೋಭಿಸುತ್ತಿದ್ದಾಳೆ. ಮನೋಹರರೂಪಿನಿಂದ ಕೂಡಿದ ವಿಗ್ರಹವು ಮನಸ್ಸು-ಬುದ್ಧಿಗಳಿಗೆ ಪ್ರಚೋದನೆಯನ್ನು ನೀಡುವಂತಿದೆ. ಇಲ್ಲಿಯೇ ಬಲಭಾಗದಲ್ಲಿ ಶಾರದೆಯ ಗುಡಿಯ ಹಿಂಭಾಗದಲ್ಲಿ ಮಾರುತಿಯ ಮಂದಿರವಿದೆ. ವಿಶಾಲವಾದ ಸ್ಥಳದಲ್ಲಿ ಎರಡು-ಮೂರಡಿಗಳ ಎತ್ತರದ ಪೀಠದಮೇಲೆ ಕೈಜೋಡಿಸಿ ನಿಂತಿರುವ ಆಳೆತ್ತರಕ್ಕಿಂತ ಮಿಗಿಲಾದ ಸಂಜೀವರಾಯರ ವಿಗ್ರಹವನ್ನು ಸ್ಥಾಪಿಸಿದ್ದಾರೆ. ಶ್ರೀರಾಮದೂತನಾದ ಈತನು ಕಿಷ್ಕಿಂಧೆಗೆ ಸಮೀಪವಾದ ಈ ಸ್ಥಳದಲ್ಲಿ ನೆಲೆಸಿರುವುದು ರಾಮಾಯಣಕ್ಕೊಂದು ಅರ್ಥಪುಷ್ಟಿಯನ್ನು ನೀಡುವಂತಿದೆ.

## ರಂಗಿನ ತೇರು

'ಕನಕನ ತೇರು' ತುಂಬ ವಿಜೃಂಭಣೆಯಿಂದ ಸಾಗುವ ಪರಿ ವಿಶಿಷ್ಟವೆಂದೇ ಹೇಳಬೇಕು. ಅದ್ಭುತವಾದ ಕಲೆಗಾರಿಕೆಯಿಂದ ಕೂಡಿದ ಈ ಮರದ ರಥವು ಇಂದು ಸಹಜವಾಗಿಯೇ ಇಪ್ಪತ್ತು ಅಡಿಗಳ ಎತ್ತರವಿದೆ. ಇದರ ಮೇಲೆ ಇಷ್ಟೇ ಪ್ರಮಾಣ ಎತ್ತರವನ್ನು ಹೆಚ್ಚಿಸಲಾಗುತ್ತದೆ. ಬಣ್ಣಬಣ್ಣದ ಬಟ್ಟೆಗಳು, ಹೂಗಳು, ಗೊಂಬೆಗಳಿಂದ ಇದನ್ನು ಅಲಂಕರಿಸುತ್ತಾರೆ. ಈ ಸುತ್ತಮುತ್ತಲಿನ ಪ್ರದೇಶಕ್ಕೆ ಇದೇ ವೈಭವವಾದ ರಥವೆಂಬುದಾಗಿ ಹೇಳಬಹುದು. ರಥದ ಗಾಲಿಗಳ ವ್ಯಾಸವು ಹನ್ನೆರಡು ಅಡಿಗಳಷ್ಟು ವಿಶಾಲವಾಗಿರುತ್ತದೆ.

ಆರು ಚಕ್ರದ ರಥದ ಮೇಲೆ ವೆಂಕಟೇಶನ ಉತ್ಸವವನ್ನು ಫಾಲ್ಗುಣ ಮಾಸದಲ್ಲಿ ನೆರವೇರಿಸುತ್ತಾರೆ. ಶುದ್ಧ ತ್ರಯೋದಶಿಯಿಂದ ಆರಂಭವಾಗುವ ರಥೋತ್ಸವ ಕೈಂಕರ್ಯಗಳಿಗೆ ಬಹುಳ ಪಂಚಮಿಯು ಪ್ರಮುಖವಾದ ದಿವಸವಾಗಿದೆ. ಅಂದು ನಡೆಯುವ ಗರುಡೋತ್ಸವ (ಇದನ್ನು ಕಲ್ಯಾಣೋತ್ಸವ ಎಂದಿದೆ) ಸೇವೆಯು ತುಂಬ ವಿಜೃಂಭಣೆಯಿಂದ ನೆರವೇರುತ್ತದೆ. ಗರುಡೋತ್ಸವವು ನಡೆಯುವ ಸಂದರ್ಭದಲ್ಲಿ ಉತ್ಸವದ ಮುಂದೆ ಸಾವಿರಾರು ಜನರು ತಮ್ಮ ಭಕ್ತಿ-ಉತ್ಸಾಹ- ಸಂಭ್ರಮಗಳನ್ನು ವ್ಯಕ್ತಪಡಿಸುವಂತೆ ಕರ್ಪೂರದ ದೀವಟಿಗೆಗಳನ್ನು ಉರಿಸುತ್ತಾರೆ. ಸಪ್ತಮಿಯಂದು ರಥಾರೋಹಣವು ನೆರವೇರುತ್ತದೆ. ಇಲ್ಲಿನ ರಥದ ಮೇಲೆ ಮನುಷ್ಯ ಪ್ರಮಾಣದ ದ್ವಾರಪಾಲಕರು, ಗರುಡ-ಹನುಮಂತರ ಕಾಷ್ಠಶಿಲ್ಪಗಳು ವಿರಾಜಿಸುತ್ತವೆ. ಇವುಗಳ ಜೊತೆಯಲ್ಲಿ ಚೆಲುವಾಗಿರುವ ಗೊಂಬೆಗಳು ರಥಕ್ಕೆ ಶೋಭೆಯನ್ನು ತರುತ್ತವೆ.

ಕನಕಗಿರಿಯ ದೇವಾಲಯದ ಸಾಲುಮಂಟಪಗಳ ನೋಟವು ಕಣ್ಣಿಗೆ ಮುದವನ್ನು ನೀಡುವಂತಿರುತ್ತದೆ. ಜಾತ್ರೆಯ ಸಮಯದಲ್ಲಿ ದೇವರ ಉತ್ಸವಗಳನ್ನು ಕಾಣುವುದಕ್ಕೆ ಭಕ್ತರಿಗೆ ಇವು ಆಶ್ರಯವನ್ನು ಒದಗಿಸುತ್ತಿವೆ. ಸುಮಾರು ಸಾವಿರ ಜನರು ಒಮ್ಮೆಲೇ ಕುಳಿತುಕೊಳ್ಳುವುದಕ್ಕೆ ಅನುಕೂಲವಾಗಿದೆ. ಈ ದೇವಾಲಯದ ರಚನೆಯ ವೈಶಿಷ್ಟ್ಯಗಳ ಒಟ್ಟೊಂದಾಗಿ ಇದನ್ನು ಕಾಣಬಹುದು. ಮಂಟಪಗಳ ನಡುವೆ ಕಲಶಪ್ರಾಯವಾದ ಗೋಪುರಗಳು ಮನಸೆಳೆಯುತ್ತವೆ.

ಕನಕಗಿರಿಯ ಕನಕಾಚಲಪತಿಯ ಮಹಿಮೆಯು ಯಾರನ್ನಾದರೂ ಕೈಬೀಸಿ ಕರೆಯುವಂತಿದೆ. ಕೊಪ್ಪಳದಿಂದಾಗಲಿ, ಗಂಗಾವತಿಯ ಮೂಲಕವಾಗಲಿ ಇಲ್ಲಿಗೆ ಬಂದುಹೋಗಲು ವಾಹನಸೌಕರ್ಯವಿದೆ. ನರಸಿಂಹನ ಭಕ್ತರು ಈ ನಾಡಿನ ಮೂಲೆಮೂಲೆಗಳಿಂದ ಬಂದು ದರ್ಶನವನ್ನು ಪಡೆದು ಕೃತಾರ್ಥರಾಗುತ್ತಾರೆ. ಕನಕಸ್ವಾಮಿಯ ಮಹಿಮೆ ಪ್ರಭಾವಗಳಿಂದ ಸುತ್ತಲಿನ ಕೆಲವೊಂದು ಸ್ಥಳಗಳಲ್ಲಿ ಸ್ವಾಮಿಯ ಹೆಸರಿನಲ್ಲಿ ಪ್ರತ್ಯೇಕ ಸಾನ್ನಿಧ್ಯಗಳನ್ನು ನಿರ್ಮಿಸಲಾಗಿದೆ.

## ಬಿಜಾಪುರ ಜಿಲ್ಲೆ

# ತೊರವಿ

*ಶ್ರೀಮತ್ ವೃಂದಾರಕ ವೃಂದವಂದಿತ ಪದದ್ವಂದ್ವ*
*ಶೋಭಿತ ಇಂದಿರಾರಮಣ ತ್ವರಿತಾಲಯಕ್ಷೇತ್ರಗುಪ್ತ*
*ಗಂಗಾತೀರ ಹರಿತೀರ್ಥವರಗುಹಾವಾಸ ರಾಜಾಧಿರಾಜ*
*ಶ್ರೀ ಲಕ್ಷ್ಮೀನರಸಿಂಹ ಸ್ವಾಮಿನ್ ಭೋ ಪರಾಕ್*

ಈ ಜಯಗೀತೆಯು ಪಾತಾಳದಲ್ಲಿರುವಂತೆ ಭಾಸವಾಗುತ್ತಿರುವ ಲಕ್ಷ್ಮೀನರಸಿಂಹನ ಸನ್ನಿಧಿಯಲ್ಲಿ ಭಕ್ತರಿಂದ ಮೊಳಗುತ್ತಿರುವುದು. ಅಂದು ಈ ದೇವಾಲಯಕ್ಕೆ ಸಮೀಪದ 'ಸಂಗೀತ ಮಹಲಿ'ನಲ್ಲಿ ಧಾರೆಯಾಗಿ ಹರಿದ ನಾದತರಂಗವು ನೆಲಕಚ್ಚಿ ಹಾಳಾಗಿರುವ ಭವ್ಯ ಕಟ್ಟಡದ ಇಟ್ಟಿಗೆಗಾರೆಗಳ ಸಂದುಗೊಂದುಗಳಲ್ಲಿ ಬಂಧಿತವಾಗಿರಬಹುದು. ಭವಬಂಧನ ವನ್ನು ದಾಟಿಸುವಂತಹ ಸ್ವಾಮಿಯ ಸನ್ನಿಧಾನವೊಂದೆಡೆಯಿರುವುದಾದರೆ ಮುದುಡಿದ ಮನಸ್ಸನ್ನು ಅರಳಿಸುವಂತಹ ಗಾನದ ಮಹಿಮೆ ಮತ್ತೊಂದೆಡೆ.

ಈ ಮೇಲಿನ ವಿವರಣೆ 'ನವರಸಪುರವಾದ' ಇಂದಿನ ಶ್ರೀಕ್ಷೇತ್ರ ತೊರವಿಗೆ ಸರ್ವಥಾ ಅನ್ವಯವಾಗಬಹುದೆಂದು ಒಪ್ಪಿಕೊಳ್ಳಬಹುದು. ದುಷ್ಟಶಿಕ್ಷಕ, ಶಿಷ್ಟರಕ್ಷಕನಾದ ಲಕ್ಷ್ಮೀ ನರಸಿಂಹನು ಐತಿಹಾಸಿಕವಾದ ತೊರವಿಯಲ್ಲಿ ಅನಾದಿ ಕಾಲದಿಂದ ನೆಲೆಸಿದ್ದಾನೆ. ವಿಶ್ವಮನ್ನಣೆಗೆ ಪಾತ್ರವಾದ ಬಿಜಾಪುರಕ್ಕೆ ಅತಿ ಸಮೀಪದಲ್ಲಿರುವ ಈ ಪಾವನವಾದ ನಾರಸಿಂಹ ಕ್ಷೇತ್ರಕ್ಕೆ ಪೌರಾಣಿಕ ನೆಲೆಗಟ್ಟಿರುವುದನ್ನು ಅರಿಯಬೇಕಾಗಿದೆ. ಹಾಗೆಯೇ ಸಾಹಿತ್ಯಕ ಸ್ವಾದವನ್ನು ಇಲ್ಲಿ ಕಾಣಬಹುದಾಗಿದೆ.

ಬಿಜಾಪುರದಿಂದ ಅಥಣಿಗೆ ಹೋಗುವ ದಾರಿಯಲ್ಲಿ ಸುಮಾರು ಐದು ಕಿಲೋ ಮೀಟರ್ ಸಮೀಪದಲ್ಲಿದೆ ತೊರವಿ. ಸಾರಿಗೆ ವಾಹನ ಸೌಕರ್ಯವಿದೆ. ಇದು ಹಿಂದೆ 'ನವಾಲ್ಲಾಖಪುರ' ಎಂದರೆ ಲಕ್ಷಮನೆಗಳಿಂದ ಕೂಡಿದ ಜನಜಂಗುಳಿಯಿಂದ ಕೂಡಿದ ನಾಗರಿಕತೆ-ಸಂಸ್ಕೃತಿ, ಸಂಗೀತ-ಸಾಹಿತ್ಯಗಳ ಸಮಾರಾಧನೆ ಒದಗಿಸುತ್ತಿದ್ದ ಪ್ರಸಿದ್ಧವಾದ ಸ್ಥಳ. ಆದರೆ ಇಂದು ಕೇವಲ ಆಸಕ್ತರಿಗೆ, ಅಭಿಮಾನಿಗಳಿಗೆ, ಆರಾಧಕರಿಗೆ ಮಾತ್ರ ಕಾಣು ತ್ತಿರುವ ಸಣ್ಣ ಗ್ರಾಮ. ಅನೇಕರು ಬಿಜಾಪುರದ 'ಗೋಲಗುಂಬಜ' 'ಇಬ್ರಾಹಿಂ ರೋಜ'ಗಳನ್ನು ಮಾತ್ರ ಕಂಡು ಹೋಗುತ್ತಾರೆ. ಆದರೆ ಇಲ್ಲಿರುವ ಸಂಗೀತ ಮಹಲ್ ಆಗಲಿ ನರಸಿಂಹನ ನೆಲೆಯನ್ನಾಗಲಿ ಕಾಣಲು ಹಾತೊರೆಯುವುದಿಲ್ಲ. ತೊರವಿ ಅವರ ಮನಸ್ಸಿಗೆ ಬರುವುದಿಲ್ಲ. ಅದಿಲ್‌ಷಾಹಿಗಳ ಆಡಳಿತ ಕೇವಲ ಇಬ್ರಾಹಿಂರೋಜಗಳಿಗಾಗಿದ್ದುದಂತೂ ಖಂಡಿತವಾಗಲ್ಲ ಎಂಬುದು ವಿಚಾರ ಮಾಡಬೇಕಾದ ಅಂಶವೆ ಆದೀತು. ಕೆಲವು ಕಾಲ ತೊರವಿಯು ರಾಜಧಾನಿಯಾಗಿ ಇದ್ದಿರಬೇಕು. ಇಲ್ಲಿ ಕಣ್ಣು ಕಾಣುವಷ್ಟು ದೂರಕ್ಕೆ ಮುರಿದ ಕಟ್ಟಡಗಳು,

ಹಾಳಾದ ಮುಸ್ಲಿಂ ಶೈಲಿಯ ಸಣ್ಣಪುಟ್ಟ ಗುಂಬಜ್‌ಗಳು ಕಂಡುಬರುತ್ತವೆ. ನವರಸಪುರದ ಸಮೀಪದಲ್ಲೆಲ್ಲೋ ಗೋಳಗುಮ್ಮಟದ 'ಮಾಡೆಲ್' ಸಹ ಇದೆಯೆಂದು ಸಂಶೋಧಕರು ಅಭಿಪ್ರಾಯವಿದ್ದಂತಿದೆ. ಈ ಹಿನ್ನೆಲೆಯ ತೊರವಿಯಲ್ಲಿ ಲಕ್ಷ್ಮೀನರಸಿಂಹದೇವಾಲಯವು ಗಮನ ಸೆಳೆಯುತ್ತದೆ.

## ಆಲಯ ಪ್ರವೇಶ

ದೇವಾಲಯದ ಮಹಾದ್ವಾರವನ್ನಾಗಲಿ, ಸುತ್ತಲಿನ ಪ್ರದೇಶವನ್ನಾಗಲೀ ನೋಡಿದ ವರಿಗೆ ಒಂದು ಪ್ರಶ್ನೆ ಅಂತರಂಗದಲ್ಲಿ ಉಳಿಯಬಹುದು. ಭಗವಂತನನ್ನು ನೆಲಮಾಳಿಗೆಯಲ್ಲಿ ಬಂಧಿಸಿಟ್ಟಿರುವಂತೆ ಈ ಪ್ರಶ್ನೆಯನ್ನು ಸಹ ಬಂಧಿಸಿಡಬೇಕಾದೀತು. ಇದು ಏಕೆ ಎಂಬುದಷ್ಟೆ. ಮಹಾದ್ವಾರದ ಮೇಲೆ ಅವತಾರ ಮೂರ್ತಿಗಳನ್ನು ಅಲಂಕರಿಸಿಡಲಾಗಿದೆ. ಒಳಗೆ ಬಂದ ಕೂಡಲೆ ಬಲಭಾಗಕ್ಕೆ ದೊಡ್ಡದೊಂದು ಹಜಾರ. ಅನೇಕ ವರ್ಷಗಳಿಂದ ನಡೆದು ಬಂದ ಜ್ಞಾನಸತ್ರದ ಹೃದಯಭಾಗ. ಇಲ್ಲಿಯೇ ಎಡಗಡೆಗೆ ಎತ್ತರವಾದ ಜಗುಲಿ. ದೇವರ ಮಹಿಮೆ, ಭಕ್ತರ ಭಾವುಕ ಸಾಮಗ್ರಿಗಳನ್ನು ಪೂರೈಸುವ ಸಲುವಾಗಿ ಇಡಲಾದ ಸಾಮಗ್ರಿ ಭಂಡಾರ. ಇಲ್ಲಿಂದ ಒಳಗೆ ಕಾಲಿಡುತ್ತಿದ್ದಂತೆ ಕಮಾನುಗಳಾಗಿ ವಿಂಗಡಿಸಿದ ಭಾಗಗಳು. ಎದುರಿಗೊಂದು ಗದ್ದುಗೆ. ಅದರ ಮೇಲೆ ಮುಖ್ಯಪ್ರಾಣದೇವರು. ಹಾಗಾದರೆ ದೇವರ ಸನ್ನಿಧಿಯೆಲ್ಲಿ?

ಮೂಲೆಯಲ್ಲೊಂದು ಪ್ರವೇಶದ್ವಾರವಿದೆ. ಅದು ಹೊರನೋಟಕ್ಕೆ ಸಾಮಾನ್ಯ ವಾದೊಂದು ಬಾಗಿಲಂತೆ ಕಾಣುತ್ತದೆ. ಆದರೆ ಅದು ಆ ಮಹಿಮಾವಂತನ ಸನ್ನಿಧಿಗೆ ಕರೆ ದೊಯ್ಯುವ 'ಸಾಧನ'ವೆಂದು ಸ್ಥೂಲನೋಟಕ್ಕೆ ಹೊಳೆದಿರುವುದಿಲ್ಲ. ತಲೆತಗ್ಗಿಸಿ ಬನ್ನಿ ಎಡಕ್ಕೆ ನಾಲ್ಕು ಮೆಟ್ಟಿಲಿಳಿದು ಮುಂದೆ ಸಾಗಿ ಮತ್ತೆ ಎಡಕ್ಕೆ ಹೊರಳಿ ಸುರಂಗದಲ್ಲಿ ನಿಮ್ಮನ್ನು ಸಿಲುಕಿಸಿಕೊಂಡು ಬಲಕ್ಕೆ ತಿರುಗಿದರೆ ಎದುರಾಗಿ ಮೊದಲು 'ರುದ್ರ'ದೇವರ ದರ್ಶನ. ಬಲಕ್ಕೆ ಕಣ್ಣು ಹರಿಸಿ ದರೆ ಸಿಕ್ಕಿನಿಂದ ನಿಮ್ಮನ್ನು ಮುಕ್ತಿಗೊಳಿಸುವಂತೆ ಕಾಣುತ್ತಿರುವ ಮಂಗಳರೂಪಿಯಾದ ಮಹಿಮಾಸ್ವರೂಪಿ ನರಸಿಂಹ. 'ಗುಹಾದೇವಾಲಯ'ಗಳಿಗೆ ಹೋಲಿಕೆ ಯಾದ ರಚನೆಯಿಂದ ಕೂಡಿದ ಈ ಅರ್ಚಾವತಾರಿಯ ಮೂಲರೂಪವನ್ನು ಸುಮಾರು ಒಂದೂವರೆ-ಎರಡಡಿ ಎತ್ತರದ ವೇದಿಕೆಯಮೇಲೆ ಪ್ರತಿಷ್ಠೆ ಮಾಡಲಾಗಿರುತ್ತದೆ. ಮೂಲ ವಿರಾಟ್‌ರೂಪವು ಮೂರು ಅಡಿಗಳಿಗೂ ಸ್ವಲ್ಪ ಮಿಗಿಲಾಗಿರಬಹುದು. ಉತ್ತರಾಭಿಮುಖವಾಗಿ ರುವ ಈ ಸ್ವಾಮಿಯ ಕೃಪಾಪೂರಿತದೃಷ್ಟಿಯು ಭಕ್ತರ ಮೇಲೆ ಬೀಳುತ್ತದೆ.

## ದಿವ್ಯವಿಗ್ರಹ

ಅರ್ಚಾವತಾರಿಯಾದ ಈ 'ಮೂಲ ಬೇರದ' ಪ್ರತಿಮಾ ಲಕ್ಷಣವು ವಿಶಿಷ್ಟವಾಗಿದೆ. ಪ್ರಮಾಣಬದ್ಧವಾಗಿ ನಿರ್ಮಾಣ ಮಾಡಿರುವ ದಿವ್ಯವಿಗ್ರಹದ ಅವಗಾಹನೆ ಮಾಡಿದವರಿಗೆ

ಅನೇಕ ಕುತೂಹಲವಾದ ಸಂಗತಿಗಳು ಗೋಚರವಾಗುತ್ತವೆ. ತನ್ನ ಎಡಗಾಲನ್ನು ಮಡಚಿ ಬಲಗಾಲನ್ನು ಕೆಳಗೆ ಇಳಿಬಿಟ್ಟಂತೆ ಕಾಣುವ ಸ್ವಾಮಿಯು ತನ್ನ ತೊಡೆಯ ಮೇಲೆ ಹಿರಣ್ಯ ಕಶಿಪುವನ್ನು ಮಲಗಿಸಿಕೊಂಡು ತನ್ನ ಕೂರುಗುರುಗಳಿಂದ ಅವನ ಹೊಟ್ಟೆಯನ್ನು ಸೀಳಿ ಕರುಳಿನ ಮಾಲೆಯನ್ನು (ಧರಿಸಿಕೊಂಡಿರುವ ಅಥವಾ) ಅದನ್ನು ಮೇಲಕ್ಕೆಳೆದಿರುವ ದೃಶ್ಯವು ಒಂದು ಕ್ಷಣ ತಲ್ಲಣಗೊಳಿಸುತ್ತದೆ. ಅಷ್ಟಭುಜನಾದ ಸ್ವಾಮಿಯ ಉಳಿದ ಆರು ಕೈಗಳಲ್ಲಿ ಆಯುಧಗಳು ಹೊಳೆಯುತ್ತಿವೆ. ವಿಗ್ರಹದ ಸುತ್ತಲೂ ಪ್ರಭಾವಳಿಯಿದೆ. ಇದರಲ್ಲಿ ಉಳಿದ ಅವತಾರಗಳನ್ನು ಬಿಡಿಸಲಾಗಿದೆ.

ನರಸಿಂಹನ ಉಗ್ರಸ್ವಭಾವವನ್ನು ಉಪಶಮನಗೊಳಿಸಲು ಆತನ ತೊಡೆಯೇರಿದವಳು ಮಹಾಲಕ್ಷ್ಮಿ. ಕೆಲವು ಮೂರ್ತಿಗಳು ಯೋಗಾ ನರಸಿಂಹನಾಗಿದ್ದಾಗ ಅಲ್ಲಿ ಲಕ್ಷ್ಮಿಯ ಪ್ರಸ್ತಾಪ ಅನಗತ್ಯವಾದೀತು. ಲಕ್ಷ್ಮೀನರಸಿಂಹನೆಂಬ ಕಡೆ ಅದರರ್ಥ ಸುಸ್ಪಷ್ಟವಾಗಿಯೇ ಇದೆ. 'ಉಗ್ರನರಸಿಂಹ'ನೆಂಬ ಬಹುಶಃ ನಮ್ಮ ಚಿಂತನೆಯ ಎಲ್ಲೆಯನ್ನು ದಾಟಿ ಹೋಗಬಹುದೇನೋ (ಹಂಪೆಯ ನರಸಿಂಹನ ವಿಚಾರ) ಅಂತೂ ಲಕ್ಷ್ಮೀದೇವಿಯು ನರಸಿಂಹನೊಂದಿಗೆ ಇರಬೇಕಾದವಳಲ್ಲವೆ? ಸಾಮಾನ್ಯವಾಗಿ ಈಕೆಯ ಸ್ಥಾನ ವಾಮಾಂಕ. ಆದರೆ ತೊರವಿಯ ನರಸಿಂಹನ ಮೂರ್ತಿಯಲ್ಲಿ ಈ ತಾಯಿ ದೇವರ ಬಲಕಾಲಿನ ಬಳಿಯಿರುವುದು ವಿಶೇಷ ಎಂದೆನ್ನಬಹುದೇನೋ!.... ದೇವರ ಹಿಂಬದಿ ಚಕ್ರವು ನಮ್ಮ ಪಾಪಗಳೆಂಬ ಕತ್ತಲೆಯನ್ನು ಕತ್ತರಿಸುವ ಸಂಕೇತ.

ತೊರವಿ ನರಸಿಂಹನ ಪ್ರತಿಷ್ಠಾಪನೆಯ ಬಗೆಗಿರುವ ಐತಿಹ್ಯವು ಹೀಗಿದೆ. ಈ ಮೂರ್ತಿಯು ಇಲ್ಲಿನ ಸನ್ನಿಧಾನದಲ್ಲಿ ನೆಲೆಗೊಳ್ಳುವ ಮುಂಚೆ ಈ ಸ್ಥಳದಲ್ಲಿ ಸಾಲಿಗ್ರಾಮ ಮಾತ್ರವಿತ್ತೆಂದು ಹೇಳುತ್ತಾರೆ. ಅದಕ್ಕೆ ಪೂಜೆ-ನೈವೇದ್ಯಗಳಲ್ಲಿ ಉಂಟಾಗಬಹುದಾದ ಕೊರತೆಯನ್ನೂ ಮನಗಂಡು ಸಾಲಿಗ್ರಾಮವನ್ನು ಕೃಷ್ಣಾನದಿಯಲ್ಲಿ ಮುಳುಗಿಸಿ ಅದು ಹಾಗೆಮುಳುಗಿದ ನಂತರ ಈ ನದಿಯ ದಡದಲ್ಲಿಯೇ ಇದ್ದ ಚಿಮ್ಮಲಗಿರಿಯಲ್ಲಿ ದೊರೆತ ಈ ಆಕರ್ಷಕ ಅರ್ಚಾ ಮೂರ್ತಿಯನ್ನು ತಂದು ಪ್ರತಿಷ್ಠೆ ಮಾಡಲಾಯಿತಂತೆ. ಇದು ದೊರೆತ ಸ್ಥಳದಲ್ಲಿ ಹಸಿಹುಲ್ಲಿಗೆ ಬೆಂಕಿ ಹೊತ್ತಿಕೊಂಡಿತು. ದೇವರ ಅರ್ಚನೆ ಮಾಡಿದ ಗಂಧ-ತುಲಸಿಗಳು ಬಾಡದಂತಿದ್ದವು. ಹೀಗೆ ಇಲ್ಲಿ ಸ್ಥಾಪನೆಯಾದ ಮೂರ್ತಿಯನ್ನು ದೂರ್ವಾಸ ಮಹರ್ಷಿಗಳು ಪೂಜೆ ಮಾಡುತ್ತಾರೆಂಬ ಪೌರಾಣಿಕ ಹಿನ್ನೆಲೆಯಿದೆ. ದೂರ್ವಾಸರು ರುದ್ರಾಂಶ ಸಂಭೂತರಾದ ಕಾರಣ 'ರುದ್ರ'ದೇವರ ಸನ್ನಿಧಿ. ಇದನ್ನು ಭೀಮಾಶಂಕರರೆಂದು ಕರೆಯುತ್ತಿದ್ದಾರೆ. ಮಾಧ್ವ ಸಂಪ್ರದಾಯದ ಜನಕ್ಕೆ ಶಿವನು ರುದ್ರರೂಪನಾಗಿ ಕಾಣುತ್ತಾನೆ. ಹೀಗಾಗಿ ಅವರ ಆರಾಧನೆಗೊಳಪಟ್ಟ ಶಿವನ ಹೆಸರು 'ರುದ್ರ'ನಾಗಿ ಪರಿವರ್ತನೆಗೊಳ್ಳುತ್ತದೆ.

ನೃಸಿಂಹದೇವರ ಆಲಯಕ್ಕೆ ಪಶ್ಚಿಮದಲ್ಲಿ ನೃಸಿಂಹ ತೀರ್ಥವಿದ್ದು ಇಲ್ಲಿ ಗಂಗೆಯು ಗುಪ್ತಗಾಮಿನಿಯಾಗಿ ಹರಿಯುತ್ತಿರುವಳಂತೆ. ಈ ಜಲವು ಸ್ವಾಮಿಯ ಅಭಿಷೇಕಾದಿಗಳಿಗೆ ಶ್ರೇಷ್ಠವೆಂಬ ನಂಬಿಕೆ ಬೆಳೆದು ಬಂದಿದೆ. ಷೋಡಶೋಪಚಾರ, ಪವಮಾನಸೂಕ್ತಗಳು,

ಅರ್ಚನೆಗಾಗಿ ಅನೇಕ ಮಾಧ್ವ ಸಂಪ್ರದಾಯ ಪದ್ಧತಿ ಅನುಸರಿಸಲಾಗುತ್ತಿದೆ. ಇಂತಹ ದಿವ್ಯ ಮಾಹಿಮಾವಂತನ ಸನ್ನಿಧಿಯಲ್ಲಿ ಕುಮಾರ ವಾಲ್ಮೀಕಿಯು ತನ್ನ 'ತೊರವೆ ರಾಮಾಯಣ' ಬರೆದಿರುತ್ತಾನೆ. ಅದರ ತಾಡವಾಳೆ ಪ್ರತಿ ಮತ್ತು ನರಹರಿಯ ಚಿತ್ರಗಳನ್ನು ಪೂಜಾರ್ಹ ವಾಗಿಡಲಾಗಿದೆ. ನೃಸಿಂಹ ಜಯಂತಿಯಂದು ವಿಶೇಷ ಉತ್ಸವಾದಿ ನೆರವೇರುತ್ತವೆ. ಆ ಸಂದರ್ಭದಲ್ಲಿನ ಜನಜಂಗುಳಿ ಅಪಾರ. ಭಕ್ತರಸಂಖ್ಯೆ ಅಸಂಖ್ಯಭಕ್ತಿಯ ಹೊಳೆ ಅಸದಳ. ಇಂತಹ ತೊರವೆ ನರಹರಿಯು ನಮ್ಮ ಪಾಲಿಗೆ ಮಂಗಳವ ಕರುಣಿಸಲಿ.

# ಮುತ್ತಗಿ

ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿಗೆ ಇದು ಸೇರಿದೆ. ಬಸವನ ಬಾಗೇವಾಡಿ ರಸ್ತೆಯಲ್ಲಿ ಪೂರ್ವಕ್ಕೆ ಎಂಟು ಕಿಲೋಮೀಟರ್ ದೂರದಲ್ಲಿ ಪ್ರಸಿದ್ಧ ಕ್ಷೇತ್ರವಾದ ನರಸಿಂಹನೆಲೆಯಾದ ಮುತ್ತಗಿ ಕಂಡುಬರುತ್ತಿದೆ ಊರಿನಿಂದ ಹೊರಗೆ ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿ ಅಶ್ವತ್ಥ ವೃಕ್ಷದಲ್ಲಿ ಪ್ರಾದುರ್ಭಾವಗೊಂಡ ನರಸಿಂಹ ದೇವಸ್ಥಾನವಿದೆ. ಇದು ತುಂಬ ಜಾಗೃತವಾದದ್ದೆಂದು ತಿಳಿದು ಬರುತ್ತದೆ.

ಮುತ್ತಗಿಯ ಬಗ್ಗೆ ತಾಮ್ರ ಶಾಸನಗಳು ತಾಡ ಓಲೆಗಳು ಇರುವುದಂತೆ. ಇವುಗಳನ್ನು ಬ್ರಿಟಿಷ್ ಸರ್ಕಾರದವರು ಪುಣೆಗೆ ಒಯ್ದಿರುವರಂತೆ. ಪ್ರಸ್ತುತ ಹಿರಿಯರು ತಿಳಿಸುವ ವಿವರಗಳಷ್ಟರಿಂದ ಈ ಕ್ಷೇತ್ರದ ಇತಿಹಾಸವು ತಿಳಿದುಬರುತ್ತದೆ. ಇಲ್ಲಿ ಅಶ್ವತ್ಥ ಕಟ್ಟೆ ಎಂಬುದಿದ್ದು ಅದರ ಅಭಿವೃದ್ಧಿಗಾಗಿ ವರ್ಷಕ್ಕೆ ಹತ್ತು ರೂಪಾಯಿಗಳು ದೀಪಾರಾಧನೆಯ ವೆಚ್ಚಕ್ಕೆ ಎಂಟು ಸಾವಿರ ರೂಪಾಯಿಗಳು ನೈವೇದ್ಯಕ್ಕಾಗಿ ಪರಂಪರಾಗತವಾಗಿ ನೇಮಕಾತಿ ಇದ್ದಿತೆಂದು ಹೇಳುತ್ತಾರೆ. ಆದರೆ ಇದು ಸಹ ಈ ಶತಮಾನದ ಮಧ್ಯಭಾಗದಿಂದ ನಿಂತುಹೋಗಿದ್ದು ದೇವಸ್ಥಾನದ ಅಥವಾ ಈ ಜಾಗೃತಸ್ಥಾನದ ಅಭಿವೃದ್ಧಿಗೆ ತೊಂದರೆಯಾಗಿದೆ. ಇದಲ್ಲದೆ ದೇವಾಲಯಕ್ಕೆ ಮೂವತ್ತೊಂದು ಎಕರೆ ಜಮೀನಿನ ದಾನವಿದೆಯೆಂದು ಹೇಳುವರು.

## ವೃಕ್ಷಾ ರೂಪಿ

ಮುತ್ತಗಿಯಲ್ಲಿನ ಅಶ್ವತ್ಥಕಟ್ಟೆಗೆ ಸುಮಾರು ಒಂದು ಸಹಸ್ರವರ್ಷಗಳಿಗಿಂತಲೂ ಹೆಚ್ಚು ಆಯಸ್ಸನ್ನು ಹೇಳಬಹುದು. ಅದು ಶ್ರೀಮದಾಚಾರ್ಯರು ತಪಸ್ಸು ಮಾಡಿದ ಸ್ಥಳವಾಗಿತ್ತು, ಅವರು ಆ ಮುಕ್ತಕ್ಷೇತ್ರ ವಿರಚಿತೇ... ಎಂದು ಸ್ತೋತ್ರ ಮಾಡಿದ ಉಲ್ಲೇಖವಿತ್ತು ಎಂಬುದಾಗಿ ಇಲ್ಲಿನ ಹಿರಿಯರು ಹೇಳುವರು. ಈ ಜಾಗೃತ ಪ್ರದೇಶದಲ್ಲಿನ ಅಶ್ವತ್ಥ ವೃಕ್ಷವು ಸುಮಾರು ನಾಲ್ಕು ಎಕರೆಗಳಷ್ಟು ಹರಡಿಕೊಂಡು ಇದ್ದಿತೆಂದು ಹೇಳುವರು. ಹರಪನಹಳ್ಳಿಯ ಮಾಮಲೇದಾರರೊಬ್ಬರ ಕೃಪೆಯಿಂದ ಇಲ್ಲಿ ಹೊಸದೊಂದು ಆಲಯ ನಿರ್ಮಾಣವಾಯಿತು.

ಮೊದಲು ಕೇವಲ ಅಶ್ವತ್ಥಕಟ್ಟೆಗೆ ಮಾತ್ರ ಇಲ್ಲಿ ಪೂಜೆ ನಡೆಯುತ್ತಿತ್ತು. ನವ ಪ್ರಾಚೀನ ಪೂಜಾ ಪರಂಪರೆಗಳಲ್ಲಿ ವೃಕ್ಷಾರಾಧನೆಯನ್ನು ಇದು ಪ್ರತಿನಿಧಿಸುತ್ತಿತ್ತು ನಂತರ ಕುಲಕರ್ಣಿ ಮನೆತನದವರೊಬ್ಬರಿಗೆ ದೇವರ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಪಶ್ಚಿಮದಿಕ್ಕಿ ಹೋಗುವಾಗ ಉರಿಯೆದ್ದ ಜಾಗದಲ್ಲಿ ಅಗೆಯುವಂತೆ ಅಣತಿಯಾಯಿತು. ಅದರಂ ಮಾಡಲು ಹೊರಟಾಗ ಕೂಡ್ಲಗಿ ಎಂಬ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಉರಿಯೆದ್ದಿತು ಆ ಸ್ಥಳದಲ್ಲಿ ಅಗೆದಾಗ ಉತ್ತಮವಾದ ಶಿಲಾಪ್ರತಿಮೆಯೊಂದು ಕಂಡಿತು. ಇದು ಮುಖಿದ ಪ್ರತಿಮೆ ನರಸಿಂಹದೇವರ ಈ ಮುಖಪ್ರತಿಮೆಯನ್ನು ತೆಗೆದುಕೊಂಡು ಬಂದು ವಿಧಿ ಪೂರ್ವಕವಾಗಿ ಸ್ಥಾಪನೆ ಮಾಡಲಾಯಿತು.

ಅಂದು ಸ್ಥಾಪನೆಗೊಂಡ ನರಸಿಂಹ ಪ್ರತಿಮೆಯನ್ನು ಇಂದಿಗೂ ಸಹ ಪೂಜಿಸಿಕೊಂಡು ಬರಲಾಗುತ್ತಿದೆ. ಇದರ ಜೊತೆಗೆ ಅಧೋಮುಖಿ ನರಸಿಂಹ ಸಾಲಿಗ್ರಾಮವು ಒಂದು ದೊಡ್ಡ ಶಂಖವು ಇಲ್ಲಿರುವುದಾಗಿದೆ. ಈ ಶಂಖದಲ್ಲಿ ಒಂದರೊಳಗೊಂದು ಐದು ಕಂಬ ಗಳಿರುವಂತಿದೆ. ಇದೊಂದು ನಿಜಕ್ಕೂ ವಿಚಿತ್ರವೆಂದೇ ಹೇಳಬೇಕು. ಈ ರೀತಿಯ ಕಂಬಗಳನ್ನು ತಾವೆಲ್ಲೂ ಕಂಡಿಲ್ಲವೆಂದು ಹಿರಿಯರು ಹೇಳುತ್ತಾರೆ.

## ರೂಪ ಬೆಳವಣಿಗೆ

ಅಭಯನರಸಿಂಹ, ತಪೋನರಸಿಂಹ, ಉಗ್ರನರಸಿಂಹ ಮತ್ತು ಲಕ್ಷ್ಮೀನರಸಿಂಹರ ನಾಲ್ಕು ಪಂಚಲೋಹದ ಪ್ರತಿಮೆಗಳೂ ಇಲ್ಲಿ ಕಾಣುತ್ತವೆ, ಪ್ರತಿನಿತ್ಯ ಪೂಜೆ ನಡೆಯುತ್ತದೆ. ಸಂಜೆಯ ಮಂಗಳಾರತಿಯ ಸಂಪ್ರದಾಯನ್ನು ಆರಿಸಿಕೊಂಡು ಬರಲಾಗುತ್ತಿದೆ. ನರಸಿಂಹ ಪ್ರತಿಮೆ ದೊರಕಿದ ನಂತರ ಅಶ್ವತ್ಥವೃಕ್ಷದಲ್ಲಿ ಬಿರುಕು ಕಂಡು ಬಂದಿತಂತೆ. ಅಲ್ಲಿ ಉತ್ಪತ್ತಿ ಬೀಜದಷ್ಟು ಕೆಂಪುವರ್ಣದ ಶಿಲೆಯು ಕಂಡಿತಂತೆ. ಆ ಬಿರುಕು ಹಾಗೆಯೇ ದೊಡ್ಡದಾಗಿ ಅದರಲ್ಲಿ ಕೈಹಾಕಿ ಪೂಜೆ ಮಾಡುವಷ್ಟು ದೊಡ್ಡದಾಯಿತಂತೆ. ಈ ರೀತಿಯಲ್ಲಿ ನೆರವೇರುತ್ತಿದ್ದಾಗ ಸುಮಾರು ಒಂದು ಸಾವಿರದ ಒಂಬೈನೂರ ನಲವತ್ತರ ವೇಳೆಗೆ ಈ ಎಲ್ಲ ಬೆಳವಣಿಗೆಗಳು ಉಂಟಾಗಿ ದೇವರ ಕಣ್ಣು-ಮೂಗುಕೈಗೆ ಎಟಕುವಂತಾಯಿತೆಂದು ಹೇಳಲಾಗುತ್ತದೆ.

ದೇವರು ಪ್ರತ್ಯಕ್ಷವಾಗಿ 'ಅವಸರ ಬೇಡ. ನಾನೇ ಕಾಲ ಬಂದಾಗ ಬರತೀನಿ' ಎಂದು ಹೇಳಿದ್ದರಿಂದ ಈ ಸ್ಥಳದಲ್ಲಿನ ಇತರ ರೀತಿಯ ಪ್ರಯತ್ನಗಳನ್ನು ಕೈಬಿಟ್ಟು ಅಲ್ಲೊಂದು ಗುಡಿಯನ್ನು ಎಬ್ಬಿಸುವ ಕಾರ್ಯವನ್ನು ಮಾತ್ರ ಮಾಡಲಾಯಿತಷ್ಟೆ.

ಈಗಾಗಲೇ ನೋಡಿದ ಹಾಗೆ ಹರಪನಹಳ್ಳಿಯ ಮಾಮಲೇದಾರರು ತಮ್ಮ ಹೆಣ್ಣು ಮಗಳ ಸ್ಮರಣಾರ್ಥವಾಗಿ ಸುಮಾರು ಒಂದು ಸಾವಿರದ ಒಂಬೈನೂರ ನಲವತ್ತೆರಡರಲ್ಲಿ ಇಲ್ಲಿ ಹೊಸಗುಡಿಯೊಂದನ್ನು ನಿರ್ಮಿಸಿಕೊಟ್ಟಿರುತ್ತಾರೆ.

ಹೊಸದಾಗಿ ಜೀರ್ಣೋದ್ಧಾರ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯ ಕಾರ್ಯವು ಭರದಿಂದ ಸಾಗಿದೆ. ಈ ಕ್ಷೇತ್ರಕ್ಕೆ ಪ್ರತಿನಿತ್ಯವೂ ಭಕ್ತರ ಮಹಾಪೂರವೇ ಹರಿದು ಬರುತ್ತಿದೆ. ಉತ್ಸವ ಸಮಿತಿಯವರು ತಮ್ಮೆಲ್ಲ ಪ್ರಯತ್ನ ಪರಿಶ್ರಮಗಳಿಂದ ಕಾರ್ಯಕ್ರಮಗಳ ಸಿಂಹಾವಲೋಕನ ಮಾಡಿಕೊಂಡು ಮುಂದಿನ ಉತ್ಸವಗಳ ತಯಾರಿಯನ್ನು ನಡೆಸುತ್ತಾರೆ. ಈಸ್ಥಳಕ್ಕೆ ಇನ್ನೂ ಹೇರಳವಾದ ಆಸ್ತಿಪಾಸ್ತಿಗಳ ಅವಶ್ಯಕತೆಯಿದೆ. ಮುತ್ಗಿಯ ದೈವಸನ್ನಿಧಿಗೆ ಕಟ್ಟಡವೊಂದು ತೀರಾ ಅಗತ್ಯವಾದದ್ದೆಂದು ಹೇಳಬೇಕು. ಇದಕ್ಕಾಗಿ ಅನೇಕ ಭಕ್ತರು ಪ್ರಾಮಾಣಿಕತೆಯಿಂದ ಶ್ರಮಿಸುತ್ತಿದ್ದಾರೆ. ಈಗಿರುವಷ್ಟು ಸ್ಥಳದಲ್ಲಿಯೇ ತಮ್ಮ ಭಕ್ತಿ-ಇಚ್ಛೆಗಳಿಗೆ ಅನುಗುಣವಾಗಿ ಕಾರ್ತಿಕ ಸಮಾಪ್ತಿ, ಅಧಿಕಮಾಸ ಸಮಾಪ್ತಿ, ಹಾಡಿನ ಮಂಗಳ ಮುಂತಾದ ಸಂದರ್ಭ- ಸಂತರ್ಪಣೆಗಳನ್ನು ತಕ್ಕ ರೀತಿಯಲ್ಲಿಯೇ ನಡೆಸುತ್ತಿದ್ದಾರೆ.

ಮುತ್ಗಿ ಕ್ಷೇತ್ರಕ್ಕೆ ಕರ್ನಾಟಕದ ಇತರ ಜಿಲ್ಲೆಗಳಾದಂತಹ ಗುಲಬರ್ಗ, ಕೊಪ್ಪಳ ಜಿಲ್ಲೆಗಳಿಂದಲೂ ಸಾರಪುರದಂತಹ ಪವಿತ್ರ ಸ್ಥಳದಿಂದಲೂ ಮಹಾರಾಷ್ಟ್ರ ರಾಜ್ಯದಿಂದಲೂ ಭಕ್ತರು ಬಂದು ಪ್ರತಿ ವರ್ಷವೂ ತಮ್ಮ ಹರಕೆ ಸಲ್ಲಿಸಿ ಕಾಣಿಕೆ ನೀಡಿ ಹೋಗುತ್ತಿದ್ದಾರೆ. ದೇವರು ದಿನದಿನಕ್ಕೂ ಜಾಗೃತನಾಗುತ್ತಿದ್ದಾನೆ. ಭೂತ-ಪ್ರೇತ ಬಾಧೆಗಳು, ಸಂತಾನಪ್ರಾಪ್ತಿ ಮತ್ತು ಇಷ್ಟಾರ್ಥಸಿದ್ಧಿಗಳ ಪೂರೈಕೆಗಾಗಿ ತಂಡತಂಡವಾಗಿ ಇಲ್ಲಿಗೆ ಭಕ್ತ ಜನರು ಧರಿಸುತ್ತಿದ್ದಾರೆ.

## ಉತ್ಸವ ವಿವರ

ಮುತ್ಗಿಯಲ್ಲಿ ಪ್ರತಿವರ್ಷ ವೈಶಾಖ ಶುದ್ಧದಶಮಿಯಿಂದ ಪೌರ್ಣಿಮೆಯವರೆಗೆ ದೇವರ ಉತ್ಸವವು ನೆರವೇರುತ್ತದೆ. ಆರಂಭದ ದಿನ ಅರ್ಚಕರ ಮನೆಯಿಂದ ಉತ್ಸವ ಮೂರ್ತಿ ಹಾಗೂ ದೇವರ ಕಳಶಗಳನ್ನು ತೆಗೆದುಕೊಂಡು ಹೋಗಲಾಗುತ್ತದೆ.

ನಂತರ ಕಳಶಾರೋಹಣ, ಪಂಚಾಮೃತಾಭಿಷೇಕ, ಪಂಚಸೂತ್ರ ಅಭಿಷೇಕ, ಪವಮಾನ ಅಭಿಷೇಕ, ಪಾರಾಯಣ ಶ್ರೀಮದ್ಭಾಗವತ ಸಪ್ತಮಸ್ಕಂದ ಪಠಣ, ನೈವೇದ್ಯ ಅನ್ನಸಂತರ್ಪಣೆಗೆ ಸಾಯಂಕಾಲ ಮಂತ್ರ, ಪುಷ್ಪಪಲ್ಲಕ್ಕಿ ಸೇವೆಗಳು ನಂತರ ಯಥಾಪ್ರಕಾರ ಪಾರಾಯಣ ನೈವೇದ್ಯ ಇತ್ಯಾದಿ., ಸಂಜೆ ದೇವರನ್ನು ತೆಗೆದುಕೊಂಡು ವೇದಘೋಷಗಳೊಂದಿಗೆ ಪುರ ಪ್ರವೇಶ ಮಾಡುವ ಉತ್ಸವ ಕಾರ್ಯಗಳು ನೆರವೇರುತ್ತಿದೆ.

ಮುತ್ಗಿಯಲ್ಲಿ ನರಸಿಂಹ ದೇವರು ಈ ರೀತಿಯಲ್ಲಿ ಭಕ್ತರ ಕಾಮಧೇನುವಾಗಿ ನೆನೆದವರ ಕೈವಾರಿಯಾಗಿ ಭಕ್ತಜನ ರಕ್ಷಕನಾಗಿದ್ದಾನೆ. ಪ್ರಹ್ಲಾದವರದ ಲಕ್ಷ್ಮೀನರಸಿಂಹ ಸ್ವಾಮಿಯು ನಂಬಿದವರಿಗೆ ನೆರವಾಗಿ ಶಿಷ್ಟಜನ ಪಾಲಕನಾಗಿ ದುಷ್ಟಜನ ಸಂಹಾರಕನಾಗಿ ಇಲ್ಲಿ ನೆಲೆಸಿದ್ದಾನೆ. ಹೀಗಾಗಿ ಮುತ್ಗಿ ಕ್ಷೇತ್ರ ನರಸಿಂಹಭಕ್ತರ ಮೆಚ್ಚಿನ ತೀರ್ಥಯಾತ್ರೆಯಾಗಿ ಪರಿಣಮಿಸಿದೆ.

# ಶೂರ್ಪಾಲಯ

ಈ ಕ್ಷೇತ್ರವನ್ನು ಶ್ರೀಮದ್ಭಾಗವತದಲ್ಲಿಯೂ ಉಲ್ಲೇಖಿಸಲಾಗಿದೆಯೆಂದು ಶ್ರದ್ಧಾಳುಗಳು ನಂಬಿಕೊಂಡು ಬಂದಿದ್ದಾರೆ. ಇದೊಂದು ಬಹಳ ಪ್ರಾಚೀನವಾದ, ಪವಿತ್ರವಾದ ಕ್ಷೇತ್ರವೂ ಆಗಿದೆ. ಈಗಿನ ಬಿಜಾಪುರ ಜಿಲ್ಲೆಯಲ್ಲಿನ ಜಮಖಂಡಿ ತಾಲೂಕಿನಲ್ಲಿರುವ ಸಣ್ಣ ಹಳ್ಳಿಯಾಗಿದ್ದರೂ ಸಹ ಸ್ವಾಭಾವಿಕವಾದ ಪ್ರಕೃತಿ ಸೌಂದರ್ಯದಿಂದಲೂ ಕೂಡಿ ಕೃಷ್ಣಾನದಿಯ ದಂಡೆಯ ಮೇಲಿದ್ದು ತನ್ನ ಪವಿತ್ರತೆಯನ್ನು ಕಾಯ್ದುಕೊಂಡಿರುತ್ತದೆ. ಇಲ್ಲಿ ಲಕ್ಷ್ಮೀನರಸಿಂಹ ದೇವರು ವಿರಾಜಿಸಿದ್ದಾರೆ.

ಹಿಂದೊಮ್ಮೆ ಪರಮಾತ್ಮನು ತನ್ನ ಆಜ್ಞೆಯಿಂದ ಔರಕಂತ್ಲ ಕ್ಷೇತ್ರದಲ್ಲಿ ಬ್ರಹ್ಮಾದಿ ದೇವತೆಗಳು ಯಜ್ಞಮಾಡುತ್ತಿರಬೇಕಾದರೆ ಪರಶುರಾಮ ರೂಪದಿಂದ ಆ ಯಜ್ಞಕ್ಕೆ ತಾನು ಬರುವಾಗ ದಾರಿಯಲ್ಲಿ ಶ್ರೀ ಕೃಷ್ಣಾತೀರದಲ್ಲಿ ಕಂಗೊಳಿಸುವ ಈ ಶೂರ್ಪಾಲಯ ಕ್ಷೇತ್ರದ ರಮಣೀಯ ದೃಶ್ಯವನ್ನು ಆ ಪುಣ್ಯ ಕ್ಷೇತ್ರದಲ್ಲಿಯ ಪ್ರಭಾವವನ್ನು ನೋಡಿ ಸಂತೋಷಭರಿತನಾಗಿ, ಆನಂದಭಾಷ್ಪಗಳನ್ನು ಉದುರಿಸಿದನು. ಆಗ್ಲೆ ಅಲ್ಲಿ ಆನಂದಬಾಷ್ಪಗಳಿಂದ ಒಂದು ವಿಶಾಲ ಅಶ್ವತ್ಥವೃಕ್ಷವು ಉದ್ಭವಿಸಿತು.

*ಕೃಷ್ಣಾಯಾ ದಕ್ಷಿಣೇ ಕೂಲೇ ಭೃಗುರಾಮಃ ಸಮಾಶ್ರಿತಃ*
*ದೃಷ್ಟ್ವಾಕೃಷ್ಣಮಹಾನಂದನಿರ್ಭರೋ ಭಾಷ್ಪ ಮಃಮುಸೃದತ್*
*ತದ್ ಭಾಷ್ಪ ಜಲಬಿಂದುಭ್ಯೋ ಅಶ್ವತ್ಥ ತರುದ್ಗತಃ*
*ವಿಚಿತ್ರ ಪತ್ರ ಸ್ಕಂಧೈಶ್ಚ ಯುಕ್ತಾಶ್ಚರ್ಯ ಸುಕಾರಣಃ*

ಎಂಬ ಪುರಾಣವಚನದಂತೆ ಆ ಅಶ್ವತ್ಥ ವೃಕ್ಷವು ಇಂದಿಗೂ ಕೂಡ ಭಗವತ್ ಸನ್ನಿಧಾನದಿಂದ ಕೂಡಿ ವಿಶಾಲ ಶಾಖೋಪಶಾಖೆಗಳಿಂದ ಶೋಭಿಸುತ್ತದೆ. ಇಲ್ಲಿಯೇ ಪರಶರಾಮದೇವರು ಲಕ್ಷ್ಮೀಸಮೇತರಾಗಿ ನರಸಿಂಹರೂಪದಿಂದ ಇರುತ್ತಾರೆಂದು ಹೇಳಿದೆ.

ಪುರಾಣ ಪ್ರಸಿದ್ಧವಾದ ಶೂರ್ಪಾಲಯ ಕ್ಷೇತ್ರದಲ್ಲಿ ಪ್ರಾಚೀನ ಕಾಲದಿಂದಲೂ ಅನೇಕ ಜ್ಞಾನಿಗಳು, ತಪಸ್ವಿಗಳು, ಸಿದ್ಧಪುರುಷರು ವಾಸಿಸುತ್ತಿದ್ದರೆಂದು ತಿಳಿದುಬರುತ್ತದೆ. ಪಾಂಡವರು ಮಾಡಿದ ರಾಜಸೂಯಯಾಗಕ್ಕೆ ಶೂರ್ಪಾಲಯದಿಂದ ಅನೇಕ ತಪಸ್ವಿ ಬ್ರಾಹ್ಮಣರು ಹೋಗಿದ್ದಾರೆಂದು ಐತಿಹಾಸವಿದೆ. ಈಗ ಅಶ್ವತ್ಥ ವೃಕ್ಷದ ಸಮ್ಮುಖದಲ್ಲಿ ವಿರಾಜಮಾನವಾದ ನರಸಿಂಹ ಶಿಲಾವಿಗ್ರಹವು ಸೂಕ್ಷ್ಮವಾದ ಶೀಬಾಕಾರವಾಗಿ ಇದ್ದು ಮೊದಲು ಕೃಷ್ಣನದಿಯಲ್ಲಿ ಸಿಕ್ಕಿತು. ಅದನ್ನೇ ನೃಸಿಂಹದೇವರ ಆಜ್ಞೆಯಿಂದ ಒಬ್ಬ ಹುಟ್ಟು ಕುರುಡನು ಮೊದಲು ಇರುವ ರೇಖೆಯಂತೆ ಸ್ಪಷ್ಟವಾಗಿ ಪ್ರಕಟಿಸಿ ನೃಸಿಂಹದೇವರ ಪ್ರಸಾದದಿಂದ ಕಣ್ಣುಗಳನ್ನು ಪಡೆದು ಆ ಸುಂದರ ವಿಗ್ರಹವನ್ನು ನೋಡಿ ಉದ್ಧಾರವಾದನು. ಇದು ಸ್ವಯಂವ್ಯಕ್ತ ಪ್ರತಿಷ್ಠಾಪಿತ ಮೂರ್ತಿ.

ಈ ನೃಸಿಂಹ ಕ್ಷೇತ್ರದಲ್ಲಿ ಪ್ರತಿವರುಷ ವೈಶಾಖಶುಕ್ಲಪಕ್ಷ ದಶಮಿಯಿಂದ ಪೌರ್ಣಮಿಯವರೆಗೆ ದೊಡ್ಡ ಉತ್ಸವವು ಜರುಗುತ್ತದೆ. ದೇಶದ ಮೂಲೆ ಮೂಲೆಗಳಿಂದ ತಮ್ಮ ಈ ಕಾಲಸ್ವಾಮಿ ಉತ್ಸವಕ್ಕೆ ಎಲ್ಲ ಭಕ್ತರು ಬಂದೇ ಬರುತ್ತಾರೆ. ಈ ಲಕ್ಷ್ಮೀನರಸಿಂಹ ದೇವರ ದೇವಾಲಯ ಬಹಳ ವಿಶಾಲವಾಗಿದೆ.

ದೇವಸ್ಥಾನದ ಹೆಸರಿನಿಂದ ಆಸ್ತಿಯು ಕೂಡಾ ಉತ್ಸವಕ್ಕೆ ಸಾಕಾಗುವಷ್ಟು ಇದೆ. ಮಾರ್ಗಶೀರ್ಷ ಮಾಸದಲ್ಲಿ ಹದಿನೈದು ದಿನ ಉತ್ಸವ ನಡೆಯುತ್ತದೆ. ಪ್ರತಿನಿತ್ಯವೂ ಪವಮಾನ ಪಂಚಸೂಕ್ತ ಅಭಿಷೇಕ ವ್ಯವಸ್ಥೆಯಿಂದ ಕೂಡಿ ಅರ್ಚನೆ ಮಾಡಲಾಗುತ್ತಿದೆ. ಇಂತಹ ಶೂರ್ಪಾಲಯದ ನರಸಿಂಹನು ಸರ್ವಾಭೀಷ್ಟ ವರಪ್ರದಾಯಕನಾಗಿದ್ದಾನೆ.

## ಬೀದರ್ ಜಿಲ್ಲೆ

# ಝರಣಿ (ನರಸಿಂಹ ಝರಾ)

ಕರ್ನಾಟಕ ಅತ್ಯುಗ್ರ ಭಾಗದಲ್ಲಿ ಕಂಗೊಳಿಸುತ್ತಿರುವುದೇ ಬೀದರ್ ಜಿಲ್ಲೆ. ಇದರ ಜಿಲ್ಲಾ ಕೇಂದ್ರವಾಗಿರುವ ಬೀದರ್ ನಗರವು ಇತಿಹಾಸ ಪ್ರಸಿದ್ಧವಾದದ್ದು. ಈ ನಗರದ ಪೂರ್ವದಲ್ಲಿ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ ಹಸಿರುತೊಟ್ಟ ಮಣಚೂಲ ಗುಡ್ಡಶ್ರೇಣಿಯ ತಪ್ಪಲಲ್ಲಿ ಲಕ್ಷ್ಮೀನರಸಿಂಹನು ನೆಲೆಸಿರುತ್ತಾನೆ. ನಿರ್ಜನ ಪ್ರದೇಶದಲ್ಲಿರುವ ಇದು ಗುಹಾಂತರ ದೇವಾಲಯವಾಗಿದೆ. ಭಕ್ತಿಧಾಮವಾಗಿರುವಂತೆ ವಿಹಾರಧಾಮವಾಗಿಯೂ ಈ ಕ್ಷೇತ್ರ ಆಕರ್ಷಕವಾಗಿದೆ.

ದೇವಾಲಯಕ್ಕೆ ಹೋಗಬೇಕಾದವರು ಡಾಂಬರು ರಸ್ತೆಯ ಪ್ರವೇಶದ್ವಾರದಿಂದ ಕಣಿವೆಯಲ್ಲಿ ಸಾಗಿ ಅಗಲವಾಗುತ್ತ ಹೋಗುವ ಆಳವಾದ ಹಳ್ಳದಿಂದ ಕೂಡಿದ ಹಾದಿಯಲ್ಲಿ ಸುಮಾರು ಅರವತ್ತು ಮೆಟ್ಟಿಲುಗಳನ್ನು ಇಳಿದು ಹೋಗಬೇಕು. ಕತ್ತಲ ಗುಹೆಯಲ್ಲಿಯೇ ಸಾಗಬೇಕು. ಇದೊಂದು ರೋಮಾಂಚಕವಾದ ಅನುಭವವಾದೀತು. ನೀರಿನಲ್ಲಿ ಇಳಿಯಬೇಕು. ದೊಡ್ಡವರ ಸೊಂಟ ಮುಳುಗುವಷ್ಟು ನೀರಿನಲ್ಲಿಳಿದು ನಡೆಯಬೇಕು. ಸುರಂಗದ ನೈಸರ್ಗಿಕ ನೋಟವನ್ನು ಅನುಭವಿಸುತ್ತ ಮುಂದೆ ಮುಂದೆ ನೀರಿನಲ್ಲಿ ಮೀಯುತ್ತ ನಡೆಯುವಾಗ ಅಕ್ಕಪಕ್ಕಗಳಲ್ಲಿ ಬಿಲದರ್ಶನ ಮಾತ್ರವಲ್ಲದೆ ಅದರ ಒಳಗಿನ ಫಣಿರಾಜರ ದರ್ಶನವೂ ನಮಗೆ ಆಗಬಹುದು. ಮೇಲಿನ ಭಾಗದಲ್ಲಿ ನೇತಾಡುವ ಬಾವಲಿಗಳು ಒಂದು ರೀತಿಯ ಅನನ್ಯ ಅನುಭವವನ್ನು ಉಂಟುಮಾಡದೇ ಇರಲಾರವು. ಗುಹೆಯ ಉದ್ದಕ್ಕೂ ಸಮನಾದ ಆಳವಿದ್ದು ಬಹುಪಾಲು ಎಲ್ಲ ಕಾಲದಲ್ಲೂ ಕನಿಷ್ಟ ಮೂರು ಅಡಿಗಳಷ್ಟು ಆಳದ ನೀರಿರುತ್ತದೆ. ಆದ್ದರಿಂದ ನೀರಿನಲ್ಲಿ ನಡೆಯುವುದಕ್ಕೆ ಭಕ್ತಾದಿಗಳಿಗೆ ಯಾವ ತೊಂದರೆಯೂ ಆಗಲಾರದು.

ಶ್ರೀಕ್ಷೇತ್ರ ಝರಣಿಯು ಅತ್ಯಂತ ಪವಿತ್ರವಾಗಿದ್ದು ಇಲ್ಲಿನ ದೇವಾಲಯ ಪ್ರಾಚೀನ ವಾದದ್ದೆಂಬುದರಲ್ಲಿ ಬೇರೊಂದು ಮಾತಿಲ್ಲ. ಇಲ್ಲಿಯ ಸುರಂಗವು ನೇರವಾಗಿಲ್ಲ. ಸುಮಾರು ಆರು ಅಡಿ ಅಗಲವಾಗಿರುವ ಈ ಗುಹಾಮಾರ್ಗವು ಕೆಲವಾರು ತಿರುವುಗಳನ್ನು ಹೊಂದಿದೆ. ಏಳೆಂಟು ತಿರುವುಗಳಾದರೂ ಇದೆ. ಗುಹೆಯ ಒಳಭಾಗಕ್ಕೆ ಹೋದ ನಂತರವೇ ದೇವರ ದರ್ಶನವಾಗುವುದು. ಹೊರನೋಟಕ್ಕೆ ನೋಡುವವರಿಗೆ ಇದು ಈ ರೀತಿಯ ದೇವಾಲಯವೇ. ಇಲ್ಲೊಂದು ದೇವಸ್ಥಾನವಿದೆಯೆ ಎಂಬ ಆಶ್ಚರ್ಯವಾದರೂ ಸರಿಯೆ. ಇಂತಹ ದೇವಾಲಯ ಗಳು ಒಂದು ಸಂಪೂರ್ಣವಾಗಿ ಸುರಕ್ಷಿತೆಯ ಕಾರಣದಿಂದಲೆ ಹೀಗೆ ರಚಿತವಾಗಿರಬಹುದು. ಅಥವಾ ನೈಸರ್ಗಿಕವಾಗಿ ಇವುಗಳ ಮೂಲರಚನೆಯೇ ಹೀಗಿದ್ದಿರಬಹುದು.

ಹೆಡೆಯಲ್ಲಿ ಆಕಾರದಲ್ಲಿರುವ ಗುಡಿಯಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ನರಸಿಂಹಸ್ವಾಮಿಯ ಕಲ್ಲಿನ ವಿಗ್ರಹವು ಶೋಭಿಸುತ್ತಿದೆ. ಅಸ್ಪಷ್ಟವಾದ ಆಕಾರದಿಂದ ಕೂಡಿದ ಈ ಸ್ವಾಮಿಯ ಹಿಂಭಾಗದಂತೆ ಕಂಡುಬರುವ ಈ ಮೂರ್ತಿಯ ಪ್ರತಿಮಾ ವಿಚಾರವನ್ನು ಸ್ಪಷ್ಟವಾಗಿ ಅರಿಯಲಾಗುತ್ತಿಲ್ಲ. ನರಸಿಂಹರೂಪವನ್ನು ತಳೆದ ಭಗವಂತನು ಅತಿ ಉಗ್ರನಾಗಿದ್ದನಂತೆ. ಲಕ್ಷ್ಮಿಯ ಸೇವೆಯ ಫಲದಿಂದ ಈ ಸ್ಥಳದಲ್ಲಿ ಜಲೋದ್ಭವವಾಗಿ ಲಕ್ಷ್ಮೀ ನರಸಿಂಹನು ವ್ಯಾಪಿಸುವಂತೆ ಆಗಿದೆಯೆಂದು ಭಾವಿಸಲಾಗುತ್ತಿದೆ. ಆದಿನಾರಾಯಣನು ಆದಿಶೇಷನೂ ಆಗಿದ್ದು ಈತನ ನೆಲೆ ಸಮುದ್ರವೇ ಆಗಿರುವುದನ್ನು ಸಾಂಕೇತಿಕವಾಗಿ ಇದು ಧ್ವನಿಸುತ್ತಿದೆ. ಹಾಗೆಯೇ ಸರ್ಪಗಳ ಹೆಡೆಯನ್ನು ಧರಿಸಿದ 'ನರಸಿಂಹರೂಪ' ವನ್ನೂ ಸಹ ನಮ್ಮ ಪೂಜಾಚಿತ್ರಗಳಲ್ಲಿ ನಾವಿಂದು ಹೊಂದಿದ್ದೇವಷ್ಟೆ.

ಚಿಲುಮೆಯ ಕಾರಣದಿಂದ ಇದಕ್ಕೆ ನರಸಿಂಹ 'ಝರಾ' ಎಂಬ ಹೆಸರು ಬಂದಿರ ಬಹುದು. ಇಲ್ಲಿರುವ ನೀರು (ನದಿಯಂತೆ) ಹರಿಯುವುದೂ ಅಲ್ಲ (ತಟಾಕದಂತೆ) ನಿಂತದ್ದೂ ಅಲ್ಲ. ಸ್ವಾಮಿಯ ಅಡಿಯಿಂದ ಚಿಮ್ಮುವುದು. ಇದು ಇತರ ಪುಣ್ಯಕ್ಷೇತ್ರಗಳಲ್ಲಿನ ಹಾಗೆ ಅಂತರ್ಗಾಮಿಯೆಂದು ಹೇಳುವುದುಂಟು.

ನರಸಿಂಹ ಝರಾದ ಇತಿಹಾಸವನ್ನು ತಿಳಿಯಲು ಯಾವುದೇ ಶಾಸನಗಳಾಗಲೀ, ಬರಹಗಳಾಗಲೀ ಇಲ್ಲ. ಭಕ್ತರ ಮನಸ್ಸನ್ನು ಆಕರ್ಷಿಸುವಂತೆ ಹೇಳುವ ಪೂಜಾರಿಗಳ ಪುರಾಣಿಕತೆಯಷ್ಟೇ ಈ ಸ್ಥಳದ ವೃತ್ತಾಂತವನ್ನುರುಹುತ್ತದೆ. ಹಿರಣ್ಯಕಶಿಪುವನ್ನು ಕೊಂದ ವಿಷ್ಣು ಝರಾಸುರನನ್ನು ಈ ಗುಹೆಯಲ್ಲಿ ಸಂಹರಿಸಿದನಂತೆ. ನಂತರ ಆ ಅಸುರನ ಕೋರಿಕೆಯಂತೆ ಸದಾಕಾಲವೂ ಭಕ್ತರ ಪಾಪಗಳನ್ನು ತೊಳೆಯುವ ಜಲದ ರೂಪದಲ್ಲಿ ಈ ಗುಹೆಯಲ್ಲಿ ತುಂಬಿ ನಿಂತಿದ್ದಾನೆ. ವೃಕ್ಷರೂಪಿಯಾದ ಭಗವಂತನು ಜಲರೂಪಿಯಾಗಿ ಸಹ ಏಕಿರಬಾರದೆಂಬ ವಿಚಾರಕ್ಕೆ ಝರಣಿಯು ಪುಷ್ಟಿಯನ್ನು ನೀಡುವಂತಿದೆ. ಉಗ್ರ ನರಸಿಂಹನಾಗಿ ಅವತರಿಸಿದ ಭಗವಂತನು ಯೋಗಾನರಸಿಂಹನಾಗಿ ನೆಲೆಸಿರುತ್ತಾನೆ. ಇದೊಂದು ಜಾಗ್ರತ ಸ್ಥಳವೂ ಆಗಿದೆ. ಈ ಗುಹೆಯ ನೀರು ಚರ್ಮರೋಗ ನಿವಾರಣೆಯನ್ನು ಮಾಡ ಬಲ್ಲುದಂತೆ. ಬೀದರಿಗೆ ಹೋದವರು ನರಸಿಂಹನ ದರ್ಶನವಿಲ್ಲದೆ ಹೋಗಲಾರರು.

## ಕೋಲಾರ ಜಿಲ್ಲೆ

# ಮುಳಬಾಗಿಲು



ನೃಸಿಂಹ ತೀರ್ಥದಲ್ಲಿ ಭಕ್ತರ ಅಭೀಷ್ಟ ಈಡೇರಿಸುತ್ತಿರುವ ನರಸಿಂಹ

ಮುಳಬಾಗಿಲು ಕರ್ನಾಟಕದ ಪೂರ್ವಭಾಗದಲ್ಲಿರುವ ಮುಖ್ಯವಾದ ಪಟ್ಟಣ. ಇದಕ್ಕೆ 'ಶತಕವಾಟಪುರಿ'ಯೆಂಬ ಮತ್ತೊಂದು ಹೆಸರಿತ್ತು. ಶತ್ರುಗಳ ಪಾಲಿಗೆ ಇದು ಕಂಟಕದ್ವಾರವೂ ಆಗಿತ್ತು. ಈ ತಾಲೂಕಿನ ಇತಿಹಾಸವು ಅನೇಕ ರೋಚಕವಾದ ಸಂಗತಿಗಳನ್ನೊಳಗೊಂಡಿರುವುದು. ಬಾಣ-ಪಲ್ಲವ, ಚೋಳ-ಹೊಯ್ಸಳ ರಾಜಪ್ರಮುಖರ ಜೀವನಕ್ಕೆ

ಸಂಬಂಧಿಸಿದ ಪ್ರಮುಖವಾದ ಘಟನೆಗಳನ್ನು ಹೊಂದಿರುವುದು. ವಿಜಯನಗರ ಸಾಮ್ರಾಜ್ಯದ ಪ್ರಮುಖರಾದ ಅರಸರ ಆರಂಭಿಕ ಆಳ್ವಿಕೆ ನಡೆಯುತ್ತಿದ್ದದ್ದು ಮುಳವಾಯಿ ನಗರದಲ್ಲೆಂದು ಹೇಳಬೇಕು. ಶಿವ-ವಿಷ್ಣು-ಶಕ್ತಿಯರ ಧಾರ್ಮಿಕ ನೆಲೆಗಳನ್ನು ಈ ತಾಲೂಕಿನ ಅನೇಕ ಕೇಂದ್ರಗಳಲ್ಲಿ ಕಾಣಬಹುದು. ಮುಳಬಾಗಿಲು ಪಟ್ಟಣದಲ್ಲಿಯೇ ಒಂದು ಕಾಲಕ್ಕೆ ನೂರೆಂಟು ದೇಗುಲಗಳು ನಾಲ್ಕಾರು ಮಠಗಳಿದ್ದವೆಂದು ತಿಳಿದುಬಂದಿದೆ.

ತಿರುಪತಿಯ ತಿಮ್ಮಪ್ಪನ ದರ್ಶನಕ್ಕೆ ಈ ಊರಿನ ಪ್ರಾಣದೇವರ ವರಪ್ರಸಾದ ಅಗತ್ಯವೆಂದು ಭಾವಿಸುತ್ತಾರೆ. ತಿರುಮಲೇಶನ ಅರ್ಚನೆಯನ್ನು ಮಾಡಿದ ವ್ಯಾಸರಾಜರು, ಇಲ್ಲಿನ ಶ್ರೀಪಾದರಾಜ ಯತಿಗಳ ಪ್ರಮುಖ ಶಿಷ್ಯರಾಗಿದ್ದರು. ಶ್ರೀಪಾದರಾಜರು ಮಠಗಳಲ್ಲಿ ಕೀರ್ತನ ಪರಂಪರೆಯು ಬೆಳೆಯಲು ಕಾರಣ ಭೂತರಾದವರು. ದೇವರು- ಯತಿವರೇಣ್ಯರು- ರಾಜಶ್ರೇಷ್ಠರ ಕೃಪಾಕಟಾಕ್ಷಕ್ಕೆ ದಯಾನುಶೀಲತೆಗೆ, ಪೋಷಕಾಕಾರ್ಯಕ್ಕೆ ನೆರವಾಗುವಂತಿರುವ ಮುಳಬಾಗಲಿನ ಧಾರ್ಮಿಕ-ಸಾಂಸ್ಕೃತಿಕ ಪರಂಪರೆ ಉಜ್ವಲವಾದದ್ದು. ಮಧುರೆಯ ರಾಜರನ್ನು ಹಿಮ್ಮೆಟ್ಟಿಸಲು 'ವೀರಸಂಕಲ್ಪ'ವನ್ನು ಮಾಡಿದ ಕಂಪಣನ ನೆಲೆವೀಡು ಮುಳಬಾಗಿಲು.

ಮಹಾಭಾರತದ ಕಾಳಗವು ಮುಗಿದಕೂಡಲೆ ತನ್ನ ರಥದ ಮೇಲೆ ವಿರಾಜಿಸುತ್ತಿದ್ದ ಆಂಜನೇಯನನ್ನು ಪತಾಕೆಯಿಂದ ಮುಕ್ತಗೊಳಿಸಿ ಈ ನೆಲದ ಮೇಲೆ ಸ್ವತಃ ಅರ್ಜುನನೇ ಪ್ರತಿಷ್ಠೆ ಮಾಡಿದನೆಂಬ ಪಾರಂಪಾರಿಕವಾದ ಕಥೆಯನ್ನು ಇಲ್ಲಿನ ಪ್ರಾಣದೇವರ ಬಗ್ಗೆ ವಿವರಿಸುತ್ತಾರೆ. ರಾಮಾಯಣ ಕಾವ್ಯದಲ್ಲಿ ಸಂಜೀವಿನಿ ಪರ್ವತಕ್ಕೆ ಪ್ರಾಮುಖ್ಯತೆಯಿದೆ. ಲಕ್ಷ್ಮಣನನ್ನು ಮೂರ್ಛೆಯಿಂದ ಎಚ್ಚಿಸಲು ಹನುಮಂತನು ಸಂಜೀವಿನಿ ಪರ್ವತವನ್ನೇ ಹೊತ್ತು ತರುತ್ತಾನೆ. ಹಾಗೆ ಬರುವ ಹಾದಿಯಲ್ಲಿ ಇಲ್ಲೊಂದು ಗುಟ್ಟವುರುಳಿ ಇಲ್ಲಿನ ಬೆಟ್ಟವು ಆಂಜನಾದ್ರಿಯಾಗಿದೆ. ಮಾರುತಿಯ ದೇವಾಲಯವು ಈ ಬೆಟ್ಟಕ್ಕೆ ಎದುರಾಗಿ ನಿರ್ಮಾಣವಾಗಿದೆ. ಆದರೆ ಈಗ ಜನವಸತಿ ಅಗಾಧವಾದ ಕಾರಣ ಬೆಟ್ಟಕ್ಕೂ ದೇವಾಲಯಕ್ಕೂ ಬಹಳದೂರವಿರುವಂತೆ ಭಾಸವಾಗುತ್ತದೆ.

## ಸ್ಥಾನಕರೂಪ

ಆಂಜನೇಯನ ದೇವಾಲಯದಲ್ಲಿ ದಶಾವತಾರದ ಶಿಲ್ಪಗಳನ್ನು ಮೂಡಿಸಲಾಗಿದೆ. ಸುಮಾರು ನೂರಿನ್ನೂರು ವರ್ಷಗಳಷ್ಟು ಹಳೆಯದಾದ ಇದನ್ನು ದೇವಾಲಯದ ಮುಂಭಾಗದ ಗೂಡುಗಳಲ್ಲಿ ಕಾಣಬಹುದು. ಇವುಗಳಲ್ಲಿ ನರಸಿಂಹನ ಸ್ಥಾನಕ ಶಿಲ್ಪವೂ ಗಮನಸೆಳೆಯುವಂತಿರುವುದು. ಇದಲ್ಲದೆ ವೆಂಕಟೇಶ ದೇವಾಲಯ ಮತ್ತು ಗೋವಿಂದರಾಜ ದೇವಾಲಯಗಳಲ್ಲಿನ ಕಂಬಗಳು ಸಹ ನರಸಿಂಹನ ವಿಭಿನ್ನ ಕ್ರಿಯೆಗಳ ಉಬ್ಬು ಶಿಲ್ಪಗಳನ್ನೊಳಗೊಂಡಿರುತ್ತವೆ. ಕಂಬವನ್ನು ಸೀಳಿಹೊರಬರುತ್ತಿರುವ ನರಸಿಂಹ, ದೈ[illegible]ನ ಹೊಟ್ಟೆಯನ್ನು ತನ್ನ ಉಗುರುಗಳಿಂದ ಸೀಳುತ್ತಿರುವ ಶಿಲ್ಪಗಳು ಗಮನಾರ್ಹ. ಆಂಜನೇ[illegible]ು ದೇವಾಲಯದ ಮುಖಮಂಟಪದಲ್ಲಿ ನರಸಿಂಹನ ಚೆಲುವಾದ ಮೂರ್ತಿಯಿದೆ.

## ನೃಸಿಂಹ ತೀರ್ಥ

ಮುಳಬಾಗಲಿನಿಂದ ತಿರುಪತಿಗೆ ಯಾತ್ರೆ ಮಾಡುವವರು ಕೆಲವು ಕ್ಷಣಗಳ ಕಾಲ ವಿರಮಿಸಿ ನಿಸರ್ಗದ ಚೆಲುವನ್ನು ಆರಾಧಿಸಿ, ವಿಸ್ತಾರವಾದ ಕೊಳವನ್ನು ತೃಪ್ತಿಯಾಗುವಂತೆ ನೋಡಿ ಯತಿವರೇಣ್ಯರ ಆರಾಧನೆಯನ್ನು ಮಾಡಿ ನರಸಿಂಹದೇವರಿಗೆ ಕೈಮುಗಿದು ಸಾಗಲು ನೆರವಾಗುವ ಸ್ಥಳವೇ ನರಸಿಂಹತೀರ್ಥ. ಸುಮಾರು ಆರುನೂರು ವರ್ಷಗಳ ಹಿಂದೆ ಯತಿವರೇಣ್ಯರು ನಿರಾತಂಕವಾಗಿ ತಮ್ಮ ವಿದ್ಯಾಬುದ್ಧಿಗಳ ಸಾಧನೆ ಮಾಡಿ ಇತರ ಶಿಷ್ಯರಿಗೆ ಧಾರೆಯೆರೆದ ತಪೋಭೂಮಿಯಾಗಿ ಈ ಸ್ಥಳವನ್ನು ಗಮನಿಸಬಹುದು. ಶ್ರೀಪಾದರಾಜ ಯತಿಗಳ ಆಳೆತ್ತರ ಮತ್ತು ವಿಸ್ತಾರಕ್ಕೆ ನಿಲುಕದ ಬೃಂದಾವನವನ್ನು ನಾವಿಲ್ಲಿ ಕಾಣಬಹುದು. ಪ್ರತಿನಿತ್ಯವೂ ಪೂಜೆ, ನೈವೇದ್ಯಗಳು ಪ್ರಸಾದ ವಿತರಣೆ ನಡೆಯುವ ಧಾರ್ಮಿಕ ತಪೋಭೂಮಿಯಾಗಿರುವ ಈ ಸ್ಥಳದಲ್ಲಿ ಯೋಗಾನರಸಿಂಹಸ್ವಾಮಿಯ ಗುಹಾಲಯವು ಕಣ್ಮನಗಳನ್ನು ಸೆಳೆಯುವಂತಿರುವುದಾಗಿದೆ.

ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ ನಮ್ಮ ಎಡಭಾಗದಲ್ಲಿ ವ್ಯಾಸರಾಜರು ಪ್ರತಿಷ್ಠಿಸಿ ಆರಾಧಿಸಿದ ಆಂಜನೇಯನ ಸನ್ನಿಧಿಯಿದೆ. ಈ ವಿಶಾಲವಾದ ಮುಖಮಂಟಪ ದಂತಿರುವ ಕೋಣೆಯನ್ನು ದಾಟಿ ಸ್ವಲ್ಪ ಎತ್ತರವಾದ ಸ್ಥಳದಲ್ಲಿ ನಿಂತು ಬಂಡೆಯಲ್ಲೊಂದು ರೂಪದಳೆದಂತಿರುವ ಯೋಗಾನರಸಿಂಹಸ್ವಾಮಿಯ ದರ್ಶನವನ್ನು ಮಾಡಬಹುದು. ಸ್ವಾಮಿಯ ಯೋಗಮುದ್ರೆ, ಗಂಭೀರ ನಿಲುವುಗಳು ಎಂಥವರನ್ನೂ ಒಂದು ಕ್ಷಣ ಮಂತ್ರಮುಗ್ಧರನ್ನಾಗಿಸುತ್ತದೆ. ಈ ಸ್ವಾಮಿಯನ್ನು ಬಹಳ ಹಿಂದೆ ಅಂಗಾರದಲ್ಲಿ ಬರೆದು ಅರ್ಚಿಸಲಾಗುತ್ತಿತ್ತೆಂಬ ಪ್ರತೀತಿಯಿದೆ. ಅನಂತರದ ಕಾಲದಲ್ಲಿ ಶುದ್ಧಮನಸ್ಸಿನ ಉದ್ಭವರೂಪಿಯಾಗಿ ಸ್ವಾಮಿಯು ಕಂಡು ಬಂದಿರುತ್ತಾನೆ. ಈತನನ್ನು ತಂತ್ರಸಾರೋಕ್ತವಾದ ರೀತಿಯಲ್ಲಿ ಪೂಜಿಸಿ ಅರ್ಚಿಸಿದ ಶ್ರೀಪಾದರಾಜರು ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕಾಗಿ ದಂಡಕವೊಂದನ್ನು ರಚಿಸಿರುತ್ತಾರೆ. ಅದು ಇಂದಿಗೂ ಸಹ ಶ್ರೀಪಾದರಾಜ ವಿರಚಿತ 'ನರಸಿಂಹ ಪ್ರಾದುರ್ಭಾವ ದಂಡಕ'ವೆಂದು ಪ್ರಸಿದ್ಧವಾಗಿದೆ.

ಶ್ರೀಪಾದರಾಜ ಸಾರ್ವಭೌಮರಿಗೆ ಬುದ್ಧಿಬಲವನ್ನು, ಸ್ಥೈರ್ಯವನ್ನು ನೀಡಿದ ನರಸಿಂಹಸ್ವಾಮಿಯನ್ನು ಮುಳಬಾಗಲಿನ ನರಸಿಂಹತೀರ್ಥದಲ್ಲಿ ನಾವು ಇಂದಿಗೂ ದರ್ಶಿಸಬಹುದಾಗಿದೆ. ಕರ್ನಾಟಕದ ಮೂಡಣ ದಿಕ್ಕಿನಿಂದ ನರಸಿಂಹನ ಪ್ರಭಾವದ ಮಂದಮಾರುತವು ಹರಡುತ್ತಿರುವುದಕ್ಕೆ ಇಲ್ಲಿನ ಯೋಗಾನರಸಿಂಹನೇ ನಿದರ್ಶನವಾಗಿದೆ. ಈ ಸ್ಥಳಕ್ಕೆ ಸಮೀಪದಲ್ಲಿ ರಾಜ್ಯ ಸರ್ಕಾರದ ಪ್ರವಾಸೋದ್ಯಮ ಇಲಾಖೆಯ ವಸತಿಗೃಹವಿದೆ. ಮುಳಬಾಗಿಲು ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಕಾರಣ ಇಲ್ಲಿಗೆ ಬರಲು ಪ್ರಯಾಸಪಡಬೇಕಾದದ್ದೇನಿಲ್ಲ. ಸರ್ಕಾರದ ಲೋಕೋಪಯೋಗಿ ಇಲಾಖೆಯ ವಿಶ್ರಾಂತಿಗೃಹ ಮತ್ತಿತರ ಅಲ್ಪವೆಚ್ಚದ ವಸತಿ ಸೌಕರ್ಯಕ್ಕೆ ಇಲ್ಲಿ ಅವಕಾಶವಿದೆ.

# ಕೋನಗುಂಟ್ಲು

ಕೋನಗುಂಟ್ಲು ಎಂಬ ಗ್ರಾಮವು ಚಿಂತಾಮಣಿ ತಾಲೂಕಿನ ಬಟ್ಲಹಳ್ಳಿಗೆ ಸಮೀಪ ವಾಗಿದೆ. ಸುತ್ತಲೂ ಬೆಟ್ಟಗುಡ್ಡಗಳಿಂದ ಕೂಡಿರುವ ರಮ್ಯವಾದ ಸ್ಥಳವಾಗಿದೆ. ಚಿಂತಾಮಣಿಯಿಂದ ವಾಹನ ಸೌಕರ್ಯ ಹೊಂದಿರುವ ಇದು ಈ ತಾಲೂಕಿನ ಹಾಗೂ ಜಿಲ್ಲೆಯ ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ. ವಿಶಾಲವಾಗಿ ಹರಡಿಕೊಂಡಿರುವ ಬೆಟ್ಟಗಳ ಸಾಲಿನ ಒಂದು ತುದಿಯಲ್ಲಿ ಈ ಕ್ಷೇತ್ರದ ದೇವಾಲಯವನ್ನು ಎತ್ತರವಾದ ವೇದಿಕೆಯ ಮೇಲೆ ಕಟ್ಟಿದ್ದಾರೆ.

ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನವನ್ನು ವೆಂಕಟರಮಣ ಸ್ವಾಮಿ ಆಲಯವೆಂದು ಕರೆಯುತ್ತಾರೆ. ಕೋಲಾರ ಜಿಲ್ಲೆಯ ಗೆಜೆಟಿಯರ್‌ನಲ್ಲಿಯೂ ಸಹ ಈ ದೇವಾಲಯದ ಉಲ್ಲೇಖವಿದೆ. ಆದರೆ ಇಲ್ಲಿ ಯಾವುದೇ ವಿಗ್ರಹವಿಲ್ಲ. ಇದಕ್ಕೆ ಪರ್ಯಾಯವಾಗಿ ಇಲ್ಲಿರುವ ರೂಪವು ಟೋಟೆಂ ಆರಾಧನೆಯನ್ನು ಸಾದರ ಪಡಿಸುವಂತಿದೆ. ಟೋಟೆಮ್ ಎಂದರೆ ಒಂದು ಕುಲವಾಗಲಿ, ವ್ಯಕ್ತಿಯಾಗಲಿ ತನಗೆ ಸಂಬಂಧಪಟ್ಟಿದ್ದು ಎಂಬ ಭಾವನೆಯಿಂದ ಲಾಂಛನವಾಗಿ ಪರಿಗಣಿಸಿದ ವಸ್ತು ಇದು ಪ್ರಾಣಿ ಅಥವಾ ಸಸ್ಯ ಅಥವಾ ಸಂಕೇತ.

ವೆಂಕಟರಮಣಸ್ವಾಮಿ ಅಥವಾ ನರಸಿಂಹ ಸ್ವಾಮಿಯೆಂದು ಇಲ್ಲಿನ ದೇವರನ್ನು ಹೆಸರಿದ್ದಾರೆ. ಯಾವುದೇ ಸ್ಪಷ್ಟ ಆಕಾರದ ಶಿಲ್ಪವನ್ನು ಹೊಂದಿರದ ಇಲ್ಲಿನ ಸ್ವಾಮಿಯನ್ನು ಉದ್ಭವ ಮೂರ್ತಿಯೆಂದು ಹೇಳುತ್ತಾರೆ. ಇಲ್ಲಿನ ಮೂಲ ದೇವರನ್ನು ನರಸಿಂಹಸ್ವಾಮಿಯೆಂದು ಕರೆಯುವುದಾದರೆ, ಉತ್ಸಾವಾದಿಗಳು ನಡೆಯುವುದು ವೆಂಕಟರಮಣಸ್ವಾಮಿ ಹೆಸರಿನಿಂದಲೇ ಎಂಬುದು ಇಲ್ಲಿ ತಿಳಿದಿರಬೇಕಾದ ವಿಚಾರ.

ನಮ್ಮ ನಾಡಿನ ಅನೇಕ ದೇವಾಲಯಗಳ ಹಿನ್ನೆಲೆಯಲ್ಲಿ ಸ್ವಾರಸ್ಯ ಹಾಗೂ ಕುತೂಹಲಕಾರಿಯಾದ ಕತೆಗಳ ಹಂದರವಿದೆ. ಈ ದೇವಾಲಯದ ಬಗೆಗಿರುವ ಕತೆಯೊಂದು ಇಂತಹದ್ದಾಗಿದೆ. ಇದರಿಂದ ಜಾನಪದರಲ್ಲಿ ದೈವಿಕತೆಯ ಬಗೆಗಿದ್ದ ದೃಢವಾದ ವಿಶ್ವಾಸ ಮತ್ತು ಅಚಲವಾದ ಶ್ರದ್ಧೆಗಳು ವ್ಯಕ್ತವಾಗುತ್ತದೆ.

ಸುಮಾರು ಮುನ್ನೂರು-ನಾನೂರು ವರ್ಷಗಳ ಹಿಂದೆ ದೇವಾಲಯಕ್ಕೆ ಸಮೀಪವಾಗಿರುವ ಗ್ರಾಮದಲ್ಲಿ ಪ್ರತಿಷ್ಠವಾದ ಕುಟುಂಬವೊಂದಿತ್ತು. ಇವರ ಮನೆಯು ಗೋವುಗಳು ಸಂಪತ್ತಿನಿಂದ ಸಮೃದ್ಧವಾಗಿತ್ತು. ಇಂತಹ ಗೋಸಮೂಹದಲ್ಲಿದ್ದ ಕಾಮಧೇನುವೊಂದು ಪ್ರತಿನಿತ್ಯವೂ ಸಮೀಪದ ಅರಣ್ಯದಲ್ಲಿದ್ದ ಹುತ್ತವೊಂದರಲ್ಲಿ ತನ್ನ ಹಾಲನ್ನು ಸುರಿಸಿ ಬರೀ ಕೆಚ್ಚಲಿನಿಂದ ಮನೆಗೆ ಬರುತ್ತಿತ್ತು. ಗೋಪಾಲಕನಿಂದ ಈ ಸಂಗತಿಯನ್ನರಿತುಕೊಂಡ ಮನೆಯ ಯಜಮಾನರು ಆಳುಕಾಳುಗಳೊಂದಿಗೆ ಆ ಸ್ಥಳಕ್ಕೆ ಧಾವಿಸಿದರು. ಈ ಸ್ಥಳದಲ್ಲಿ ಪರಿಶೀಲಿಸಿದಾಗ ಸ್ವಾಮಿಯು ಹೆಡೆಯಾಕಾರದಲ್ಲಿ ಉದ್ಭವಿಸಿದನು. ಇಂದಿಗೂ ಸಹ

ಇವರ ಮನೆತನದವರು ಈ ದೇವರ ಒಕ್ಕಲಾಗಿ ಪೂಜಾದಿಗಳನ್ನು ನೆರವೇರಿಸಿಕೊಂಡು ಬರುತ್ತಿರುವವರು. ಇದರೊಂದಿಗೆ ಸುತ್ತಲಿನ ಮತ್ತು ದೂರದ ನೂರಾರು ಕುಟುಂಬಗಳು ಈತನ ಆರಾಧಕರಾಗಿದ್ದಾರೆ.

ಹಿಂದೆ ಸಣ್ಣ ದೇವಾಲಯವೊಂದು ಅಸ್ತಿತ್ವದಲ್ಲಿದ್ದ ಸ್ಥಳದಲ್ಲಿ ಇಂದು ವಿಶಾಲ ದೇವಾಲಯವನ್ನು ನಿರ್ಮಿಸಿದ್ದಾರೆ. ದೂರದಿಂದಲೇ ಕಂಗೊಳಿಸುವ ಗೋಪುರ ಅಂದವಾಗಿದೆ. ದೇವಾಲಯದ ಸನ್ನಿಹಕ್ಕೆ ಬರುತ್ತಿದ್ದಂತೆ ಅಕ್ಕಪಕ್ಕಗಳಲ್ಲಿ ದ್ವಾರಪಾಲಕರಿಗಾಗಿ ಪ್ರತ್ಯೇಕವಾದ ಮಂಟಪಗಳಿರುವುದು ಗೋಚರಿಸುತ್ತದೆ. ಮೆಟ್ಟಲುಗಳನ್ನೇರಿ ಒಳಗೆ ಪ್ರವೇಶಿಸಿದಂತೆ ವಿಶಾಲ ವಾದ ಅಂಗಳವನ್ನು ಕಾಣುತ್ತೇವೆ. ಇಲ್ಲಿ ಬಾವಿ, ಮಂಟಪಗಳು, ವಾಸಕ್ಕೆ ಯೋಗ್ಯವಾದ ಮನೆಗಳನ್ನು ನಿರ್ಮಿಸಿರುತ್ತಾರೆ. ಇಲ್ಲಿ ದೇವಾಲಯದ ಪರಿಚಾರಕರು ಅರ್ಚಕ ಕುಟುಂಬ ದವರುಗಳು ವಾಸಮಾಡಿ ಕೊಂಡಿದ್ದಾರೆ.

ದೇವಾಲಯದ ನವರಂಗವು ವಿಸ್ತಾರವಾಗಿದೆ. ಶುಭ್ರವಾಗಿ ಕಂಗೊಳಿಸುತ್ತಿರುವ ಈ ಭಾಗದಲ್ಲಿ ಪ್ರಶಾಂತವಾದ ವಾತಾವರಣವು ಕಂಡುಬರುತ್ತದೆ. ನವರಂಗವನ್ನು ದಾಟಿ ಸುಕನಾಸಿಯಲ್ಲಿ ಬಂದು ನಿಂತು ದೇವರ ದರ್ಶನವನ್ನು ಮಾಡಬಹುದು.

ಏಪ್ರಿಲ್-ಮೇ ತಿಂಗಳಿನಲ್ಲಿ ಇಲ್ಲಿ ನಡೆಯುವ ರಥೋತ್ಸವವು ವೈಭವದಿಂದ ಕೂಡಿರುತ್ತದೆ. ಚೈತ್ರ ಬಹುಳ ಸಪ್ತಮಿಯಂದು ವೆಂಕಟರಮಣ ಸ್ವಾಮಿಯ ಬ್ರಹ್ಮ ರಥೋತ್ಸವವು ನೆರವೇರುತ್ತದೆ. ಮೈಸೂರು ಅರಸರಿಗೆ ವೆಂಕಟರಮಣ ಸ್ವಾಮಿಯ ಬಗೆಗಿದ್ದ ಅಪಾರವಾದ ಭಕ್ತಿ-ಶ್ರದ್ಧೆಗಳ ಸಾಂಕೇತಿಕವಾಗಿ ಇಲ್ಲಿ ವಸತಿಗೆ ಅನುಕೂಲವಾಗುವಂತೆ ಕೆಲವು ಮಂಟಪಗಳನ್ನು ನಿರ್ಮಿಸಿಕೊಟ್ಟಿದ್ದಾರೆ.

ಪ್ರಗತಿಯ ಹಾದಿಯಲ್ಲಿ ಸಾಗಿರುವ ದೇವಾಲಯಗಳಲ್ಲಿ ಕೋನಗುಂಟ್ಲುವಿನ ದೇವಾಲಯವೂ ಒಂದಾಗಿರುವುದು ನಮ್ಮೆಲ್ಲರ ಸುದೈವವೆಂದು ಹೇಳಬಹುದು. ಮದುವೆ, ಮುಂಜಿ ಮೊದಲಾದ ಧಾರ್ಮಿಕ ಸಮಾರಂಭಗಳು ಇಲ್ಲಿ ನೆರವೇರುವವು. ಇಲ್ಲಿನ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ನಡೆಯುವ ಉತ್ಸವಾದಿಗಳಲ್ಲಿ ನಡೆಯುವ ಕೋನಗುಂಟ್ಲುವಿನ ವೆಂಕಟರಮಣ ಸ್ವಾಮಿಯ ಬ್ರಹ್ಮರಥೋತ್ಸವಕ್ಕೆ ಅಪಾರವಾದ ಜನಮನ್ನಣೆಯಿದೆ. ಮುಜ ರಾಯಿ ಇಲಾಖೆಯ ಪ್ರಧಾನ ದೇವಾಲಯಗಳಲ್ಲೊಂದಾಗಿ ಈ ಸ್ಥಳವು ಗಳಿಸಿರುವ ಹಿರಿಮೆ-ಗರಿಮೆಗಳ ಸುವ್ಯಕ್ತವಾಗಿದೆ. ಇದೊಂದು ರಮಣೀಯ ಪುಣ್ಯ ಕ್ಷೇತ್ರವಾಗಿ ಜನರ ಮೆಚ್ಚುಗೆಗೆ ಪಾತ್ರವಾಗಿದೆ.

ಮಿಟ್ಟೇಮರಿ, ಗುಡಿಬಂಡೆ, ಕೋನಗುಂಟ್ಲು ಈ ಮೂರು ಸ್ಥಳಗಳಲ್ಲಿಯೂ ಶಿಲ್ಪಿಯ ಕೆಲಸವನ್ನು ಅರಿಯದ ಗುಂಡಿನ ರೀತಿಯಲ್ಲಿರುವ ಸಾಲಿಗ್ರಾಮವನ್ನು ಪೂಜಿಸಲಾಗು ತ್ತಿದೆ. ಕಂಡ ಕಂಡ ಕಲ್ಲುಗಳನ್ನೆಲ್ಲ ಯಾರು ಪೂಜಿಸುವುದಿಲ್ಲ. ಪೂಜಾರ್ಹವಾದ ನಂಟನ್ನು ಪಡೆದು ಕೊಂಡಿರುವ ಅಸ್ಪಷ್ಟ ರೂಪಗಳನ್ನು ಈ ಜಾಗದಲ್ಲಿ ಆರಾಧಿಸಲಾಗುತ್ತಿದೆ.

ಜಾನಪದ ನಂಬಿಕೆಗೆ ಸಹಜವಾದ ಆಕಾರದಲ್ಲಿ ಮೂಲ ಸಾಮಗ್ರಿಯೊಂದು ಪೂಜನೀಯವಾಗಿ ಉಳಿದಿರುವುದಕ್ಕೆ ಈ ಕ್ಷೇತ್ರಗಳು ನಿದರ್ಶನವಾಗಿದೆ. ಅದರ ಮೇಲೆ ಮೈದಳೆದು ಬಂದಿರುವ ಗುಡಿಗಳು ವಿಸ್ತಾರವಾಗಿ ಅಂದವಾಗಿವೆ. ಧಾರ್ಮಿಕ ಸ್ವರೂಪ ಏನೇ ಇದ್ದರೂ, ಎಷ್ಟೇ ಬದಲಾಗಿರುವ ಮೂಲಮೂರ್ತಿಯ ಪಾವಿತ್ರ್ಯದ ಬಗ್ಗೆ ಶ್ರದ್ಧೆಯು ಅಚಲವಾಗಿ ಉಳಿದಿದೆ. ಇಲ್ಲಿನ ದೇವಾಲಯಗಳ ಹಿರಿಮೆ ಅಡಗಿರುವುದು ಶಿಲ್ಪಿಯ ಕೆಲಸದಲ್ಲಲ್ಲ. ಜಾನಪದರ ಆಂತರ್ಯದಲ್ಲಿ ಎಂಬುದನ್ನು ಮನವರಿಕೆ ಮಾಡಿಕೊಡುತ್ತಿವೆ.

ನರಸಿಂಹ, ಶ್ರೀನಿವಾಸ ಎಂಬ ದೈವಿಕ ಭಾವನೆಯಿಂದ ಈ ಆಲಯಗಳಲ್ಲಿರುವ ಆಕಾರಗಳನ್ನು ಪೂಜಿಸಿಕೊಂಡು ಬರುವುದರ ಮೂಲಕ ಭಕ್ತಸಮೂಹವು ತಮ್ಮ ಭಕ್ತಿ ಗೌರವಗಳನ್ನು ಸಲ್ಲಿಸುತ್ತಿದೆ. ಇದು ಒಂದು ರೀತಿಯಲ್ಲಿ ವಿಶಿಷ್ಟ ಮತ್ತು ಅನನ್ಯವೆಂದು ನಿಸ್ಸಂದೇಹವಾಗಿ ನುಡಿಯಲಡ್ಡಿಯಿಲ್ಲ.

# ಗುಡಿಬಂಡೆ

ಕೋಲಾರ ಜಿಲ್ಲೆಯ ತೀರಾ ಹಿಂದುಳಿದ ತಾಲೂಕು ಕೇಂದ್ರಗಳಲ್ಲೊಂದಾಗಿರುವ ಗುಡಿಬಂಡೆಯು ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶವಾಗಿದೆ. ನಂದಿದುರ್ಗದ ಬೆಟ್ಟ ಸಾಲಿನ ಒಂದು ಭಾಗವಾಗಿ ಇಲ್ಲಿನ ಚಿತ್ರವನ್ನು ಕಾಣಬಹುದು.

ಜಿಲ್ಲಾ ಕೇಂದ್ರವಾದ ಕೋಲಾರಕ್ಕೆ ತೊಂಬತ್ತೈದು ಕಿ.ಮೀ. ದೂರಹಲ್ಲಿಯೂ, ಉಪ ವಿಭಾಗ ಕೇಂದ್ರದ ಚಿಕ್ಕಬಳ್ಳಾಪುರಕ್ಕೆ ನಲವತ್ತು ಕಿ.ಮೀ. ದೂರದಲ್ಲಿಯೂ ಇರುವ ಗುಡಿಬಂಡೆಯ ಕೆರೆ, ಕೋಟೆ-ದೇವಾಲಯಗಳು ಪ್ರಸಿದ್ಧಿ ಪಡೆದಿವೆ. ಬಂಡೆಯ ಬುಡವೊಂದರಲ್ಲಿ ಪಟ್ಟಣವು ತನ್ನ ಅಸ್ತಿತ್ವವನ್ನು ಹೊಂದಿದ್ದರಿಂದ ಇದು ಗುಡಿಬಂಡೆ ಯಾಯಿತು. ಹರಿವಳಿ ಬೈರೇಗೌಡನೆಂಬ ಪಾಳೆಗಾರನು ಗುಡಿಬಂಡೆ ಪಾಳ್ಯವನ್ನು ನಿರ್ಮಿಸಿರುತ್ತಾನೆ. ಬೆಟ್ಟದ ಮೇಲಿನ ಕೋಟೆಯು ವಿಶಿಷ್ಟವಾಗಿವೆ. ಬಂಡೆಯ ದ್ವಾರಗಳು, ಸೋಪಾನಗಳು, ಸಿಹಿನೀರಿನ ದೋಣೆಗಳು, ಗುಡಿಗಳು, ಹಗೇವುಗಳು, ಮದ್ದಿನ ಉಗ್ರಾಣಗಳು ಇಂದಿಗೂ ಇಲ್ಲಿ ಕಾಣಲು ಸಾಧ್ಯವಿದೆ. ಸುರಸದ್ಮಗಿರಿ ಬೆಟ್ಟದ ಮೇಲಿನ ದೇವಾಲಯಗಳು ಸುತ್ತಮುತ್ತಲ ಪ್ರಾಂತ್ಯದಲ್ಲೆಲ್ಲ ಹೆಸರುವಾಸಿಯಾಗಿವೆ.

ಅಹೋಬಿಲ ನರಸಿಂಹಸ್ವಾಮಿಯ ಹೆಸರಿನಲ್ಲಿ ಗುಡಿಬಂಡೆಯ ಊರಿನ ಪ್ರವೇಶ ದ್ವಾರದಲ್ಲಿರುವ ಗುಡ್ಡದ ಮೇಲೆ ದೇವಸ್ಥಾನವನ್ನು ನಿರ್ಮಿಸಲಾಗಿದೆ. ನೈಸರ್ಗಿಕ ಗುಹೆಯಾಗಿದ್ದ ಇಲ್ಲಿ ಗರ್ಭಗುಡಿ, ಹೊರ ಅಂಕಣಗಳನ್ನು ಕಟ್ಟಿದ್ದಾರೆ. ಹೊರ ಅಂಕಣದ ಮಂಟಪದಲ್ಲಿ ದ್ವಾರಪಾಲಕರ ವಿಗ್ರಹಗಳಿವೆ. ಇಲ್ಲಿಯೇ ಗೋಡೆಯ ಮೇಲೆ ವಾಮನ, ರಾಮ, ವರಾಹ ಮತ್ತು ಉಗ್ರನರಸಿಂಹದ ಉಬ್ಬುಶಿಲ್ಪಗಳನ್ನು ಬಿಡಿಸಿಟ್ಟಿದ್ದಾರೆ. ಗರ್ಭಗುಡಿಯಲ್ಲಿ ಗುಂಡಿನ ಆಕಾರದಲ್ಲಿ ಪೂಜಿಸುತ್ತಿರುವ ಉದ್ಭವ ಶಿಲೆಯಿದೆ. ಅಪಾರವಾದ ಶ್ರದ್ಧೆ ಭಕ್ತಿಗಳಿಂದ

ಇದನ್ನು ನರಸಿಂಹಸ್ವಾಮಿಯೆಂದು ಪೂಜಿಸಿ ಆರಾಧಿಸಿಕೊಂಡು ಬರಲಾಗುತ್ತಿದೆ. ಗವಿಯ ಸುತ್ತಲೂ ಗೋಡೆಯನ್ನು ಕಟ್ಟಲಾಗಿದೆ. ಗರ್ಭಗೃಹಕ್ಕೆ ಸುಂದರವಾದ ಪ್ರದಕ್ಷಿಣಾ ಪಥವನ್ನು ವಿಂಗಡಿಸಲಾಗಿದೆ.

ಹೀಗೆ ಗುಡಿಬಂಡೆಯ ಅಹೋಬಿಲ ನರಸಿಂಹಸ್ವಾಮಿಯು ಆಂಧ್ರದ ಸುಪ್ರಸಿದ್ಧವಾದ ಅಹೋಬಿಲ ಕ್ಷೇತ್ರದೊಂದಿಗೆ ಪೂಜ್ಯನೀಯವಾದ ಸಂಬಂಧವನ್ನು ಹೊಂದಿ ಭಕ್ತರ ಮನೆ-ಮನೆಗಳಲ್ಲಿ ನೆಲೆಸಿರುತ್ತಾನೆ. ಅವರ ಸಂಕೇತವಾಗಿ ಇಲ್ಲಿ ಪ್ರತಿ ವರ್ಷವೂ ಆತನ ಆರಾಧನೆ ನಡೆಯುತ್ತಿದೆ.

# ಮಿಟ್ಟೇಮರಿ

ಮಿಟ್ಟೇಮರಿಯು ಬಾಗೇಪಲ್ಲಿ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಚಿಂತಾಮಣಿಯಿಂದ ಬಾಗೇಪಲ್ಲಿಗೆ ಹೋಗುವ ಮುಖ್ಯರಸ್ತೆಯಲ್ಲಿ ಈ ಗ್ರಾಮವು ಸಿಗುತ್ತದೆ. ಬಾಗೇಪಲ್ಲಿಗೆ ಸುಮಾರು ಒಂಬತ್ತು ಮೈಲಿಗಳ ದೂರದಲ್ಲಿರುವ ಈ ಊರಿಗೆ ಗರುಡಾದ್ರಿಪುರವೆಂಬ ಹೆಸರಿತ್ತು, ಕಾಲಕ್ರಮೇಣ ಇದು 'ಮೀಟಾಪುರಿ'ಯಾಗಿ ಈಗ ಮಿಟ್ಟೇಮರಿಯೆಂದಾಗಿದೆ. ಈ ಊರಿಗೆ ಸುಮಾರು ಎರಡು ಮೈಲಿಗಳ ದೂರದಲ್ಲಿ ಚಿತ್ರಾವತಿ ನದಿಯು ಹರಿಯುತ್ತಿದೆ.

ಮಿಟ್ಟೇಮರಿಯ ನರಸಿಂಹಸ್ವಾಮಿ ದೇವಾಲಯವು ಈ ಜಿಲ್ಲೆಯಲ್ಲಿ ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ. ಊರಿಗೆ ಹೊಂದಿಕೊಂಡಂತಿರುವ ಆಲಯವು ಎತ್ತರವಾದ ಸ್ಥಳದಲ್ಲಿದೆ. ಸುಮಾರು ೩೦-೪೦ ಮೆಟ್ಟಿಲುಗಳನ್ನೇರಿ ದೇವಾಲಯವನ್ನು ತಲುಪಬಹುದು. ಮಹಾದ್ವಾರದಲ್ಲಿ ಎರಡು ಮಂಟಪಗಳಿವೆ. ಒಂದರಲ್ಲಿ ಆಂಜನೇಯ, ಮತ್ತೊಂದರಲ್ಲಿ ಗರುಡ ಮೂರ್ತಿಗಳಿವೆ. ಗರುಡ ವಿಗ್ರಹವು ಸುಮಾರು ಮೂರು ಅಡಿ ಎತ್ತರವಾಗಿದೆ. ಸುಂದರವಾದ ಕರಿಯ ಕಲ್ಲಿನಲ್ಲಿ ಈ ವಿಗ್ರಹವನ್ನು ಕಡೆಯಲಾಗಿದೆ.

ದೇವಸ್ಥಾನದ ಪ್ರಾಕಾರವು ಕಲ್ಲಿನಿಂದ ಕೂಡಿದ್ದು ಪ್ರಾಕಾರದೊಳಗೆ ಮುಖಮಂಟಪ, ನವರಂಗ, ಗರ್ಭಗೃಹಗಳಿಂದ ಕೂಡಿದ ದೇವಾಲಯವು ಕಂಗೊಳಿಸುತ್ತಿದೆ. ನವರಂಗದಲ್ಲಿರುವ ಕಂಬಗಳ ಮೇಲೆ ವಿಷ್ಣುವಿನ ಅವತಾರಗಳ ಉಬ್ಬು ಚಿತ್ರಗಳನ್ನು ಕೆತ್ತಿದ್ದಾರೆ. ಕಂಬಗಳ ಮಧ್ಯೆ ಒಳಚಾವಣಿಯಲ್ಲಿ ಅಷ್ಟದಿಕ್ಪಾಲಕರ ಸುಂದರವಾದ ಕೆತ್ತನೆಗಳನ್ನು ಕಾಣಬಹುದು.

ಗರ್ಭಗೃಹದಲ್ಲಿ ಉದ್ಭವಮೂರ್ತಿ ಮತ್ತು ಪ್ರತಿಷ್ಠಿತ ಮೂರ್ತಿಗಳಿವೆ. ಇಲ್ಲಿರುವ ಪ್ರತಿಷ್ಠಿತ ಮೂರ್ತಿಯು ಲಕ್ಷ್ಮೀನಾರಾಯಣ. ಆಸೀನ ಭಂಗಿಯಲ್ಲಿರುವ ನಾರಾಯಣ ತನ್ನ ತೊಡೆಯ ಮೇಲೆ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿದ್ದಾನೆ. ಸುಮಾರು ಮೂರು ಅಡಿಗಳ ಎತ್ತರವಿರುವ ವಿಗ್ರಹವು ಸುಂದರವಾಗಿದ್ದು, ಒಂದೇ ಗರ್ಭಗೃಹದಲ್ಲಿ ವಿಭಿನ್ನ ವಿಷ್ಣುಮೂರ್ತಿಗಳ ಪ್ರತಿಷ್ಠೆಯ ಅಪರೂಪತೆಗೆ ನಿದರ್ಶನವಾಗಿದೆ.

ಇಲ್ಲಿರುವ ಉದ್ಭವಮೂರ್ತಿ ಲಕ್ಷ್ಮೀನರಸಿಂಹ. ಸುಮಾರು ಒಂದೂವರೆ ಅಡಿ ಎತ್ತರವಿರುವ ಸ್ವಾಮಿಯ ಆಕಾರ ಅಸ್ಪೃಷ್ಟ. ಅಭಿಷೇಕದ ದಿನಗಳಲ್ಲಿ ಈ ದೇವರ ಪ್ರತಿ ರೂಪವನ್ನು ಮೇಣದಂತಹ ಮೆದುವಾದ ಸಾಧನದ ಮೇಲೆ ಅಚ್ಚೊತ್ತಿ ತೆಗೆದುಕೊಡುತ್ತಾರೆ. ಇದರಿಂದ ಬರಿಗಣ್ಣಿಗೆ ಅಸ್ಪಷ್ಟವಾದ ರೂಪವು ಒಂದು ಆಕಾರ ಹೊಂದಿರುವುದನ್ನು ಗುರುತಿಸಬಹುದು.

ಇಲ್ಲಿ ನಡೆಯುವ ಪೂಜಾದಿಗಳು ಲಕ್ಷ್ಮೀನರಸಿಂಹಸ್ವಾಮಿಗೆ ನೆರವೇರುತ್ತದೆ. ಪಾಂಚರಾತ್ರಾಗಮ ಪ್ರಸಿದ್ಧಿಯಿಂದ ಮಿಟ್ಟೇಮರಿಯಲ್ಲಿ, ಫಾಲ್ಗುಣ ಬಹುಳ ಪಾಡ್ಯಮಿಯಂದು ಬ್ರಹ್ಮೋತ್ಸವವು ನೆರವೇರುತ್ತದೆ. ಸುಮಾರು ಎಂಟು ದಿನಗಳ ಕಾಲ ನಡೆಯುವ ಜಾತ್ರೆಯಲ್ಲಿ ಎತ್ತುಗಳು ಸೇರುತ್ತವೆ. ಇಲ್ಲಿ ನಡೆಯುವ ರಥೋತ್ಸವದ ಬಗ್ಗೆ ಪರಂಪರಾ ಗತವಾದ ನಂಬಿಕೆಯೊಂದಿದೆ. ಉತ್ಸವ ಮೂರ್ತಿಗಳನ್ನು ರಥದಲ್ಲಿ ತಂದಿರಿಸಿದ ನಂತರ ರಥದ ಮೇಲೆ ಗರುಡಪಕ್ಷಿಯು ರಥಕ್ಕೆ ಪ್ರದಕ್ಷಿಣೆ ಬರುವುದು. ನಂತರವೇ ರಥವನ್ನು ಕದಲಿಸುವುದು. ಇಲ್ಲಿ ನಡೆಯುವ ಬ್ರಹ್ಮೋತ್ಸವವು ಕದಿರಿ ನರಸಿಂಹಸ್ವಾಮಿ ರಥೋತ್ಸವದಷ್ಟೇ ಪ್ರಸಿದ್ಧವಾದದ್ದು ಮತ್ತು ಪವಿತ್ರವಾದದ್ದೆಂದು ಹೇಳುತ್ತಾರೆ. ಈ ಜಿಲ್ಲೆಯಲ್ಲಿ ನಡೆಯುವ ಪ್ರಮುಖವಾದ ಜಾತ್ರೆಗಳಲ್ಲಿ ಮಿಟ್ಟೇಮರಿಯ ಲಕ್ಷ್ಮೀನರಸಿಂಹಸ್ವಾಮಿಯ ಜಾತ್ರೆ ಪ್ರಾಶಸ್ತ್ಯ ಏದೆ.

ಮಿಟ್ಟೇಮರಿಗೆ ಮತ್ತು ಇಲ್ಲಿನ ದೇವಾಲಯಕ್ಕೆ ಸಂಬಂಧಿಸಿದಂತೆ ಮೂರು ಶಾಸನಗಳು ಇಲ್ಲಿ ದೊರೆತಿವೆ. ಇವುಗಳಲ್ಲಿ ಒಂದು ಗ್ರಾಮದ ಬಾಗಿಲಿನಲ್ಲಿ ದೊರೆತ ಶಿಲಾಶಾಸನ, ಉಳಿದ ಎರಡು ತಾಮ್ರ ಶಾಸನಗಳು. ಈ ಶಾಸನಗಳ ಕಾಲ ಸುಮಾರು ೧೬ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಹಬ್ಬಿದೆ. ಈ ಮೂರು ಶಾಸನಗಳ ಭಾಷೆ ತೆಲುಗು. ಇವು ಅಚ್ಯುತರಾಯ ಮಹಾರಾಯರ ಆಳ್ವಿಕೆಯ ಕಾಲ ಹಾಗೂ ನಾಯಕರ ಪ್ರಭುತ್ವದ ಕಾಲಕ್ಕೆ ಸಂಬಂಧಪಟ್ಟ ಶಾಸನಗಳಾಗಿವೆ. ಅಚ್ಯುತರಾಯರ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನದಲ್ಲಿ ಶ್ರೀಕರಾಳಿ ನರಸಿಂಹ ದೇವರನ್ನು ಶೃಂಗಾರ ವಾರಾನಿಧಿ, ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕ, ದೇವದೇವೋತ್ತಮ ಎಂಬಿತ್ಯಾದಿಯಾಗಿ ಸ್ತುತಿಸ ಲಾಗಿದೆ.

ಬಾಗೇಪಲ್ಲಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಬಲವಾಗಿ ಆಳಿದವರು ನಾಯಕರು. ಇವರಲ್ಲಿ ಕದಿರೆಪ್ಪ, ನರಸಿಂಹ ಎಂಬ ಹೆಸರಿನ ನಾಯಕರಿದ್ದರು. ನರಸಿಂಹನಾಯಕನಿಗೆ ಮಿಟ್ಟೇಮರಿಯ ಮೇಲೂ ಪ್ರಭುತ್ವವಿತ್ತು, ಈ ನರಸಿಂಹ ನಾಯಕನ ಕಾಲದಲ್ಲಿ ಮಿಟ್ಟೇಮರಿ ಯಲ್ಲಿ ರಾಜಕೀಯ ಬೆಳವಣಿಗೆಗಳು ನಡೆದಿದೆಯೆಂದು ಊಹಿಸಲೂ ಅವಕಾಶವಿದೆ. ಹಾಗೆಯೇ ಧಾರ್ಮಿಕ ಅಭಿವೃದ್ಧಿಯೂ ನಡೆದಿರಬೇಕು. ಇಂತಹ ನಾಯಕತನಕ್ಕೆ ಸೇರುವ ಪ್ರದೇಶವಾಗಿ ಮಿಟ್ಟೇಮರಿ ಮತ್ತು ಇಲ್ಲಿನ ದೇವಾಲಯವು ಪ್ರಸಿದ್ಧವಾಗಿ ಈ ಜಿಲ್ಲೆ ಯಲ್ಲಿಯೂ ಸಹಾ ಇಂದು ಅಪಾರ ಮನ್ನಣೆಗೆ ಪಾತ್ರವಾಗಿದೆ. .

## ರಾಯಚೂರು ಜಿಲ್ಲೆ

# ಕೊಪ್ಪರ



**ಸಾಲಿಗ್ರಾಮ ಶಿಲೆಯಲ್ಲಿ ಸ್ವಯಂವ್ಯಕ್ತನಾದ ಷೋಡಶಬಾಹು ನರಸಿಂಹದೇವರು**

ರಾಯಚೂರು ಜಿಲ್ಲೆ ದೇವದುರ್ಗ ತಾಲೂಕಿನಲ್ಲಿರುವ ಕೊಪ್ಪರ ಅಥವಾ ಕೊಪ್ಪರಹಳ್ಳಿಯು ಕೃಷ್ಣಾ ನದಿಯ ದಂಡೆಯಲ್ಲಿದೆ. ಇದೊಂದು ಪವಿತ್ರ ಕ್ಷೇತ್ರ, ನರಸಿಂಹ ಸ್ವಾಮಿಯ ಆವಾಸಸ್ಥಾನವಾಗಿರುವ ಕೊಪ್ಪೇರಹಳ್ಳಿ ಎಂಬ ಪೂರ್ವನಾಮ ಹೊಂದಿದ್ದ ಇಲ್ಲಿಗೆ ಬರಲು ದೇವದುರ್ಗದಿಂದ ಪ್ರತ್ಯೇಕವಾದ ವಾಹನ ಸೌಕರ್ಯವು ಕೂಡಾ ಧಾರಾಳವಾಗಿ ಲಭಿಸುತ್ತದೆ.

ಕುತೂಹಲಭರಿತನಾಗಿರುವ ಇಲ್ಲಿರುವ ನರಸಿಂಹಸ್ವಾಮಿಯನ್ನು ವೃಕ್ಷರೂಪದಲ್ಲಿ ಆರಾಧಿಸಲಾಗುತ್ತಿದೆ. ಇಲ್ಲಿರುವ ನರಸಿಂಹಸ್ವಾಮಿಯು ಕೇವಲ ಹಿಂದೂಗಳಿಗೆ ಮಾತ್ರವಲ್ಲದೆ ಬಹುಮನಿ ಸಂಸ್ಥಾನದ ನವಾಬರಿಗೂ ಸಹ ಸತ್ಯದ ದೇವರಾಗಿ ಕಂಡಿರುತ್ತದೆ. ಎಲ್ಲ ವರ್ಗದ ಜನರ ಆರಾಧನೆಗೆ ಪಾತ್ರವಾಗಿರುತ್ತದೆ. ಬಹುಮನಿ ಹಾಗೂ ವಿಜಯನಗರ ಅರಸರ ರಾಯಚೂರು ದೋಅಬ್ ಯುದ್ಧಗಳ ರಹಸ್ಯದಾರಿಯಲ್ಲಿ ಮುಖ್ಯಸ್ರಾಮವಾಗಿ ಕೊಪ್ಪರಕ್ಕೆ ಮಹತ್ವಸ್ಥಾನವು ಪ್ರಾಪ್ತವಾಗಿರುವುದಾಗಿದೆ.

ಕೃಷ್ಣಾನದಿಯ ದಂಡೆಯಲ್ಲಿರುವ ನರಸಿಂಹಸ್ವಾಮಿಯ ಸನ್ನಿಧಾನಕ್ಕೆ ಸಂಬಂಧಪಟ್ಟಂತೆ ಪುರಾಣ-ಸಾಹಿತ್ಯದ ಕತೆ ದೃಷ್ಟಾಂತಗಳು, ಇತಿಹಾಸ ಘಟನೆಗಳ ಪುರಾವೆಯಿದೆ. ಪುರಾಣಗಳ ಪ್ರಕಾರವಾಗಿ ಕಾರ್ಪರ ಋಷಿಗಳು ತಪಸ್ಸನ್ನಾಚರಿಸಿದ ಈ ಸ್ಥಳದಲ್ಲಿ ದೈವೀನೆಲೆಯು ಸಾಕ್ಷಾತ್ಕಾರವಾಗಿದೆ. ಯಾವ ರಾಜರೂ ಇಲ್ಲಿ ದೇವಸ್ಥಾನವನ್ನು ನಿರ್ಮಿಸುವ ಸಾಹಸಕ್ಕೆ ಕೈಹಾಕಲಿಲ್ಲ. ಆ ರೀತಿಯ ಪರಿಸ್ಥಿತಿಯೂ ಒದಗಿಬರಲಿಲ್ಲ. ಪ್ರಕೃತಿ ತನ್ನ ಮಡಿಲಿನಲ್ಲಿಟ್ಟು ಕೊಂಡು ಇಲ್ಲಿನ ಸ್ಥಳವನ್ನು ಜಾಗ್ರತ ಸನ್ನಿಧಾನವೆಂಬಂತೆ ಪೋಷಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಕರ್ಮಟ ಭಕ್ತನ ಸಾಧನೆಯ ಕಾರಣ ಭಗವಂತನು ಆವಿರ್ಭವಿಸಿದ ಸ್ಥಳವಾಗಿ ಕೊಪ್ಪರ ಕ್ಷೇತ್ರಕ್ಕೆ ಪ್ರಾಶಸ್ತ್ಯವಿರುವುದನ್ನು ಗಮನಿಸಬೇಕು. ಭಕ್ತರ ಧ್ಯಾನ ಸಾಧನೆಗಳಿಂದ ಭಗವಂತನನ್ನು ಒಲಿಸಿಕೊಳ್ಳಬಹುದೆಂಬುದಕ್ಕೆ ಕೊಪ್ಪರ ಕ್ಷೇತ್ರವು ಒಂದು ಸ್ಪಷ್ಟ ನಿದರ್ಶನವಾಗಿದೆ. ಪುರಾಣದ ಆಧಾರದಿಂದ ಪ್ರೇರಣೆಗೊಂಡ ಈ ಸ್ಥಳವು ಹಂತಹಂತ ವಾಗಿ ಬೆಳವಣಿಗೆ ಹೊಂದಿದ್ದು ಪವಿತ್ರಸ್ಥಳವಾಗಿ ಪರಿವರ್ತನೆಗೊಂಡು ಶೋಭಿಸುತ್ತಿದೆ.

## ವೃಕ್ಷೋದ್ಭವ ಸ್ವಾಮಿ

ಶ್ರೀಹರಿಯು ವಾಸವಾಗಿದ್ದ ಅಶ್ವತ್ಥವೃಕ್ಷವು ಪೂರ್ತಿ ಒಣಗಿಹೋದ ಕಾರಣ ಮರದ ರೆಂಬೆಗಳು ಒಂದೊಂದಾಗಿ ಮುರಿದು ಬೀಳಲಾರಂಭವಾದವು. ಒಂದೊಂದು ಟೊಂಗೆಯೊಂದಿಗೆ ಒಂದೊಂದು ನರಸಿಂಹ ಸಾಲಿಗ್ರಾಮಗಳು ಬೀಳತೊಡಗಿದವು. ಆಗಿನ ಅರ್ಚಕರಾದ ಹರಿಯಾಚಾರ್ಯರು ಮರದಿಂದ ಕೆಳಗೆ ಬಿದ್ದ ಸಾಲಿಗ್ರಾಮಗಳನ್ನು ಸಂಗ್ರ ಹಿಸಿದರು. ನೂರಾರು ವರ್ಷಗಳಿಂದ ಥಳಥಳಿಸುತ್ತಿದ್ದಂತಹ ವೃಕ್ಷವು ಒಣಗಿಹೋಗಿ ಅದರ ಮೂಲವು ಮಾತ್ರ ಮೋಟುಗೂಟದಂತೆ ವಿರಾಜಿಸುತ್ತಿತ್ತು. ಸಕಲ ಜೀವರಾಶಿಗಳಿಗೆ ವೃಕ್ಷಸಮೂಹಕ್ಕೆ ಒದಗಿಬರುವ ಅಂತ್ಯವು ಇದಕ್ಕೂ ಉಂಟಾಯಿತೆಂದು ಹೇಳಬಹುದು.

ವೈಶಾಖದ ಬಿರುಬಿಸಿಲಿನಲ್ಲಿ ಒಂದು ದಿನ ಸಂಧ್ಯಾಸಮಯದಲ್ಲಿ ಇದ್ದಕ್ಕಿದ್ದಂತೆ ಧೂಮಜ್ವಾಲೆಯು ಹರಡಿತು. ಇದನ್ನು ನಂದಿಸಲು ಗ್ರಾಮಸ್ಥರ ನೆರವಿನಿಂದ ಆಚಾರ್ಯರು ತುಂಬಾ ಶ್ರಮಪಟ್ಟರು. ಆದರೆ ಅವರ ಪ್ರಯತ್ನವು ವ್ಯರ್ಥವಾಗಿ ಬೆಂಕಿಯು ಪ್ರಜ್ವಲಿಸುತ್ತ ಹರಡುತ್ತಿತ್ತು. ಸೂರ್ಯಾಸ್ತಮಾನವು ಸಮೀಪಿಸಿತು. ಹಠಾತ್ತನೆ ದೊಡ್ಡಸಪ್ಪಳವೊಂದು ಕೇಳಿಬಂದು ಮರದಮೋಟು ಇಬ್ಭಾಗವಾಯಿತು. ಅದರಿಂದ ಜ್ವಾಲಾನರಸಿಂಹನು ಉದ್ಭವಿಸಿದ.

ಅಶ್ವತ್ಥವೃಕ್ಷದಿಂದ ಆವಿರ್ಭವಿಸಿದ ನರಸಿಂಹನ ಪ್ರತಿಮೆಯನ್ನೇ ಇಂದು ಪೂಜಿಸುತ್ತಿದ್ದಾರೆ. ನೂತನ ಅಶ್ವತ್ಥವೃಕ್ಷದ ಆಶ್ರಯದಲ್ಲಿ ಇದನ್ನು ಪ್ರತಿಷ್ಠೆ ಮಾಡಿದ್ದಾರೆ. ಈ ಸ್ವಾಮಿಗೆ ಪೂಜೆ-ಅರ್ಚನೆ, ಧೂಪ-ದೀಪ, ನೈವೇದ್ಯಗಳು ನೆರವೇರುತ್ತಿವೆ. ಇಂದಿನ ಮೂಲಕ್ಕೆ ಮೂರ್ತಿಯು ಒಂದು ಸೇರಿದ ಘಟನೆಯೂ ಕೌತುಕಮಯವಾದದ್ದೇ ಆಗಿದೆ. ಮೂಲ ಅಶ್ವತ್ಥವೃಕ್ಷದ ಪೋಟಿನಲ್ಲಿ ಉಂಟಾದ ಧೂಮಜ್ವಾಲೆಯು ಶಾಂತವಾದ ಮೇಲೆ ಅಲ್ಲಿ ಪ್ರತ್ಯಕ್ಷನಾದಂತಹ ಮೂರ್ತಿಗೆ ಪೂಜಾದಿಗಳನ್ನು ನಡೆಸುವ ದಾರಿಯ ಬಗ್ಗೆ ಆಚಾರ್ಯರಿಗೆ ಚಿಂತೆ ಮೂಡಿತು.

ಭಕ್ತಪರಾಧೀನ ಭಗವಂತನು ಭಕ್ತನ ಮೊರೆಯನ್ನು ಮನ್ನಿಸಿ ಅವರ ಕನಸಿನಲ್ಲಿ ಪ್ರತ್ಯಕ್ಷನಾಗುತ್ತಾನೆ. ಈವರೆಗೆ ತಾನು ನೆಲಸಿದ್ದ ಅಶ್ವತ್ಥವೃಕ್ಷದ ಮೂಲಕ್ಕೆ ಸ್ವಲ್ಪ ಅಂತರದಲ್ಲಿ ಅದೇ ವೃಕ್ಷದ ಬೇರಿನಿಂದ ಚಿಗುರೊಡೆದು ಅಭಿವೃದ್ಧಿ ಆಗುವುದೆಂದೂ, ಮೂಲವೃಕ್ಷದಿಂದ ಹೊರಬಿದ್ದ ನರಸಿಂಹ ಸಾಲಿಗ್ರಾಮಗಳನ್ನು ನೂತನ ಮರದ ಮೂಲದಲ್ಲಿ ಸುತ್ತುಗಟ್ಟಿ ಸ್ಥಾಪಿಸಬೇಕೆಂದೂ, ಈಗ ಹೊರಗೆ ಪ್ರತ್ಯಕ್ಷವಾದ ತನ್ನ ಮೂರ್ತಿಯನ್ನು ಅಲ್ಲಿಯೇ ಪ್ರತಿಷ್ಠೆ ಮಾಡಿ ಪೂಜಾದಿಗಳನ್ನು ಯಥಾರೀತಿ ನಡೆಸಿಕೊಂಡು ಬರಬೇಕೆಂದು ಅಪ್ಪಣೆಯಾಯಿತು. ಅದರ ಪ್ರಕಾರವಾಗಿ ಇಂದಿಗೂ ಸಹ ಕ್ರಮಬದ್ಧವಾಗಿ ಪೂಜಾದಿಗಳನ್ನು ನಡೆಸಿಕೊಂಡು ಬರಲಾಗಿದೆ. ಈ ಆವರಣಕ್ಕೆ ಶೋಭೆ ಮತ್ತು ಪವಿತ್ರತೆಯುಂಟಾಗಿದೆ.

ಕೊಪ್ಪರದ ನರಸಿಂಹ ದೇವಾಲಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಕೆಲವು ಸಂಗತಿಗಳು ತಿಳಿದುಬರುತ್ತವೆ. ಯಾವುದೇ ವಾಸ್ತುಶೈಲಿಗನುಸಾರವಾಗಿ ಇದನ್ನು ಕಟ್ಟಿರುವುದಿಲ್ಲ. ಇಲ್ಲಿ ಕಲೆಯ ಪೈಪೋಟಿಯಂತೂ ಇಲ್ಲವೇ ಇಲ್ಲ. ಮತಗಳ ಸ್ಪರ್ಧೆಯಿಲ್ಲ. ಪುರಾಣಗಳ ನಿರೂಪಣೆಯೂ ಇಲ್ಲಿಲ್ಲ. ಕೇವಲ ಕೃಷ್ಣೆಯ ಮಡಿಲು ಮಾತ್ರವೇ ಇಲ್ಲಿರುವ ಶಾಶ್ವತವಾದ ಕಟ್ಟಡವೆಂದು ಹೇಳಬೇಕು. ನೆರೆಯ ಹಾವಳಿ ಮೊದಲಾದ ನೈಸರ್ಗಿಕ ಪ್ರಕೋಪದ ಕಾರಣದಿಂದ ಇಲ್ಲಿ ಸ್ವಾಮಿಯು ಮೂಲಸೃಷ್ಟಿಗೆ ಹತ್ತಿರವಾಗಿ ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಿದ್ದಾನೆ. ದೇವಾಲಯಕ್ಕೆ ಸುಮಾರು ನೂರು ಅಡಿಗಳ ದೂರದಲ್ಲಿ ಎತ್ತರವಾದ ಸ್ಥಳದಲ್ಲಿ ಯಾತ್ರಿಕರ ಸೌಲಭ್ಯಕ್ಕಾಗಿ ಮತ್ತು ವಿಶೇಷ ಉತ್ಸವಗಳ ಸಲುವಾಗಿ ಕಟ್ಟಡ ನಿರ್ಮಾಣ ಮಾಡುವ ಕಾರ್ಯ ನಡೆದಿದೆ.

ಬಿಜಾಪುರದ ಆದಿಲ್‌ಶಾಹ ಬಾದಷಹನ ಕಾಲದಲ್ಲಿ ದೇವಾಲಯ ನಿರ್ಮಾಣದ ಪ್ರಯತ್ನಗಳು ಸಾಗಿದ ಊಹೆಗೆ ಆಧಾರವಾದ ಘಟನೆ ಪ್ರಸಿದ್ಧವಾಗಿದೆ. ಬಾದಷಹನ ಸೈನ್ಯವು ಆನೆ ಕುದುರೆಗಳಿಂದ ಕೂಡಿ ಬಹು ದೊಡ್ಡದಾಗಿತ್ತು, ಆತನು ಒಮ್ಮೆ ಕೊಪ್ಪರಕ್ಕೆ ಸಮೀಪವಾಗಿ ಬೀಡುಬಿಟ್ಟಿರಬೇಕಾದರೆ ಆತನ ಸೈನ್ಯದಲ್ಲಿದ್ದ ಆನೆ ಕುದುರೆಗಳಿಗೆ ವಿಚಿತ್ರವಾದ ರೋಗವು ಕಾಣಿಸಿಕೊಂಡಿತು. ಅವು ತಮ್ಮ ಬಾಯಿಯ ಮೂಲಕವಾಗಿ ಮಲಮೂತ್ರ ವಿಸರ್ಜನೆಗೆ ತೊಡಗಿದವಂತೆ. ಇದಕ್ಕೆ ಪರಿಹಾರವನ್ನು ಕಾಣದೆ ಬಾದಶಹನು ಚಿಂತಿತನಾಗಿ ದಿಕ್ಕು ತೋಚದೆ ಕುಳಿತು ಬಿಡುತ್ತಾನೆ. ಒಂದು ದಿನ ರಾತ್ರಿ ಕನಸಿನಲ್ಲಿ ನರಸಿಂಹಸ್ವಾಮಿಯು

ಬಾಲಕನ ವೇಷದಲ್ಲಿ ಕಾಣಿಸಿಕೊಂಡು ಅವನನ್ನು ಕೊಪ್ಪರಕ್ಕೆ ಕರೆದುಕೊಂಡು ಹೋದಂ ಭಾಸವಾಗುತ್ತದೆ. ಅಲ್ಲಿ ಪೂಜಾದಿಗಳಿಗೆ ಅನುಕೂಲ ಮಾಡಿಕೊಡುವಂತೆ ಅವನಿಗೆ ಆಜ್ಞಾಪಿಸಿ ಹಾಗಾಗುತ್ತದೆ. ಅದರಂತೆ ಆದಿಲ್‌ಶಾಹ ಬಾದಶಹನು ಕೊಪ್ಪರಕ್ಕೆ ಬಂದು ಸುಮಾ ಒಂದು ವರ್ಷಕಾಲ ಬಿಡಾರ ಹೂಡುತ್ತಾನೆ. ನರಸಿಂಹನ ಆರಾಧನೆಯಲ್ಲಿ ನಿಲ್ಲುತ್ತಾನ ಆತನ ಆನೆ-ಕುದುರೆಗಳಿಗೆ ಉಂಟಾದ ವಿಚಿತ್ರರೋಗವು ಪರಿಹಾರವಾಗುತ್ತದೆ. ಈ ಘಟನೆಯ ಹಿನ್ನಲೆಯಲ್ಲಿ ಐತಿಹಾಸಿಕವಾದ ಸತ್ಯವು ಅಡಗಿರಬಹುದಾದರೂ ಅದಕ್ಕಿಂತಲೂ ಮಿಗಿಲಾ ನರಸಿಂಹನು ಯಾವ ರೀತಿ ವ್ಯಾಧಿನಿವಾರಕನೂ ಆಗಬಲ್ಲನೆಂಬುದು ಸಿದ್ಧವಾಗಿದೆ. ಭಾವೈಕ್ಯತೆಯ ಜ್ವಲಂತ ನಿದರ್ಶನವೂ ಆಗಿದೆ.

## ಶ್ರೀನಿವಾಸನಿಗೆ ಪೂಜೆ

ಕೊಪ್ಪರದ ನರಸಿಂಹನ ಸನ್ನಿಧಿಯಲ್ಲಿ ವೆಂಕಟೇಶ್ವರ ಸ್ವಾಮಿಯ ವಿಗ್ರಹವಿದೆ. ಇದರ ಬಗೆಗೆ ಸಹ ಕುತೂಹಲಭರಿತ ಸ್ಥಳಪುರಾಣವನ್ನು ಹೇಳುತ್ತಾರೆ. ಸುಮಾರು ಆರು ನೂರು ವರುಷಗಳ ಹಿಂದೆ ಈ ಸ್ಥಳದ ಅರ್ಚಕ ಮಹನೀಯರು ಶ್ರೀನಿವಾಸನ ದರುಶನಕ್ಕೆ ತಿರುಮಲೆಗೆ ಹೋಗಿರುತ್ತಾರೆ. ಆಗ ಈಗಿರುವ ಹಾಗೆ ವಾಹನ ಸೌಕರ್ಯಗಳಿಲ್ಲದೆ ಕಾಲುನಡಿಗೆ, ಚಕ್ಕಡಿ, ಕುದುರೆಯ ಗಾಡಿ ಮುಂತಾದವುಗಳ ಮೂಲಕ ಸಾಗಬೇಕಾಗಿತ್ತು. ಆಚಾರ್ಯರು ತಿರುಪತಿಯನ್ನು ಸೇರಿ ಆ ರಾತ್ರಿ ಗೋವಿಂದರಾಜ ಪಟ್ಟಣದಲ್ಲಿ ಕಳೆದು ಮಾರನೆ ದಿವಸ ತಿರುಮಲೇಶನನ್ನು ದರ್ಶಿಸಲು ಬೆಟ್ಟವನ್ನೇರಿ ಹೋಗುವ ಆಲೋಚನೆಯಿಂದ ವಿಶ್ರಮಿಸುತ್ತಾರೆ.

ವೆಂಕಟೇಶ್ವರಸ್ವಾಮಿಯು ಆಚಾರ್ಯರ ಕನಸಿನಲ್ಲಿ ಪ್ರತ್ಯಕ್ಷವಾಗಿ ತನ್ನನ್ನು ಕಾಣಲು ಆಚಾರ್ಯರು ಬೆಟ್ಟವನ್ನೇರುವ ಅಗತ್ಯವಿಲ್ಲವೆಂದೂ, ತಾನೇ ಅವರ ಊರಿಗೆ ಬರುತ್ತೇನೆಂದು ತಿಳಿಸಿದಂತಾಗುತ್ತದೆ. ತಾನು ಬರುವ ವಿಚಾರಕ್ಕೆ ಪ್ರಮಾಣವೇನೆಂಬುದನ್ನು ಸಹ ಭಗವಂತನು ಹೇಳುತ್ತಾನೆ. ತನ್ನ ಆಗಮನವಾಗಿದೆಯೆಂಬುದಕ್ಕೆ ಕುರುಹಾಗಿ ಅಲ್ಲಿರುವ ಅಶ್ವತ್ಥ ವೃಕ್ಷಕ್ಕೆ ಕ್ಷೀರಾಭಿಷೇಕವಾಗುವುದೆಂಬ ಕಣ್ಣರಿಯುವ ಸಂಗತಿ ವಿವರಿಸಲಾಗುತ್ತದೆ. ಯಾವುದೇ ಕನಸಾದರೂ ಮನುಷ್ಯನಿಗೆ ಮುಂದೊದಗಿ ಬರುವ ಘಟನೆಗಳ 'ಭವಿಷ್ಯಪುರಾಣ'ದಂತಿರಬಹುದು. ಅಥವಾ ಕನಸುಗಳು ಮಾನವನ ಸುಪ್ತಮನಸ್ಸಿನ ನಡವಳಿಕೆಗಳಾಗಿ ಚಿತ್ರಸರಣಿಯಂತಹ ದೃಶ್ಯಗಳಾಗಿ ಉಳಿಯಬಹುದು. ದೈವಸಾಕ್ಷಾತ್ಕಾರಕ್ಕೆ ಅಪರೋಕ್ಷಜ್ಞಾನಕ್ಕೆ ಸಂಬಂಧಿಸಿದ ಹಾಗೆ ಅನೇಕ ಕನಸುಗಳು ನಿಜಜೀವನದಲ್ಲಿ ನನಸಾಗಿ ಧಾರ್ಮಿಕ ಬದುಕನ್ನು ಗಟ್ಟಿಗೊಳಿಸು ವಂತಿರುತ್ತವೆ.

ತಿರುಪತಿಯಲ್ಲಿ ತಾವು ಕಂಡ ಕನಸಿನಿಂದ ಆಚಾರ್ಯರಿಗೆ ಒಂದು ಕ್ಷಣ ಗಾಬರಿ ಯಾದಂತಾದರೂ. ಒಡನೆಯೇ ಸಂಭ್ರಮಗೊಂಡು ತಮ್ಮ ಊರಿಗೆ ಅವರು ಪ್ರಯಾಣ ಬೆಳೆಸುತ್ತಾರೆ. ಇವರು ಬರುವ ಹಾದಿಯಲ್ಲಿ ಪವಾಡಸದೃಶವಾದ ಘಟನೆಗಳುಂಟಾದವೆಂದು

ಹೇಳಲಾಗುತ್ತದೆ. ಭಗವಂತನು ಗೋವಿನ ರೂಪದಲ್ಲಿ ಇವರನ್ನು ಹಿಂಬಾಲಿಸಿ ಬರುತ್ತಾನೆ. ಆಗ ಕೆಲವು ಮಧುರವಾದ ಅನುಭವಗಳು ಇವರಿಗೆ ಆದದ್ದನ್ನು ಆಚಾರ್ಯರ ವಂಶಸ್ಥರು ಇಂದಿಗೂ ನೆನಪಿಸಿಕೊಳ್ಳುವ ಸಂಗತಿಗಳು ದಾಖಲಾಗಿರುತ್ತವೆ. ಕೊಪ್ಪರದ ನರಸಿಂಹನ ಸನ್ನಿಧಾನದಲ್ಲಿ ಎಡಗಡೆಯ ಭಾಗದಲ್ಲಿ ಭಕ್ತರಿಂದ ಸೇವೆಯನ್ನು ಸ್ವೀಕರಿಸುತ್ತ ನೆಲೆಸಿರುವ ಶ್ರೀನಿವಾಸನ ಮಂಗಳಮಯ ಮೂರ್ತಿಯನ್ನು ದರ್ಶಿಸಬಹುದು.

## ಸಾಧನೆ

ಕೊಪ್ಪರದ ನರಸಿಂಹಸ್ವಾಮಿಗೆ ಆಶ್ವಯುಜ ಮಾಸದ ನವರಾತ್ರಿ, ಮಕರ ಸಂಕ್ರಮಣ, ನರಸಿಂಹ ಜಯಂತಿಗಳಂದು ವಿಶೇಷ ಉತ್ಸವಾದಿಗಳನ್ನು ಏರ್ಪಡಿಸಲಾಗುತ್ತದೆ. ತನ್ನ ಷೋಡಶ ಭುಜಗಳಿಂದ ಪ್ರತ್ಯಕ್ಷವಾಗಿರುವ ಇಲ್ಲಿನ ಸ್ವಾಮಿಯನ್ನು ಅನವರತ ಸ್ತೋತ್ರಾದಿ ಗಳಿಂದ ಪೂಜಿಸುತ್ತ, ಹಾಡು ಲಾವಣಿಗಳಿಂದ ಕೊಂಡಾಡುತ್ತ ಅತ್ಯಂತ ಆಚಾರವಂತವಾದ ರೀತಿಯಲ್ಲಿ ಅರ್ಚಿಸಿಕೊಂಡು ಬರಲಾಗುತ್ತಿದೆ. ಕೊಪ್ಪರದ ನರಸಿಂಹನನ್ನು ಯಾವ ಕೀಳರಿಮೆಯೂ ಇಲ್ಲದೆ ಎಲ್ಲ ಉನ್ನತವರ್ಗದ, ಕೆಳವರ್ಗದ ಭಕ್ತಜನರು ಆರಾಧಿಸುತ್ತಿದ್ದಾರೆ. ಅನವರತ ಪರಿಶ್ರಮದಿಂದ ಅಭಿವೃದ್ಧಿಯ ಹಾದಿಯಲ್ಲಿ ಸಾಗಿರುವ ಷೋಡಶ ಬಾಹು ನರಸಿಂಹನಿಗೆ ಪೂಜನೀಯವಾದ ಸ್ಥಾನವು ಲಭ್ಯವಾಗಿದೆ.

## ಧಾರವಾಡ ಜಿಲ್ಲೆ

# ಧಾರವಾಡ

ಬೆಂಗಳೂರಿನಿಂದ ಸುಮಾರು ನಾಲ್ಕುನೂರಾ ಮೂವತ್ತು ಕಿಲೋಮೀಟರ್ ದೂರದಲ್ಲಿರುವ ಧಾರವಾಡವು ಹುಬ್ಬಳ್ಳಿ-ಧಾರವಾಡ ಅವಳಿ ನಗರಗಳಲ್ಲೊಂದಾಗಿದೆ. ಧಾರವಾಡ ಎಂದ ಕೂಡಲೇ ಪೇಡೆಯ ಮಾಧುರ್ಯವನ್ನು ಸವಿದಂತಾಗುವುದರೊಂದಿಗೆ ವರಕವಿ ದ.ರಾ. ಬೇಂದ್ರೆಯವರ ಸಾಹಿತ್ಯ, ಬಸವರಾಜ ಮನ್ಸೂರ್-ಗಂಗೂಬಾಯಿ ಹಾನಗಲ್‌ರವರ ಸಂಗೀತದ ನೆನಪಾಗದೇ ಇರಲಾರದು. ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ಸಮೃದ್ಧತೆಯನ್ನು ಹೊಂದಿರುವ ಧಾರವಾಡವು ಉತ್ತರ ಕರ್ನಾಟಕದ ಧ್ರುವತಾರೆಯಾಗಿದೆ.

ಧಾರವಾಡ ಎಂದರೆ ದ್ವಾರಾನಗರ ಎಂದೇ ಅರ್ಥವಿದೆ. ಬಯಲುಪ್ರದೇಶ ಹಾಗೂ ಮಲೆನಾಡಿನ ಮಧ್ಯಂತರ ಭಾಗದಲ್ಲಿರುವ ಈ ನಗರದಲ್ಲಿ ಅನೇಕ ಪ್ರಾಚೀನವಾದ ಹಾಗೂ ಮಹತ್ವವಾದ ಸ್ಥಳಗಳಿವೆ. ಈ ಊರಿನಲ್ಲಿ ಎರಡು ನರಸಿಂಹ ದೇವಾಲಯಗಳಿವೆ. ಅವುಗಳಲ್ಲಿ ಒಂದು ಧಾರವಾಡ ನಗರದಲ್ಲಿದ್ದರೆ, ಮತ್ತೊಂದು ಊರಿನ ಹೊರವಲಯದ ಮುದಿಹಾಳ ಎಂಬ ಸ್ಥಳದಲ್ಲಿದೆ.

# ಮುಗುಟಖಾನ ಹುಬ್ಬಳ್ಳಿಃ ನರಸಿಂಹಪುರ



ಅಲಂಕೃತ ಸ್ವಯಂಭೂ ನರಸಿಂಹಮೂರ್ತಿಯ ಸುಂದರನೋಟ.

*ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ*
*ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ*

- ಇದು ಇಂದಿಗೂ ಅಶ್ವತ್ಥಕಟ್ಟೆಯನ್ನು ಸುತ್ತುವಾಗ ಹೇಳಲಾಗುವ ಸ್ತೋತ್ರ. ಬ್ರಹ್ಮ-ವಿಷ್ಣು-ರುದ್ರರ ರೂಪಗಳನ್ನು ವೃಕ್ಷದ ಮೂಲ, ಮಧ್ಯ ಅಗ್ರಭಾಗಗಳಲ್ಲಿ ಕಂಡು ಆರಾಧಿಸುವುದು ಸನಾತನ ಕಾಲದಿಂದಲೂ ಬೆಳೆದುಕೊಂಡು ಬಂದ ಪರಿಪಾಠವಾಗಿದೆ.

ಆದಿಯಲ್ಲಿ ವೃಕ್ಷಸ್ವರೂಪಿಯಾದ ಭಗವಂತನನ್ನು ನರಸಿಂಹಸ್ವಾಮಿಯೆಂದು ಪೂಜೆ ಮಾಡುತ್ತ ಕಾಲಕಳೆದಂತೆ ಅಲ್ಲಿ ಶಿಲಾ ಪ್ರತಿಮೆಯನ್ನಿಟ್ಟು ಆತನಿಗೆ ಭಕ್ತಿ-ಗೌರವಗಳನ್ನು ಸಲ್ಲಿಸುತ್ತ ಬಂದಿರುವ ಕ್ಷೇತ್ರವನ್ನು ಮುಗುಟಖಾನ-ಹುಬ್ಬಳ್ಳಿಗೆ ಸಮೀಪವಾಗಿ ನಾವಿಂದು ಕಾಣುತ್ತಿದ್ದೇವೆ. ದೋಷರೂಪಿಗಳಾದ ಮಾನವರ ಪಾಪಗಳನ್ನು ಹೋಗಲಾಡಿಸಲೆಂಬಂತೆ ಉತ್ತರಾಭಿಮುಖವಾಗಿ ಮಲಪ್ರಹರೆಯು ಪ್ರಶಾಂತಳಾಗಿ ಇಲ್ಲಿ ಪ್ರವಹಿಸುತ್ತಿದ್ದಾಳೆ. ಇದರ ದಡದಲ್ಲಿ ನರಸಿಂಹ ಆರಾಧನೆಯ ಸ್ಥಳವಿದೆ. ಪುಣೆ-ಬೆಂಗಳೂರು ಹೆದ್ದಾರಿಯಲ್ಲಿ, ಕಿತ್ತೂರಿಗೆ ಸಮೀಪವಾಗಿ ಸಂದರ್ಶಿಸಲು ಸಾಧ್ಯವಾಗಿದೆ. ಮಗುಟಖಾನ ಹುಬ್ಬಳ್ಳಿಯಿಂದ ಸುಮಾರು ಮೂರು ಕಿ.ಮೀ. ದೂರ ಒಳದಾರಿಯಲ್ಲಿ ನಡೆದು ಈ ಸ್ಥಳವನ್ನು ಸೇರಬಹುದಾಗಿದೆ.

## ಯಾಗಭೂಮಿ

ಆರಂಭಕಾಲದಲ್ಲಿ ಚ್ಯವನಮಹರ್ಷಿಗಳು ಹೋಮ-ಹವನಗಳನ್ನು ಮಾಡಿ ನದಿಯಲ್ಲಿ ವಿಸರ್ಜಿಸಿದ್ದ ಶಿಲೆಯನ್ನು ಕಾಲಾನಂತರದಲ್ಲಿ ರಾಜಮನೆತನದವರ ನೆರವಿನಿಂದ ಪ್ರತಿಷ್ಠಿಸಿದ ಸ್ಥಳವಾಗಿ ಇದು ಪ್ರಸಿದ್ಧಿಯನ್ನು ಹೊಂದಿದೆ. ಹುತ್ತದಲ್ಲಿ ಹುದುಗಿದ್ದ ಸನಾತನ ಅಶ್ವತ್ಥ ವೃಕ್ಷವನ್ನು ಆರಾಧ್ಯಯೋಗ್ಯವನ್ನಾಗಿ ಮಾಡಿದ ಮತ್ತೊಬ್ಬ ಅರಸುಕುಲದ ಪ್ರಮುಖ ವ್ಯಕ್ತಿಯ ಸಾಹಸವೂ ಇದರ ಹಿನ್ನೆಲೆಯಲ್ಲಿದೆ. ಈಚಿನ ದಿನಗಳಲ್ಲಿ ಧರ್ಮರಕ್ಷಣೆಯ ಕಾರ್ಯಗಳನ್ನು ನಡೆಸುತ್ತಿರುವ ಮಠಾಧಿಪತಿಗಳ ಪ್ರೋತ್ಸಾಹ ಮತ್ತು ನೆರವಿನಿಂದಲೂ ಸೇರಿಕೊಂಡು ಈ ನರಸಿಂಹಕ್ಷೇತ್ರವು ಅಭಿವೃದ್ಧಿಯತ್ತ ದಾಪುಗಾಲು ಹಾಕುತ್ತಿದೆ. ರುದ್ರದೇವರ ಸನ್ನಿಧಿ, ಮಠಾಧಿಪತಿಗಳ ಬೃಂದಾವನಗಳು, ಧರ್ಮಸೂತ್ರಗಳಿಂದ ವಿಸ್ತರಣಗೊಳ್ಳುತ್ತಿರುವ ನರಸಿಂಹಪುರದ ದೇವರ ಸನ್ನಿಧಾನಕ್ಕೆ ಪ್ರಾಶಸ್ತ್ಯವು ಸಲ್ಲುತ್ತ ಬಂದಿದೆ.

ಈ ದಿವ್ಯವಾದ ಕ್ಷೇತ್ರದಲ್ಲಿ ವಿಶಾಲವಾದ ಅಶ್ವತ್ಥವೃಕ್ಷವಿದೆ. ಅದರ ಸುತ್ತಲೂ ಕಟ್ಟೆಯನ್ನು ಕಟ್ಟಿರುತ್ತಾರೆ. ಪಾವನವಾದ ಮರದ ಬುಡದಲ್ಲಿ ನರಸಿಂಹಸ್ವಾಮಿಯು ನೆಲೆಸಿದ್ದಾನೆ. ಸಂಸಾರದ ಬವಣೆಯಿಂದ ಬಳಲಿ ಬಂದವರಿಗೆ, ನೊಂದವರಿಗೆ ಇಲ್ಲಿನ ವಾತಾವರಣವು ನೆಮ್ಮದಿಯನ್ನುಂಟು ಮಾಡುತ್ತಿವೆ. ಒಂದುಕಾಲಕ್ಕೆ ವಿವಿಧ ಬಗೆಯ ವೃಕ್ಷಗಳಿಂದಲೂ, ಲತೆಗಳಿಂದಲೂ, ಹುತ್ತಗಳಿಂದಲೂ ಆವೃತವಾದ ಸ್ಥಳದಲ್ಲಿ ಇಂದು ನಿರ್ಮಲವಾದ ಮನಸ್ಸನ್ನು ಹೊಂದಲು ಕಾರಣವಾಗುವಂತೆ ಭಗವಂತನ ನೆಲೆಯನ್ನೂ ಪ್ರಕೃತಿಯ ನೆಲೆಯನ್ನೂ ಕಾಣಲು ಸಾಧ್ಯವಾಗಿದೆ. ನೋಡುಗರ ಮನೋಬಲದ ವೃದ್ಧಿಗೆ ನೆರವಾಗುತ್ತಿದೆ.

ನರಸಿಂಹಕ್ಷೇತ್ರವೆಂದು ಪ್ರಸಿದ್ಧವಾಗಿದ್ದರೂ, ಈ ಸ್ಥಳದಲ್ಲಿ ಮಹಾದೇವನು ಲೆಸಿದ್ದಾನೆ. ಈತನಿಗೆ ಶೈತ್ಯೇಶ್ವರನೆಂಬ ಹೆಸರಿದೆ. ಲಿಂಗಸ್ವರೂಪಿಯಾಗಿ ರುದ್ರದೇವರ ರಾಧನೆಯೂ ಇಲ್ಲಿ ನಡೆಯುತ್ತಿದೆ. ಚ್ಯವನ ಋಷಿಗಳು ದೇಶಪರ್ಯಟನ ಮಾಡುವ ಂದರ್ಭದಲ್ಲಿ ಇಲ್ಲಿಗೆ ಆಗಮಿಸಿ ನದಿಯ ದಂಡೆಯಲ್ಲಿ ವಾಸವಾಗಿದ್ದಲ್ಲಿ ಈಶ್ವರನು ತ್ಯಕ್ಷನಾಗಿ ಅವರಿಗೆ ನರಸಿಂಹಸ್ವಾಮಿಯ ಆರಾಧನೆಯ ಮಹಿಮೆಯನ್ನು ತಿಳಿಸುತ್ತಾನೆ. ವರು ನರಸಿಂಹನನ್ನು ಸಾಕ್ಷಾತ್ಕರಿಸಿಕೊಳ್ಳಲು ಯಜ್ಞದ ರೂಪದಲ್ಲಿ ಈ ಕ್ಷೇತ್ರದಲ್ಲಿ ರಾಧನೆ ಮಾಡಿದವರಾಗಿದ್ದಾರೆ.

## ವಿಶಿಷ್ಟಾಕಾರ

ಚ್ಯವನ ಮಹರ್ಷಿಗಳು ಶಿಲೆಯ ಮೇಲೆ ನರಸಿಂಹನ ಆಕಾರವನ್ನು ಬರೆದು ದನ್ನು ಪೂಜಿಸಿ, ವಿಸರ್ಜಿಸಿ ಅಲ್ಲಿಂದ ನಿರ್ಗಮಿಸಿದ ನಂತರ ಇಲ್ಲಿನ ಪ್ರದೇಶವು ೋರವಾದ ಅರಣ್ಯವಾಗಿ ಪರಿವರ್ತನೆಯಾಗುತ್ತದೆ. ದೊಡ್ಡ ದೊಡ್ಡ ಮರಗಳು ಹುತ್ತಗಳಲ್ಲಿ ಡಗಿ ಹೋಗುತ್ತವೆ. ಆನೆಗೊಂದಿಯ ಅರಸರಾಗಿದ್ದ ನರಸಿಂಗರಾಯರು ತಮ್ಮ ಚತುರಂಗಬಲ ಮೇತವಾಗಿ ಕಾರ್ಯಾರ್ಥವಾಗಿ ಹೊರಟಿದ್ದಾಗ, ತಮಗೆ ಉಂಟಾದ ಮಾರ್ಗಾಯಾಸವನ್ನು ರಿಹರಿಸಿಕೊಳ್ಳಲು ಇಲ್ಲಿ ಬೀಡು ಬಿಟ್ಟಿರುತ್ತಾರೆ. ಆಗ ಅವರಿಗೆ ವೃಕ್ಷರೂಪಿಯಾದ ರಸಿಂಹನು ಅವರ ಕನಸಿನಲ್ಲಿ ಪ್ರತ್ಯಕ್ಷನಾಗಿ ತಾನು ಅಲ್ಲಿ ನೆಲೆಸಿರುವುದಾಗಿಯೂ ತನ್ನ ರುಶನವನ್ನು ಪಡೆದು ಮುಂದೆ ಸಾಗಬಹುದೆಂದೂ ಅಪ್ಪಣೆ ಮಾಡುತ್ತಾನೆ.

ಭಗವಂತನ ವಾಣಿಯನ್ನು ಮೀರಿಹೋಗಲಾಗದ ಅರಸನು ತನ್ನ ಸೈನಿಕರಿಗೆ ಆ ಳದಲ್ಲಿ ನರಸಿಂಹನ ನೆಲೆಯನ್ನು ಹುಡುಕುವಂತೆ ಆದೇಶಿಸುತ್ತಾನೆ. ಅಲ್ಲಿನ ವೃಕ್ಷಗಳ ಟ್ಟಣೆ ಹೇಳತೀರದಾಗಿರುತ್ತದೆ. ಯಾವ ಮರದಲ್ಲಿ ಆತನನ್ನು ಹುಡುಕಬೇಕೆಂದು ಬಗೆ ರಿಯದಾಗಿರುತ್ತದೆ. ಹೀಗಿರುವಲ್ಲಿ ಸೈನಿಕನೊಬ್ಬನು ಹೊಡೆದ ಪೆಟ್ಟಿಗೆ ಹುತ್ತದಲ್ಲಿ ಡಗಿದ್ದ ವೃಕ್ಷವೊಂದರಿಂದ ನೆತ್ತರು ಚಿಮ್ಮಿದಂತಾಗುತ್ತದೆ. ಈ ಆಶ್ಚರ್ಯಕರವಾದ ಟನೆಯಿಂದ ಗಾಬರಿಗೊಂಡ ಸಿಪಾಯಿಯು ಅರಸರಿಗೆ ಸುದ್ದಿಯನ್ನು ಮುಟ್ಟಿಸುತ್ತಾನೆ. ಲ್ಲಿಗೆ ಬಂದು ನೋಡಲಾಗಿ ವೃಕ್ಷದಿಂದ ಧಾರೆಯಂತೆ ರಕ್ತವು ಹರಿಯುತ್ತಿರುತ್ತದೆ. ದರೆ ಹುಡುಕಿ ನೋಡಿದಾಗ ಅಲ್ಲಿ ಯಾವುದೇ ಜಂತುವಿರುವುದು ಕಂಡು ಬರಲಿಲ್ಲ. ಜನಿಗೆ ಕನಸಿನ ಅರಿವಾಗಿ ನರಸಿಂಹಸ್ತೋತ್ರವನ್ನು ಪಠಿಸಿದಾಗ ಅಲ್ಲಿಂದ ರಕ್ತವು ರಿಯುವುದು ಕೂಡಲೇ ನಿಂತು ಹೋಗುತ್ತದೆ. ಅರಸನು ಅದಕ್ಕೆ ತನ್ನ ಶ್ರದ್ಧಾಭಕ್ತಿಗಳನ್ನು ಲ್ಲಿಸಿ ಅಲ್ಲಿಂದ ತೆರಳುತ್ತಾನೆ. ರಾಜನ ಅಪ್ಪಣೆಯ ಮೇರೆಗೆ ಆ ಜಾಗೃತವಾದ ಸ್ಥಳ ನ್ನು ಸ್ವಚ್ಛಮಾಡಿ ಅದನ್ನು ಪವಿತ್ರವಾದ ನೆಲೆಯಾಗಿ ಪರಿವರ್ತಿಸಲಾಗುತ್ತದೆ. ವಿಜಯನಗರದ ಳುವಂಶದ ದೊರೆಯಾಗಿದ್ದ ಅಚ್ಯುತರಾಯನು ದಕ್ಷಿಣದ ದಂಡಯಾತ್ರೆಗೆ ತೆರಳುವ ಮಯದಲ್ಲಿ ಇದೇ ಸ್ಥಳದಲ್ಲಿ ಬೀಡುಬಿಟ್ಟಿರುತ್ತಾನೆ. ವೃಕ್ಷರೂಪಿಯಾಗಿದ್ದ ನರಸಿಂಹಸ್ವಾಮಿ ನ್ನು ಆತನು ದರ್ಶನ ಮಾಡಿ ಪುನೀತನಾಗುತ್ತಾನೆ. ನರಸಿಂಗರಾಯರ ಕಾಲದಲ್ಲಿ

ಆಗದಿದ್ದ ಕೆಲಸವನ್ನು ಈತನು ಸಾಧಿಸುತ್ತಾನೆ. ಆತನು ಅಶ್ವತ್ಥವೃಕ್ಷದ ಸುತ್ತಲೂ ಕಟ್ಟೆಯೊಂದನ್ನು ನಿರ್ಮಿಸಿಕೊಡುತ್ತಾನೆ. ಇಂದಿಗೂ ಈ ಕಟ್ಟೆಯನ್ನು 'ಅಚ್ಯುತರಾಯನಕಟ್ಟೆ' ಎಂಬ ಹೆಸರಿನಿಂದ ಕರೆಯುತ್ತಾರೆ. ಇತಿಹಾಸವನ್ನು ಇದರಿಂದ ನೆನಪಿಸಿಕೊಳ್ಳುವಂತಾಗಿದೆ.

ರಾಜನ ನೆರವಿನಿಂದ ಇಲ್ಲಿ ಅಭಿವೃದ್ಧಿ ಕಾರ್ಯಗಳು ನಡೆಯುತ್ತವೆ. ಯಾತ್ರಿಕರಿಗೆ ಅನುಕೂಲವಾಗುವಂತೆ ಧರ್ಮಶಾಲೆಯನ್ನು ನಿರ್ಮಿಸಲಾಗುತ್ತದೆ. ಇಲ್ಲಿ ನಡೆಯಬೇಕಾದ ಪೂಜಾದಿಗಳಿಗೆ ಬ್ರಾಹ್ಮಣರನ್ನು ನೇಮಿಸಲಾಗುತ್ತದೆ. ಇದಕ್ಕಾಗಿ ಅನೇಕ ವೃತ್ತಿಗಳನ್ನು ನೀಡಲಾಗುತ್ತದೆ. ಅರ್ಚಕರ ವಂಶಸ್ಥರಿಗೆ ಇಂದಿಗೂ ಇವು ನಡೆಯುತ್ತಿವೆ.

ದೇವರ ಅಂಶವೊಂದು ತಮ್ಮಲ್ಲಿ ಅಡಗಿದಂತಿದ್ದ, ಮಹಾಜ್ಞಾನಿಗಳೂ ಆದ ಶ್ರೀಯಾದವಾರ್ಯರೆಂಬುವರು ಒಮ್ಮೆ ಸಂಚಾರನಿಮಿತ್ತವಾಗಿ ಈ ಸ್ಥಳಕ್ಕೆ ಬಂದು ನೆಲೆಸಿರುತ್ತಾರೆ. ರಮಣೀಯವಾಗಿದ್ದ ಪವಿತ್ರತೆಯೇ ಮೂರ್ತಿವೆತ್ತಂತಿದ್ದ ಜಾಗವು ಅವರನ್ನು ಆಕರ್ಷಿಸಿರುತ್ತದೆ. ಅವರ ಕನಸಿನಲ್ಲಿ ನರಸಿಂಹಸ್ವಾಮಿಯು ಪ್ರತ್ಯಕ್ಷನಾಗಿ ಚ್ಯವನ ಮಹರ್ಷಿಗಳಿಂದ ಪೂಜಿತನಾದ ತಾನು ಅಲ್ಲಿ ಬಹುಕಾಲದಿಂದ ಇರುವುದಾಗಿಯೂ ತನ್ನನ್ನು ತೆಗೆದುಕೊಂಡು ಹೋಗಿ ಪೂಜಿಸಬೇಕೆಂದು ಅಪ್ಪಣೆಯನ್ನು ವಿಧಿಸುತ್ತಾನೆ.

ಮಲಪ್ರಹರೆಯು ಅಲ್ಲಿ ರಮಣೀಯವಾಗಿ ಹರಿಯುತ್ತಿರುತ್ತಾಳೆ. ಜ್ಞಾನನಿಧಿಗಳಾದ ಅವರು ಅಲ್ಲಿಗೆ ಸ್ನಾನ ಮಾಡಲು ಹೋಗಿರುತ್ತಾರೆ. ಸ್ವಲ್ಪ ದೂರದಲ್ಲಿ ಅವರಿಗೆ ಜ್ವಾಲೆಯೊಂದು ಮೇಲೆದ್ದ ಹಾಗೆ ಕಾಣುತ್ತದೆ. ನೀರಿನಲ್ಲಿ ಬೆಂಕಿಯು ಕಾಣಿಸಿದ್ದು ಅವರಲ್ಲಿ ಪರಮಾಶ್ಚರ್ಯವನ್ನುಂಟು ಮಾಡುತ್ತದೆ. ಆ ಸ್ಥಳದಲ್ಲಿ ಮುಳುಗು ಹಾಕಿದಾಗ ಕರಿಶಿಲೆಯೊಂದು ದೊರೆಯುತ್ತದೆ. ಅಲ್ಲಿರುವಷ್ಟು ಕಾಲವೂ ಅಚ್ಯುತರಾಯನ ಕಟ್ಟೆಯಲ್ಲಿಟ್ಟು ಅದನ್ನು ಪೂಜಿಸುತ್ತಿದ್ದರು. ಆ ಶಿಲಾಮೂರ್ತಿ ಇಂದು ಭಕ್ತರ ಅಭೀಷ್ಟ ನೆರವೇರಿಸುತ್ತ ಬಂದಿದೆ.

ನರಸಿಂಹನ ಅರ್ಚಾಮೂರ್ತಿಯು ಸುಮಾರು ಒಂದೂವರೆ ಅಡಿಯಷ್ಟಿದೆ. ನರಸಿಂಹಾಕೃತಿಯ ವಿಶೇಷವೆಂದರೆ ಸ್ಥಾನಕ ಭಂಗಿಯಲ್ಲಿದ್ದು ರಾಕ್ಷಸನ ವಧೆಯನ್ನು ಮಾಡುತ್ತಿರುವಂತೆ ಬಿಡಿಸಲಾಗಿದೆ. ಮಾಧ್ವಪರಂಪರೆಗೆ ಅನುಗುಣವಾಗಿ ಸಾಂಗವಾಗಿ ಪೂಜಾವಿಧಿಗಳು ನೆರವೇರುತ್ತವೆ. ವೃಕ್ಷದ ಬುಡದಲ್ಲಿ ಎತ್ತರವಾದ ಜಾಗದಲ್ಲಿ ಸ್ವಾಮಿಯನ್ನು ಪ್ರತಿಷ್ಠೆ ಮಾಡಿರುತ್ತಾರೆ. ಈ ಕ್ಷೇತ್ರದಲ್ಲಿ ಭವ್ಯವಾದ ಮಹಾದ್ವಾರವನ್ನು ನಿರ್ಮಿಸುವ ಕಾರ್ಯವು ನಡೆದಿದೆ. ಧರ್ಮಸತ್ರದಲ್ಲಿ ಉಳಿದುಕೊಳ್ಳಲು ಅವಕಾಶವಿದೆ. ಸಾಕಷ್ಟು ವ್ಯವಸ್ಥಿತವಾದ ರೀತಿಯಲ್ಲಿ ವಿಶೇಷ ದಿನಗಳಂದು ಪೂಜೆ, ನೈವೇದ್ಯ, ಪ್ರಸಾದ ವಿನಿಯೋಗಗಳನ್ನು ನೆರವೇರಿಸುವುದಕ್ಕಾಗಿ ಹಲವಾರು ಶಾಶ್ವತ ನಿಧಿಗಳನ್ನು ಯೋಜಿಸಲಾಗಿದೆ. ಭಕ್ತಾದಿಗಳಿಂದ ಉದಾರವಾದ ದಾನ, ವಂತಿಗೆಗಳನ್ನು ಸ್ವೀಕರಿಸಲಾಗುತ್ತದೆ. ಈ ಕ್ಷೇತ್ರವು ಅನೇಕ ಯತಿವರೇಣ್ಯರ, ಪೀಠಾಧಿಪತಿಗಳ ಸೇವೆಯಿಂದ ಪಾವನವಾಗಿರುತ್ತದೆ. ಶ್ರೀಪೇಜಾವರ ಮಠಾಧೀಶರು, ಉತ್ತರಾದಿ ಮಠದ ಶ್ರೀಸತ್ಯ ಪ್ರಮೋದ ತೀರ್ಥರು ಮುಂತಾದವರು ಇಲ್ಲಿನ ಅಭಿವೃದ್ಧಿ ಕಾರ್ಯಗಳಿಗೆ ಮಾರ್ಗದರ್ಶನ ಮಾಡಿರುತ್ತಾರೆ.

## ಚಾಮರಾಜನಗರ ಜಿಲ್ಲೆ

# ಅಗರ

ಅಗರ ಗ್ರಾಮ ಈ ಹಿಂದೆ ಮೈಸೂರು ಜಿಲ್ಲೆಯಲ್ಲಿದ್ದು ನವರಚಿತ ಚಾಮರಾಜನಗರ ಜಿಲ್ಲೆಗೆ ಈಗ ಸೇರಿದೆ. ಯಳಂದೂರು ತಾಲೂಕಿಗೆ ಸೇರಿದ ಇದು ಹೋಬಳಿ ಕೇಂದ್ರವೂ ಅಹುದು. ಯಳಂದೂರಿನಿಂದ ಹತ್ತು ಕಿಲೋಮೀಟರ್ ದೂರದಲ್ಲಿರುವ, ಹಿಂದೊಮ್ಮೆ ಅಗ್ರಹಾರವಾಗಿದ್ದ ಅಗರದೊಂದಿಗೆ ಮಾಂಬಳ್ಳಿಯೆಂಬ ಗ್ರಾಮವನ್ನು ಜೋಡಣೆ ಮಾಡಿ 'ಜೋಡಿ ಗ್ರಾಮ'ವೆಂದು ಕರೆಯುತ್ತಾರೆ.

ರೇಷ್ಮೆಕೃಷಿ ಮತ್ತು ನೇಯ್ಗೆಗಳಿಗೆ ಹೆಸರುವಾಸಿಯಾದ ಅಗರದಲ್ಲಿ ಪುರಾತತ್ತ್ವ ಮಹತ್ತ್ವವನ್ನು ಪಡೆದಿರುವ ದುರ್ಗ, ನರಸಿಂಹ, ರಾಮೇಶ್ವರ ಮತ್ತು ವರದರಾಜ ದೇವಾಲಯಗಳಿವೆ. ಅಗರ ಗ್ರಾಮಕ್ಕೆ ಹೋಗಿ ಬರುವ ಸಲುವಾಗಿ ಸಾಕಷ್ಟು ಪ್ರಮಾಣದಲ್ಲಿ ಉತ್ತಮ ಸಾರಿಗೆ ವ್ಯವಸ್ಥೆಯೂ ಉಂಟು.

ಅಗರದಲ್ಲಿರುವ ಶ್ರೀ ನರಸಿಂಹ ದೇವಾಲಯವನ್ನು ಚೋಳರ ಕಾಲಕ್ಕೆ ಸೇರಿದ್ದು ಎಂದು ಹೇಳುತ್ತಾರೆ. ಈ ದೇವಾಲಯವು ದುಂಡಾಕಾರದ ಅಂತರಾಳವನ್ನು ಹೊಂದಿದೆ. ಚೌಕಾಕಾರದ ನವರಂಗವನ್ನು ಒಳಗೊಂಡಿದೆ. ಪಶ್ಚಿಮಾಭಿಮುಖವಾಗಿರುವ ಈ ಭವ್ಯ ದೇವಾಲಯದ ಪಶ್ಚಿಮ ಮತ್ತು ಉತ್ತರ ಭಾಗದ ದಿಕ್ಕಿನಲ್ಲಿ ಎರಡು ಸುಂದರ ಮಹಾ ದ್ವಾರಗಳಿವೆ.

ಇಲ್ಲಿರುವ ಶ್ರೀನರಸಿಂಹ ವಿಗ್ರಹವು ಒಂದು ಶಿಲ್ಪವಾಗಿ ಮಾತ್ರ ಇರುವಂತಹು ದಲ್ಲ. ಇದನ್ನು ಯೋಗಾ ನರಸಿಂಹ, ಲಕ್ಷ್ಮೀನರಸಿಂಹ, ಉಗ್ರ ನರಹಸಿಂಹ, ಜ್ವಾಲಾ ನರಸಿಂಹ ಮತ್ತು ಪ್ರಹ್ಲಾದವರದ ನರಸಿಂಹನೆಂಬ ಐದು ರೂಪಗಳ ಒಂದು 'ಸಂಯುಕ್ತ ರೂಪ'ದ ಪ್ರತಿಮೆಯೆಂದು ಪೂಜಿಸಲಾಗುತ್ತಿದೆ. ಇದೊಂದು ರೀತಿಯಲ್ಲಿ ನಂಬಿದ ಭಕ್ತರ ಪಾಲಿಗೆ ವಿಶಿಷ್ಟವಾದ ಅನನ್ಯ ಅನುಭೂತಿಯನ್ನು ಮೂಡಿಸುವುದಕ್ಕೆ ಸಹಾಯಕವಾಗಿ ಪರಿಣಮಿಸಿದೆ.

ನರಸಿಂಹಕ್ಷೇತ್ರವಾಗಿರುವುದರ ಜೊತೆಯಲ್ಲಿ ಚಾಮರಾಜನಗರ ಜಿಲ್ಲೆಯ ಪ್ರಸಿದ್ಧ ಸ್ಥಳವಾಗಿಯೂ ಅಗರವು ಸಾಕಷ್ಟು ಹೆಸರುವಾಸಿಯಾಗಿದೆ. ನಿರ್ದಿಷ್ಟ ಸಮಯಕ್ಕೆ ಮಾತ್ರ ಸೀಮಿತವಾಗಿಲ್ಲದೆ ಸಾಧಾರಣವಾಗಿ ಮೈಸೂರು ಜಿಲ್ಲೆಯಲ್ಲಿ ಪ್ರವಾಸ ಕೈಗೊಳ್ಳುವ ನರಸಿಂಹ ಆರಾಧಕರು ಅಗರ ಗ್ರಾಮಕ್ಕೂ ಒಂದು ಭೇಟಿಯನ್ನು ನೀಡದೇ ಹೊರಟು ಹೋಗಲು ಬಯಸಲಾರರು.



ಮೇಲುಕೋಟೆ ಯೋಗಾನರಸಿಂಹ



ತಿರುಮಂಜನದಲ್ಲಿ ಯೋಗಾನರಸಿಂಹ ಸ್ವಾಮಿ, ದುದ್ದ



ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನ, ನುಗ್ಗೇಹಳ್ಳಿ



ಯೋಗಾನರಸಿಂಹ, ಶಾಂತಿಗ್ರಾಮ

## ಮೈಸೂರು ಜಿಲ್ಲೆ

# ತಿರುಮಕೂಡ್ಲು ನರಸೀಪುರ

'ಭಾಸ್ಕರ ಕ್ಷೇತ್ರ'ವೆಂದು ಕರೆಯಲಾಗುವ ಟಿ.ನರಸೀಪುರವು ಮೈಸೂರು ಜಿಲ್ಲೆಗೆ ಸೇರಿದೆ. ಇದರ ಹೆಸರು ತಿರುಮಕೂಡ್ಲು ನರಸೀಪುರವೆಂದಿದೆ. ಪೌರಾಣಿಕ ಕ್ಷೇತ್ರವಾಗಿರುವ ಇಲ್ಲಿ ಪ್ರಾಕೃತಿಕ ಸಂಪತ್ತೂ ತುಂಬಿಕೊಂಡಿದೆ. ಈ ಪುಣ್ಯಧಾಮಕ್ಕೆ ಇತಿಹಾಸದ ಪ್ರಾಮುಖ್ಯತೆಯೂ ಕೂಡಿಕೊಂಡು ಇದನ್ನು ಸಂಗಮಸ್ಥಳವನ್ನಾಗಿ ಪ್ರಸಿದ್ಧಿಗೊಳಿಸಿದೆ. ಮೂರುನದಿಗಳು ಒಟ್ಟಿಗೆ ಸೇರಿರುವ ಕಾರಣ ಇದನ್ನು 'ತಿರುಮಕೂಡ್ಲು' ಎಂಬುದಾಗಿ ಕರೆಯುತ್ತಿದ್ದಾರೆ. ಪ್ರಯಾಗ ಕ್ಷೇತ್ರಕ್ಕೆ ಸಮನಾಗಿ ಇದನ್ನು ಗೌರವಿಸಲಾಗುತ್ತಿದೆ.

ನರಸೀಪುರವೆಂಬ ಹೆಸರಿಗೆ ಕಾರಣವಾದದ್ದು ಇಲ್ಲಿರುವ ಖ್ಯಾತಿವೆತ್ತ ಗುಂಜಾ ನರಸಿಂಹ ದೇವಾಲಯ. ಈ ಊರಿನ ಪ್ರಾಚೀನತೆಯನ್ನು ಶಿಲಾಯುಗಕ್ಕೆ ಕೊಂಡೊಯ್ಯಲಾಗಿದೆ. ನರಸೀಪುರದ ಪ್ರಾಚೀನತೆ ನವಶಿಲಾಯುಗದವರೆಗೆ ಚಾಚಿನಿಂತಿದೆ. ಇಲ್ಲಿ ಸೇರುವ ಮೂರು ನದಿಗಳು ಕನ್ನಡನಾಡಿನ ಕಾವೇರಿ, ಕೇರಳದ ಕಪಿಲಾ ಮತ್ತು ಅಂತರಗಂಗೆಯಾಗಿ ಹರಿಯುವ ಸ್ಫಟಿಕ ಸರೋವರ. ಇಲ್ಲಿನ ನದೀತೀರದಲ್ಲಿ ನಡೆದ ಉತ್ಖನನದಿಂದ ಪ್ರಾಚ್ಯವಸ್ತುಗಳು ಬೆಳಕಿಗೆ ಬಂದಿವೆ. ಈ ಸಂದರ್ಭದಲ್ಲಿ ದೊರೆತ ಮಡಕೆ-ಕುಡಿಕೆಗಳು, ಆಯುಧವಿಶೇಷಗಳು ಇದರ ಪ್ರಾಚೀನತೆಗೆ ಸಾಕ್ಷಿಯಾದದ್ದೆಂದು ಹೇಳಬಹುದು.

## ಸಂಸ್ಕೃತಿ ಸಂಗಮ

ಇತಿಹಾಸ ಪರಂಪರೆಯನ್ನು ಪ್ರತಿಬಿಂಬಿಸುತ್ತಿರುವ ಟಿ. ನರಸೀಪುರವು ಧರ್ಮಸಂಸ್ಕೃತಿಗಳ ಸಂಗಮವಾಗಿಯೂ ಶೋಭಿಸುತ್ತಿದೆ. ಇದಕ್ಕೆ ಇಲ್ಲಿರುವ ಹಲವು ವಿಶಿಷ್ಟ ದೇವಾಲಯಗಳು ಸಾಕ್ಷಿ. ಅಗಸ್ತ್ಯೇಶ್ವರ, ಮಾರ್ಕಂಡೇಶ್ವರ, ಸೋಮೇಶ್ವರ ದೇವಾಲಯಗಳೊಂದಿಗೆ ಗುಂಜಾ ನರಸಿಂಹ ದೇವಾಲಯಗಳ ಸಮೂಹವನ್ನೇ ಇಲ್ಲಿ ನೋಡಬಹುದು. ಪವಿತ್ರ ಪೂಜಾಮಂದಿರಗಳಲ್ಲಿ ಅತ್ಯಂತ ವಿಶಿಷ್ಟವಾದದ್ದು ಮತ್ತು ಆಕರ್ಷಕವಾದದ್ದು ನರಸಿಂಹ ದೇವಾಲಯ. ಇದು ಊರಿನ ಕೇಂದ್ರಬಿಂದು. ಅಪಾರಸಂಖ್ಯೆಯ ಭಕ್ತರನ್ನು ತನ್ನೆಡೆಗೆ ಆಕರ್ಷಿಸುತ್ತಿರುವ ಪವಿತ್ರಸ್ಮಾರಕ. ಊರಿನ ಉತ್ತರಭಾಗದಲ್ಲಿದ್ದು ಉತ್ತರಕ್ಕೆ ಮೊಗಮಾಡಿ ನಿಂತಿರುವ ನದೀದಂಡೆಯಲ್ಲಿರುವ ನರಸಿಂಹಸ್ವಾಮಿಯ ಆರಾಧನಾ ಸ್ಥಳವಾಗಿ ಈ ದೇವಾಲಯದ ಕೀರ್ತಿ ಪ್ರತಿಷ್ಠೆಗಳನ್ನು ತಿಳಿದುಕೊಳ್ಳಬಹುದು.

ದ್ರಾವಿಡ ಶೈಲಿಗೆ ಸೇರಿರುವ ದೇವಾಲಯವು ಸಾಕಷ್ಟು ವಿಸ್ತಾರವನ್ನೊಳಗೊಂಡಿದೆ. ವಾಸ್ತುಶಿಲ್ಪದ ದೃಷ್ಟಿಯಿಂದ ಇದು ಗಮನಾರ್ಹವಾದ ರಚನೆಯಾಗಿದೆ. ಪ್ರಾಕಾರ, ಮಹಾದ್ವಾರ, ಗೋಪುರಗಳು, ಮುಖಮಂಟಪ ಮತ್ತು ಗರ್ಭಗೃಹಗಳು ಆಲಯಕ್ಕೆ ವಿಶೇಷವಾದ

ವಿನ್ಯಾಸವನ್ನೊದಗಿಸಿವೆ. ಶಾಸನಗಳು- ಐತಿಹ್ಯಗಳು, ಪುರಾಣ ಸಂಗತಿಗಳು ಇದರ ಮಹತ್ತ್ವವನ್ನು ವಿವರಿಸುತ್ತಿವೆ. ಪುರಾತನ ಕಾಲದ ಹಿರಿಮೆಯೊಂದಿಗೆ ಅರ್ವಾಚೀನ ಕಾಲದವರ ಆದರೋಪಚಾರಗಳಿಂದ ಈ ದೇವಾಲಯಕ್ಕೆ ಮನ್ನಣೆ ದೊರೆತು ಅಭಿವೃದ್ಧಿಗೊಳ್ಳುತ್ತಿದೆ.

ನರಸಿಂಹಸ್ವಾಮಿಯ ಮೂಲವರರ ಬಗ್ಗೆ ಪ್ರಾಚೀನವಾದ ಐತಿಹ್ಯವೊಂದು ಇಲ್ಲಿ ಪ್ರಚಾರದಲ್ಲಿದೆ. ಇದು ನಮ್ಮ ನಾಡಿನ ಯಾವುದೇ ದೇವಾಲಯದ ಅರ್ಚಾಮೂರ್ತಿಗಳ ವಿಚಾರದಲ್ಲಿ ಇರುವ ನಂಬಿಕೆ-ನಿಷ್ಠೆಗಳಂತೆಯೇ ಇರುವುದಾಗಿದೆಯೆಂದು ಹೇಳಬಹುದು. ಈ ಊರಿನಲ್ಲಿದ್ದ ಬಟ್ಟೆ ಒಗೆಯುವ ಕಾಯಕದಲ್ಲಿ ನಿರತನಾಗಿದ್ದ ಮಡಿವಾಳನೊಬ್ಬನಿಗೆ ಸ್ವಾಮಿಯು ಕನಸಿನಲ್ಲಿ ಕಾಣಿಸಿಕೊಂಡು ತಾನು ಹುತ್ತದಲ್ಲಿ ಅಡಗಿರುವ ವಿಚಾರವನ್ನು ತಿಳಿಸುತ್ತಾನೆ. ಸಾಮಾನ್ಯ ಮನುಷ್ಯನೊಬ್ಬ ಭಗವಂತನ ನೆಲೆಯನ್ನರಸಿ ಆತನನ್ನು ಜೀರ್ಣೋದ್ಧಾರ ಮಾಡುವ ಕೆಲಸ ಸುಲಭವಾದದ್ದೇನಲ್ಲ. ಪರಿಶ್ರಮಕ್ಕಿಂತಲೂ ಹೆಚ್ಚಾಗಿ ದ್ರವ್ಯ-ಧನಗಳ ಸಂಬಂಧವನ್ನು ಇದು ಒಳಗೊಂಡದ್ದಾಗಿರುತ್ತದೆ. ಗಾಢ ಚಿಂತೆಯಲ್ಲಿದ್ದ ಮಡಿವಾಳನಿಗೆ ದೇವರೇ ದಾರಿಯನ್ನು ತೋರಿಸಿದನಂತೆ. ಅವನು ಪ್ರತಿನಿತ್ಯ ಬಟ್ಟೆಗಳನ್ನು ಮಡಿಮಾಡುವುದಕ್ಕೆ ಬಳಸುವ ಕಲ್ಲುಬಂಡೆಯ ಕೆಳಗೆ 'ನಿಧಿ'ಯಿದೆಯೆಂಬುದನ್ನು ಭಗವಂತನೇ ನಿರ್ದೇಶಿಸಿರುತ್ತಾನೆ. ತನ್ನ ಸಮಸ್ಯೆಯು ಪರಿಹಾರವಾಗಿ ಆ ಸಂಪತ್ತನ್ನು ತೆಗೆದುಕೊಂಡು ಸಾರ್ಥಕವಾದ ರೀತಿಯಲ್ಲಿ ಬಳಸಿಕೊಂಡು ದೇವರ ಪ್ರತಿಷ್ಠಾಕಾರ್ಯಗಳನ್ನು ನೆರವೇರಿಸಲಾಗುತ್ತದೆ. ಮೂರ್ತಿಯ ರಕ್ಷಣೆಗೆ ಉಚಿತವಾದ ರೀತಿಯಲ್ಲಿ ಸಾಧಾರಣ ಕಟ್ಟಡವೂ ನಿರ್ಮಾಣವಾಗಿದ್ದಿರಬೇಕು. ತದನಂತರದ ಆಳರಸರ ಕಾಲದಲ್ಲಿ ಇಲ್ಲಿ ಉನ್ನತವಾದ ದೇವಾಲಯದ ನಿರ್ಮಾಣವಾದದ್ದು ಎಂದು ಊಹಿಸಬಹುದು.

## ಗುಡಿಯ ಇತಿಹಾಸ

ದೇವಾಲಯದ ಪ್ರಮುಖ ಭಾಗವಾದ ಗರ್ಭಗೃಹದ ಹೊಸ್ತಿಲಿಗೆ ಅಳವಡಿಸಲಾಗಿರುವ ಶಿಲೆಯು ಅಂದು ಅಗಸನಿಗೆ ದೇವರ ಪ್ರತಿಷ್ಠಾಕಾರ್ಯಗಳಿಗೆ ನೆರವಾದ ನಿಧಿಯನ್ನು ತನ್ನಲ್ಲಿ ಅಡಗಿಸಿಕೊಂಡಿದ್ದ ಕಲ್ಲೇ ಆಗಿದೆಯೆಂಬುದು ಪುರಾತನ ಕಾಲದಿಂದ ಬಂದಿರುವ ನಂಬಿಕೆ. ದೇವರು-ಭಕ್ತರ ನಡುವಣ ಸಂಬಂಧ ಮತ್ತು ಭಗವಂತನಲ್ಲಿ ಹೊಂದಲಾಗುವ ಗಾಢಭಕ್ತಿ ಅನುಪಮ ಸೇವೆಗಳ ಹಿನ್ನೆಲೆಯಲ್ಲಿ ಇಂತಹ ಐತಿಹ್ಯಗಳಿರುವುದು ಸಾಮಾನ್ಯವೆಂದು ಹೇಳಬಹುದು. ಜಡವಾದ ವಸ್ತುವಿನಲ್ಲಿ ಚೈತನ್ಯವನ್ನು ಕಾಣುವ, ಆ ಚೈತನ್ಯದ ಮೂಲಧಾತುವಾದ ಭಗವತ್ಕೃಪೆಯನ್ನು ಹೊಂದಲು ಹಂಬಲಿಸುವ ಧಾರ್ಮಿಕ ಶ್ರದ್ಧಾಳುಗಳಿಗೆ ಇದೊಂದು ರೋಚಕ ಸಂಗತಿಯಾಗಬಹುದು. ದೇವಾಲಯದಲ್ಲಿರುವ ಶಿಲಾಮೂರ್ತಿಯೊಂದನ್ನು ಈ ಶ್ರೇಷ್ಠವಾದ ಕಾರ್ಯಕ್ಕೆ ಕಾರಣನಾದ ಪುರುಷನೆಂದು ಭಾವಿಸಿ ಆದರಿಸಿ ಗೌರವಿಸಲಾಗುತ್ತಿದೆ.

ವಿಜಯನಗರ ಸಾಮ್ರಾಜ್ಯದ ವೈಭವದ ಪರಾಕಾಷ್ಠೆಗೆ ಕಾರಣರಾದ ಕೃಷ್ಣದೇವರಾಯರು ಲಕ್ಷ್ಮೀನರಸಿಂಹ ದೇವಾಲಯದ ಅಭಿವೃದ್ಧಿಯಲ್ಲಿ ಮಹತ್ವವಾದ ಪಾತ್ರವನ್ನು

ನಿರ್ವಹಿಸಿರುತ್ತಾರೆ. ಇದಕ್ಕೆ ನಿದರ್ಶನವಾಗಿ ಪ್ರಾಚೀನ ಶಿಲಾಶಾಸನದ ದಾಖಲೆಯು ಇಲ್ಲಿ ದೊರೆಯುತ್ತಿದೆ. ಇದರಲ್ಲಿ ದೇವಾಲಯಕ್ಕೆ ನೀಡಿರುವ ದಾನ-ದತ್ತಿಗಳ ವಿವರಗಳಿವೆ. ಕೃಷ್ಣದೇವರಾಯರ ಅನಂತರದ ಕಾಲದಲ್ಲಿ ಮೂಗೂರು ಅರಸುಮನೆತನದವರು ದೇವಾಲಯದ ವಿಸ್ತರಣಾಕಾರ್ಯದಲ್ಲಿ ನೆರವಾಗಿದ್ದಾರೆ. ದೇವಾಲಯದ ಮಂಟಪದ ಮುಂಭಾಗದಲ್ಲಿ ಬಲಿಪೀಠದ ಬಳಿ ಒಂದಕ್ಕೊಂದು ಎದುರಾಗಿ ಎರಡು ಕಂಬಗಳನ್ನು ನೋಡಬಹುದು. ಇವುಗಳ ಮೇಲೆ ಅಂಜಲೀಬದ್ಧರಾಗಿ ನಿಂತಿರುವ ಗಡ್ಡಧಾರಿ ವ್ಯಕ್ತಿಗಳ ಉಬ್ಬುಶಿಲ್ಪವಿದೆ. ಒಂದು ಕಂಬದಲ್ಲಿರುವ ಶಿಲ್ಪವು ಮೂಗೂರು ಅರಸರದಾಗಿದ್ದರೆ, ಮತ್ತೊಂದು ಅವರ ಸೋದರರೂ, ದೇವಾಲಯದ ನಿರ್ಮಾಪಕರೂ ಆಗಿದ್ದದ್ದೆಂದು ಗುರುತಿಸುತ್ತಿದ್ದಾರೆ.

ಮಹಾದ್ವಾರದ ಬಳಿಯಿರುವ ಮತ್ತೊಂದು ಶಿಲ್ಪವು ಗೋಪುರವನ್ನು ನಿರ್ಮಾಣ ಮಾಡಿದ ಮತ್ತೊಬ್ಬ ವ್ಯಕ್ತಿಯನ್ನು ಪ್ರತಿನಿಧಿಸುತ್ತಿದೆ. ಇವರೂ ಸಹಾ ಮೂಗೂರು ಅರಸರ ಸಂತತಿಗೆ ಸೇರಿದವರೇ ಆಗಿರುವರೆಂದು ಊಹಿಸಬಹುದಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ಸಹ ಈ ದೇವಾಲಯದ ಪುರೋಭಿವೃದ್ಧಿಗಾಗಿ ಶ್ರಮಿಸಿರುತ್ತಾರೆ. ಇಂತಹ ಆಳರಸರ ಕೃಪಾಪೋಷಣೆಯಿಂದ ಆಲಯದ ಸ್ಥಿತಿ-ಗತಿಗಳು ಇಂದಿಗೂ ಉತ್ತಮವಾಗಿರಲು ಸಹಕಾರಿಯಾಗಿದೆಯೆನ್ನಬಹುದು.

ದೇವಾಲಯದ ಉತ್ತರ ಮಹಾದ್ವಾರದ ಮುಂದಿರುವ ಮಂಟಪದ ಮೇಲು ಚಾವಣಿಯಲ್ಲಿ ತೊಲೆಗಳ ಮೇಲೆ ಒಂದು ಶಾಸನವಿದೆ. ಇದರ ಕಾಲವನ್ನು ಸುಮಾರು ಕ್ರಿ.ಶ. ೧೭೨೫ ಎಂಬುದಾಗಿ ಊಹಿಸಲಾಗಿದೆ. ಈ ಶಾಸನವು ಇಮ್ಮಡಿ ಕಂಠೀರವ ನರಸರಾಜನ ಮಗ ದೊಡ್ಡಕೃಷ್ಣರಾಜ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಂದನೆಯ ಕೃಷ್ಣರಾಜ ಒಡೆಯನ ಮಗ ಕೃಷ್ಣೇಅರಸಿನ ಧರ್ಮಪತ್ನಿಯಾದ ಚಾಮಮ್ಮಣ್ಣಿಯು ಮಂಟಪವನ್ನು ಕಟ್ಟಿಸಿದ ವಸ್ತುವನ್ನು ಒಳಗೊಂಡಿರುತ್ತದೆ.

ನರಸೀಪುರದ ಮತ್ತೊಂದು ಪ್ರಸಿದ್ಧ ಪೂಜಾಮಂದಿರ ಅಗಸ್ತ್ಯೇಶ್ವರ ದೇವಾಲಯದ ಗರ್ಭಗೃಹದ ಗೋಡೆಯ ಮೇಲಿರುವ ಶಾಸನವು ಸದಾಶಿವರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದು. ಇದರಲ್ಲಿ ಅಗಸ್ತ್ಯೇಶ್ವರ ಮತ್ತು ಆದಿ ಗುಂಜಾನರಸಿಂಹ ದೇವರುಗಳಿಗೆ ಮಹಾ ಮಂಡಲೇಶ್ವರ ಕೊಮಾರ ಕೊಂಡರಾಜಯ್ಯದೇವ ಮಹಾ ಅರಸನ ಕಾರ್ಯಕ್ಕೆ ಕರ್ತನಾದ ತಿಮ್ಮರಾಜನ ಮಗ ರಾಯಸದ ವೆಂಕಟಾದ್ರಿಯು ಶ್ರೀರಂಗಪಟ್ಟಣಕ್ಕೆ ಸೇರಿದ ಒಂದು ಗ್ರಾಮವನ್ನು ಅದರ ಉಪಗ್ರಾಮಗಳನ್ನು ದತ್ತಿಬಿಟ್ಟಿರುವುದುನ್ನು ಶಾಸನವು ತಿಳಿಸುತ್ತದೆ.

## ಆಕರ್ಷಕ ವಿಗ್ರಹ

ಸುಂದರ ಕಲಾತ್ಮಕತೆಯೇ ರೂಪುದಳೆದಂತಿರುವ ಈ ದೇವಾಲಯದಲ್ಲಿನ ಪ್ರಧಾನ ದೇವರು ಲಕ್ಷ್ಮೀನರಸಿಂಹಸ್ವಾಮಿ. ಮೂಲವರರ ರೂಪವು ಮನೋಹರವೂ ಅತ್ಯಂತ

ಆಕರ್ಷಕವೂ ಆಗಿರುವುದಾಗಿದೆ. ಸ್ವಾಮಿಯ ತೊಡೆಯನ್ನು ಲಕ್ಷ್ಮೀದೇವಿಯು ಅಲಂಕರಿಸಿರುತ್ತಾಳೆ. ಶಾಂತವಾದ ಸೌಮ್ಯವಾದ ಮುಖಭಾವ ಎಂಥವರಲ್ಲೂ ಭಕ್ತಿಯ ಭಾವನೆಯನ್ನು ತುಂಬುವಂತಿರುತ್ತದೆ. ವಿಷ್ಣುಮೂರ್ತಿಯ ಕೈಗಳು ಹೊಂದಬೇಕಾದ ಆಯುಧ, ಮುದ್ರೆಗಳಿಂದ ಶೋಭಿಸುತ್ತದೆ. ಅರ್ಚಾಮೂರ್ತಿಯ ಬಲಗಡೆಯ ಹಸ್ತದಲ್ಲಿ ಗುಲಗಂಜಿಯ ಮೂಲಿಕೆಯಿದೆ. ಇದು ಈ ಸ್ವಾಮಿಯು ವರವನ್ನು ಪ್ರಸಾದಿಸುವುದರಲ್ಲಿ ಇತರ ದೈವಗಳಿಗಿಂತ ಮುಂದಾದವನು ಎಂಬುದನ್ನೂ, ಈ ಕ್ಷೇತ್ರವು ಪಾವಿತ್ರ್ಯದಲ್ಲಿ ಇತರ ಸ್ಥಳಗಳಿಗಿಂತ ಗುಲಗಂಜಿಯಷ್ಟು ತೂಕ ಹೆಚ್ಚಿನದೆಂಬುದನ್ನು ಸಾಬೀತುಪಡಿಸುತ್ತದೆಯೆಂದು ವ್ಯಾಖ್ಯಾನಿಸಲಾಗಿದೆ.

ದೇವಾಲಯದ ಪ್ರಾಕಾರದಲ್ಲಿ ಇತರ ಉಪ ಆಲಯಗಳನ್ನು ದರ್ಶಿಸಬಹುದು. ಈ ಪುಟ್ಟ ಪುಟ್ಟ ಗುಡಿಗಳಲ್ಲಿ ರಾಮ-ಕೃಷ್ಣ-ವರದರಾಜ-ಆಂಡಾಳ್ ಮೊದಲಾದವರ ಸನ್ನಿಧಿಗಳಿವೆ. ಸುತ್ತಲಿರುವ ಕೈಪಿಡಿ ಗೋಡೆಯು ವಿಷ್ಣುವಿನ ವಿವಿಧ ರೂಪ, ಅವತಾರಗಳ ರಚನೆಗಳಿಂದ ಅಲಂಕೃತಗೊಂಡಿದೆ. ಕೆಲವು ಮೂರ್ತಿಗಳ ಕೆಳಭಾಗದಲ್ಲಿ ನಾಮಫಲಕಗಳನ್ನು ಅಳವಡಿಸಲಾಗಿದೆ. ಕೃಷ್ಣಾವತಾರದ ಲೀಲೆಗಳನ್ನು ಪ್ರತಿನಿಧಿಸುವ ಮೂರ್ತಿಗಳು ಸಹ ಇಲ್ಲಿವೆ. ಇದರಿಂದಾಗಿ ಇಡೀ ದೇವಾಲಯದ ಆವರಣಕ್ಕೆ ವಿಶೇಷವಾದ ಮೆರುಗು ಬಂದಂತಾಗಿರುತ್ತದೆ.

ವಿಮಾನಗೋಪುರವು ಆಕರ್ಷಕವಾಗಿದ್ದು ಇದನ್ನು 'ಅನಂತ ಪುಣ್ಯಕೋಟಿ ವಿಮಾನ'ವೆಂದು ಕರೆಯುತ್ತಾರೆ. ಈ ಆಲಯದ ಒಂದು ಮಂಟಪವು ಪಕ್ಕಕ್ಕೆ ವಾಲಿಕೊಂಡು ನಿಂತಿದೆ. ಒಮ್ಮೊಮ್ಮೆ ನದಿಯ ನೀರಿನ ರಭಸವು ಅತಿಯಾದ ಕಾರಣ ಇದಕ್ಕೆ ಈ ಸ್ಥಿತಿಯು ಒದಗಿದ್ದಿರಬೇಕು. ದೇವಸ್ಥಾನದ ಒಳಭಾಗಕ್ಕೆ ನೀರು ಹರಿದುಬಂದಿರುವ ನಿದರ್ಶನಗಳನ್ನು ಇಲ್ಲಿ ಹೇಳುತ್ತಾರೆ. ದೇವರಮೂರ್ತಿಯೂ ಸಹ ಈ ಜಲಾವರ್ತನಕ್ಕೆ ಒಳಗಾಗದೆ ಹೋಗಿಲ್ಲ. ನರಸಿಂಹನ ವಿವಿಧ ರೂಪಗಳನ್ನು ಕಾಣಬಯಸುವವರಿಗೂ ದೇವಾಲಯದಲ್ಲಿ ಅವಕಾಶವಿದೆ. ಆಕರ್ಷಕವಾದ ಮೂರ್ತಿಸ್ವರೂಪಗಳನ್ನು ಹೊರಪ್ರಾಕಾರದ ಮೇಲುಚಾವಣಿಯಲ್ಲಿ ಕೆತ್ತಿರುತ್ತಾರೆ.

ತಿರುಮಕೂಡ್ಲು ನರಸೀಪುರವು ದಿವ್ಯವಾದ ಕ್ಷೇತ್ರವಾಗಿ, ಭಕ್ತರು ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಪ್ರಶಸ್ತವಾದ ಪುಣ್ಯಸ್ಥಳವಾಗಿ ವಿರಾಜಿಸುತ್ತಿದೆ. ಬೆಂಗಳೂರು ಮತ್ತು ಮೈಸೂರು ಕಡೆಗಳಿಂದ ಸೂಕ್ತವಾದ ಸಾರಿಗೆ ಸಂಪರ್ಕವನ್ನು ವಿಪುಲವಾದ ಪ್ರಮಾಣದಲ್ಲಿ ಹೊಂದಿದೆ. ಇಲ್ಲಿಗೆ ಬರುವ ಯಾತ್ರಿಕರಿಗೆ ಸಾಮಾನ್ಯ ಸೌಲಭ್ಯಗಳು ಇಲ್ಲಿ ದೊರೆಯುವಂತಾಗಿದೆ.

ಪ್ರಶಾಂತವಾದ ವಾತಾವರಣದಿಂದ ಕೂಡಿ, ಮನಸ್ಸಿನ ಕಾಳಿಕೆಯನ್ನು ಕಳೆದು ನಿರ್ಮಲವಾದ ಅಂತಃಕರಣವನ್ನು ಹೊಂದಬೇಕಾದವರಿಗೆ ತಿರುಮಕೂಡಲು ನರಸೀಪುರವು ಭರವಸೆಯನ್ನು ಮೂಡಿಸುವ ಸ್ಥಳವೆಂಬುದರಲ್ಲಿ ಸಂದೇಹವೇನಿಲ್ಲ.

# ಸಾಲಿಗ್ರಾಮ - ಸರಗೂರು

ಮೈಸೂರು ಜಿಲ್ಲೆಯಲ್ಲಿರುವ ಮತ್ತೆರಡು ನರಸಿಂಹನ ಸನ್ನಿಧಿಗಳಾಗಿ ಸಾಲಿಗ್ರಾಮ ಮತ್ತು ಸರಗೂರುಗಳನ್ನು ಇಲ್ಲಿ ಗಮನಿಸಬೇಕಾಗುತ್ತದೆ.

## ಸಾಲಿಗ್ರಾಮ

ಕೃಷ್ಣರಾಜನಗರ ತಾಲೂಕಿಗೆ ಸೇರಿರುವ ಸಾಲಿಗ್ರಾಮವು ಶ್ರೀವೈಷ್ಣವರ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಭಗವಂತನ ಅಡಿದಾವರೆಗಳಲ್ಲಿ ತಮ್ಮ ಭಕ್ತಿಶ್ರದ್ಧೆಗಳನ್ನು ಸಮರ್ಪಿಸಿಕೊಂಡು ಆತನ ಕೃಪೆಗೆ ಪಾತ್ರ ರಾಗುವ ಮಾರ್ಗದಲ್ಲಿ ಆಚಾರ್ಯಪುರುಷರ ಆಶೀರ್ವಾದವನ್ನು ಸಹ ಹೊತ್ತ ಅನಂತ ಭಕ್ತಕೋಟಿಗೆ ಈ ಪುಣ್ಯಕ್ಷೇತ್ರವು ಶಾಂತಿ-ಸಮಾಧಾನಗಳನ್ನು ನೀಡುತ್ತಲಿದೆ. ಇಂತಹ ಸ್ಥಳದಲ್ಲಿ ವೈಷ್ಣವಾಚಾರ್ಯರಾದ ಶ್ರೀರಾಮಾನುಜರು ಕೆಲವು ಕಾಲ ವಾಸ್ತವ್ಯ ಮಾಡಿದ್ದ ರೆಂದು ಹೇಳುತ್ತಾರೆ.

ಸಾಲಿಗ್ರಾಮವು ಗಂಗ ರಾಜರ ಆಳ್ವಿಕೆಯ ಕಾಲದಲ್ಲಿ ಅವರ ರಾಜ್ಯದ ಒಂದು ಭಾಗವಾಗಿ ಸಹ ಶೋಭಿಸಿದೆ. ಈ ಊರಿನಲ್ಲಿ ಹೊಯ್ಸಳರ ಕಾಲದ ಕೆಲವು ದೇವಾಲಯ ಗಳಿವೆ. ಅವುಗಳಲ್ಲಿ ನರಸಿಂಹಸ್ವಾಮಿಯ ದೇವಾಲಯವು ಪ್ರಧಾನವಾದುದು ಎಂದು ಹೇಳಬಹುದು. ಈ ಆಲಯದಲ್ಲಿರುವ ಯೋಗಾನರಸಿಂಹ ಮೂರ್ತಿಯು ಸಂಸಾರದ ಕೋಟಲೆಗಳಿಗೆ ಸಿಲುಕಿದವರನ್ನು ಅದರಿಂದ ಪಾರುಮಾಡುವ ದಿಸೆಯಲ್ಲಿ ಯೋಗದ ಪರಮ ಪ್ರಯೋಜನವನ್ನು ಬೋಧಿಸುವಂತೆ, ತಾನೇ ಅದಕ್ಕೆ ನಿದರ್ಶನವೆಂಬಂತೆ ಪ್ರಶಾಂತನಾಗಿ ಕುಳಿತಿದ್ದಾನೆ. ಈ ಸ್ಥಳದಲ್ಲಿರುವ ಪಾದವನ್ನು ಶ್ರೀಮದಾಚಾರ್ಯರದೆಂದು ಹೇಳಿ ಪೂಜಿಸು ತ್ತಿದ್ದಾರೆ. ಕಾವೇರಿ ನದಿಯಿಂದ ಬರುವ 'ಸಾಲಿಗ್ರಾಮ' ಕಾಲುವೆಯೂ ಈ ಊರಿನ ಮೂಲಕವೇ ಹರಿದುಹೋಗುವುದರಿಂದ ಈ ಊರಿಗೆ ಸಾಲಿಗ್ರಾಮವೆಂಬ ಹೆಸರೇ ಬಂದಿರುತ್ತದೆ.

## ಸರಗೂರು

ಹೆಗ್ಗಡದೇವನಕೋಟೆ ತಾಲೂಕಿಗೆ ಸೇರಿರುವ ಸರಗೂರು ಜೈನ ಧರ್ಮಕ್ಕೆ ಪ್ರಸಿದ್ಧವಾಗಿರುವುದು ಇಲ್ಲಿರುವ ಎರಡು ಬಸದಿಗಳಿಂದ ವ್ಯಕ್ತವಾಗುವಂತಹ ಸಂಗತಿ. ಇಂತಹ ಸ್ಥಳದಲ್ಲಿ ವೈದಿಕ ಧರ್ಮ ಮತ್ತು ಅದರಲ್ಲಿಯೂ ವಿಷ್ಣುವಿನ ಆರಾಧನೆಯನ್ನು ಪ್ರತಿನಿಧಿಸುವಂತಹ ಶ್ರೀಲಕ್ಷ್ಮೀ ನರಸಿಂಹ ದೇವಾಲಯವಿದ್ದು, ಇದನ್ನು ಹದಿನೇಳನೆಯ ಶತಮಾನದಲ್ಲಿ ನಿರ್ಮಿಸಿದ ವಿಚಾರವನ್ನು ಇದರ ಶಿಲ್ಪಶೈಲಿಯ ಆಧಾರದಿಂದ ನಿರ್ಧರಿಸಿ ಹೇಳಲಾಗುತ್ತದೆ.

## ಮಂಡ್ಯ ಜಿಲ್ಲೆ

# ಶ್ರೀರಂಗಪಟ್ಟಣ

ಬೆಂಗಳೂರಿಗೆ ಒಂದು ನೂರಾ ಇಪ್ಪತ್ತೈದು ಕಿ.ಮೀ. ದೂರದಲ್ಲಿಯೂ ಮತ್ತು ಮೈಸೂರಿಗೆ ಸುಮಾರು ಹದಿನೈದು ಕಿ.ಮೀ. ಹತ್ತಿರದಲ್ಲಿರುವ ಐತಿಹಾಸಿಕ ಕೋಟೆ ಕೊತ್ತಲಗಳಿಂದಲೂ, ಪ್ರಾಕೃತಿಕ ಸಂಪತ್ತಿನಿಂದಲೂ, ಅರಮನೆ ಉದ್ಯಾನಗಳಿಂದಲೂ, ಶ್ರೀರಂಗನಾಥನ ಆರಾಧನಾ ಕೇಂದ್ರವಾಗಿಯೂ ಪ್ರಸಿದ್ಧವಾಗಿರುವ ಶ್ರೀರಂಗಪಟ್ಟಣವು ಮಂಡ್ಯ ಜಿಲ್ಲೆಯಲ್ಲಿರುವ ಮತ್ತೊಂದು ಪ್ರಮುಖವಾದ ಪ್ರವಾಸಿತಾಣವಾಗಿದೆ. ರೈಲು-ಬಸ್ಸುಗಳ ಯಥೇಚ್ಛವಾದ ಓಡಾಟವಿರುವ ಈ ಪಟ್ಟಣವನ್ನು ಪುಣ್ಯಮಯವಾದ ಹಾಗೂ ಜೀವನೋಪಕಾರಿಯಾದ ಕಾವೇರಿ ನದಿಯು ಬಳಸಿಕೊಂಡು ಮುಂದೆ ಹರಿಯುತ್ತದೆ. ಇದೊಂದು ರೋಮಾಂಚಕಾರಿಯಾದ ನೋಟವಾಗಿದೆ.

ಶ್ರೀರಂಗಪಟ್ಟಣವೆಂದ ಕೂಡಲೆ ನಮ್ಮ ಮುಂದೆ ಪ್ರತ್ಯಕ್ಷವಾಗುವ ವ್ಯಕ್ತಿ ಟಿಪ್ಪು ಸುಲ್ತಾನ್. ಈ ದೊರೆಯು ಕಟ್ಟಿಸಿರುವ ಅನೇಕ ಪ್ರಾಚೀನವಾದ ಸ್ಮಾರಕಗಳು ಈ ಪಟ್ಟಣದಲ್ಲಿವೆ. ಇವನಿಗೂ ಹಿಂದೆ ಹೊಯ್ಸಳರ ರಾಜನಾದ ಉದಯಾದಿತ್ಯನು ವಿಷ್ಣುವರ್ಧನನ ಸೋದರ. ಮೂಲ ಶ್ರೀರಂಗಪಟ್ಟಣವನ್ನು ಕ್ರಿ.ಶ. ೧೧೨೦ರಲ್ಲಿ ಕಟ್ಟಿದಂತೆ ತಿಳಿದು ಬಂರುತ್ತದೆ. ಮೈಸೂರರಸರ ರಾಜಧಾನಿಯಾಗಿ ಶ್ರೀರಂಗ ಪಟ್ಟಣವು ಪ್ರಸಿದ್ಧವಾಗಿದೆ. ಆ ವಂಶದ ರಾಜಶ್ರೇಷ್ಠರಾದ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಇದು ತನ್ನ ಉನ್ನತಸ್ಥಿತಿಯನ್ನು ತಲುಪಿತ್ತು, ಹೇರಳವಾದ ಶಾಸನ ಸಂಪತ್ತು ಇಲ್ಲಿ ಬೆಳಕಿಗೆ ಬಂದಿರುತ್ತದೆ. ಪಟ್ಟಣದ ವರ್ಣನೆಯನ್ನು ಇವು ಒಳಗೊಂಡಿವೆ. ದೇವಾಲಯಗಳು ಮಸೀದಿಗಳು ಮತ್ತು ಅನೇಕ ಸ್ಮಾರಕಗಳಿರುವ ಈ ಪಟ್ಟಣದ ಸುತ್ತಲೂ ನಾಲ್ಕು ದ್ವಾರಗಳಿರುವ ಬಲವಾದ ಕೋಟೆಯಿದೆ. ಬ್ರಿಟಿಷರ ಕಾಲದಲ್ಲಿ ಸಂಭವಿಸಿದ ಭೀಕರವಾದ ಕಾಳಗದಲ್ಲಿ ಈ ಕೋಟೆಯ ಅನೇಕ ಭಾಗಗಳು ಹಾಳಾಗಿ ಹೋಗಿದ್ದು ಅಳಿದುಳಿದು ನಿಂತಿರುವ ಅವಶೇಷಗಳು ಕೋಟೆಯ ಗತ ವೈಭವವನ್ನು ಶ್ರೀರಂಗಪಟ್ಟಣಕ್ಕೆ ಬರುವ ಯಾತ್ರಾರ್ಥಿಗಳು, ಪ್ರವಾಸಿಗರಿಗೆ ಇಂದು ಸಾರುತ್ತಿದೆ.

ಶ್ರೀರಂಗ ಪಟ್ಟಣದಲ್ಲಿರುವ ಪ್ರಧಾನವಾದ ದೇವಸ್ಥಾನವು ಶ್ರೀರಂಗನಾಥಸ್ವಾಮಿಗೆ ಅಂಕಿತಗೊಂಡಿವೆ. ಇಲ್ಲಿನ ಇನ್ನಿತರ ಪ್ರಸಿದ್ಧ ದೇವಾಲಯಗಳಲ್ಲಿ ಲಕ್ಷ್ಮೀನರಸಿಂಹ ದೇವಾಲಯವು ಗಮನಾರ್ಹವಾದದ್ದಾಗಿದೆ. ಶ್ರೀಕಂಠೀರವ ನರಸರಾಜ ಒಡೆಯರು ಇಲ್ಲಿನ ನರಸಿಂಹ ದೇವಾಲಯದ ನಿರ್ಮಾಣಕ್ಕೆ ಪ್ರಮುಖ ಕಾರಣಕರ್ತರಾಗಿದ್ದಾರೆ. ಅವರ ಈ ಕಾರ್ಯವು ಶಾಶ್ವತವಾಗಿ ಉಳಿಯುವಂತೆ ಮತ್ತು ಇದನ್ನು ಗುರುತಿಸಲು ಅನುಕೂಲವಾಗುವಂತೆ ಒಡೆಯರ ವಿಗ್ರಹವನ್ನು ಆಲಯದಲ್ಲಿ ಸ್ಥಾಪಿಸಲಾಗಿದೆ.

ಲಕ್ಷ್ಮೀನರಸಿಂಹ ದೇವಾಲಯವು ವಿಶಾಲವಾದದ್ದು. ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿರುವ ವಿಗ್ರಹವು ಆಕರ್ಷಕವಾಗಿದೆ. ಹೊಯ್ಸಳರ ಕಾಲದ ಪ್ರತಿಮಾಶಿಲ್ಪವನ್ನು ಹೋಲುವುದಾಗಿದೆ. ವೈಷ್ಣವ ಪಂಥದ ಸಾರ್ಥಕ ನೆಲೆಯಾಗಿ ಈ ಆಲಯವು ಶೋಭಿಸುತ್ತಿದೆ. ಅಂಬೆಗಾಲು ಕೃಷ್ಣನ ಮತ್ತೊಂದು ಸುಂದರವಾದ ಶಿಲ್ಪ ವನ್ನು ಇಲ್ಲಿ ಪ್ರತಿಷ್ಠೆ ಮಾಡಿರುತ್ತಾರೆ. ಇದನ್ನು ಸಹ ಅಂದವಾಗಿ ಕೆತ್ತಲಾಗಿದೆ.

ಇಡೀ ದೇವಾಲಯವು ವೈಷ್ಣವ ಪಂಥದ ಉತ್ತಮ ಪ್ರತಿನಿಧಿಯಾಗಿದ್ದು ಪ್ರವಾಸಿಗರ ಗಮನ ಸೆಳೆಯುವಂತಿದೆ. ಆದರೆ ಈ ಸ್ಥಳಕ್ಕೆ ಬರುವ ಭಕ್ತರ ಸಂಖ್ಯೆಯು ತುಂಬಾ ಕಡಮೆ ಪ್ರಮಾಣದಲ್ಲಿರುವುದು ಮತ್ತು ಸೂಕ್ತವಾದ ಪ್ರಚಾರವಿಲ್ಲದಿರುವುದು ಇದರ ಪ್ರಸಿದ್ಧಿಗೆ ತೊಡಕಾಗಿ ಉಳಿದಿದೆ. ಇದರ ಇತಿಹಾಸ ಮತ್ತು ಶ್ರೇಷ್ಠತೆಗಳನ್ನು ಕುರಿತಂತಹ ಪ್ರಚಾರ ಸಾಮಗ್ರಿಯಿಂದ ಈ ದೇವಾಲಯವು ಗಣನೀಯವಾದ ಸ್ಥಾನವನ್ನು ಪಡೆಯುವುದು ಸಾಧ್ಯವಾಗಬಹುದು.

# ದಡಿಗ

ಮಂಡ್ಯ ಜಿಲ್ಲೆ ನಾಗಮಂಗಲ ತಾಲೂಕಿನ ಬೆಳ್ಳೂರು ಗ್ರಾಮಕ್ಕೆ ಆರು ಕಿಲೋ ಮೀಟರ್ ದೂರದಲ್ಲಿರುವ ದಡಿಗನ ಕೆರೆಯ ಕೋಡಿಯ ಬಳಿಯಿರುವ ಕೋಡಿಹಳ್ಳಿಯು ಹಿಂದೊಮ್ಮೆ ಅಗ್ರಹಾರವಾಗಿದ್ದಿತು. ಈ ಕೆರೆಯ ಉತ್ತರ ದಿಕ್ಕಿನಲ್ಲಿ ದಡಿಗ ಗ್ರಾಮವಿದೆ. ಮೊದಲಿಗೆ ಕೋಡಿಹಳ್ಳಿ ಮತ್ತು ದಡಿಗ ಗ್ರಾಮಗಳು ಒಂದೇ ಆಗಿದ್ದಿರಬೇಕು. ಈ ಗ್ರಾಮವು ಗಂಗರ ಅರಸನಾದ ದಡಿಗನ ನೆನಪನ್ನು ತರುವಂತಿದೆ.

ದಡಿಗದಲ್ಲಿರುವ ಯೋಗಾ ನರಸಿಂಹಸ್ವಾಮಿ ದೇವಾಲಯ ಮತ್ತು ಕೋಡಿಹಳ್ಳಿ ಯಲ್ಲಿರುವ ದಡಿಗೇಶ್ವರ ದೇವಾಲಯಗಳು ಇಟ್ಟಿಗೆಯ ಗೋಡೆಗಳಿಂದ ಕಟ್ಟಲ್ಪಟ್ಟಿವೆ. ಹೊರನೋಟಕ್ಕೆ ಇವು ಈಚಿನ ರಚನೆಗಳ ರೀತಿಯಲ್ಲಿ ಕಂಡುಬಂದರೂ, ಒಳಗಿನ ಕಂಬಗಳು, ಅವುಗಳ ನಡುವಣ ದೊಡ್ಡ ಅಂಕಣದ ಚಾವಣಿಯಲ್ಲಿ ಉಬ್ಬು ರೀತಿಯಲ್ಲಿ ಬಿಡಿಸಿರುವ ಪೂರ್ಣ ಅರಳಿದ ಪದ್ಮ ಮೊದಲಾದ ಕೆತ್ತನೆಗಳು ಗಂಗರ ಕಾಲದ ರಚನೆ ಗಳ ರೀತಿಯಲ್ಲಿ ಕಂಡುಬರುತ್ತವೆ.

ಯೋಗಾ ನರಸಿಂಹಸ್ವಾಮಿ ದೇವಾಲಯವು ದಡಿಗ ಗ್ರಾಮದ ಪುರಾತನ ದೇವಾಲಯಗಳಲ್ಲಿ ಒಂದಾಗಿದೆ. ಇಲ್ಲಿರುವ ಕಂಬಗಳು ಗಂಗರ ಕಾಲದ ಸ್ಥಂಭ ರೀತಿಯ ಪ್ರಾರಂಭಿಕ ಘಟ್ಟದ ರಚನೆಯ ಸ್ವರೂಪದಲ್ಲಿವೆ. ಈ ದೇವಾಲಯದಲ್ಲಿರುವ ಯೋಗಾ ನರಸಿಂಹ ಮೂರ್ತಿಯ ವಿಗ್ರಹವು ಅತ್ಯಂತ ಸುಂದರ ರೂಪದಲ್ಲಿದ್ದು ಭಕ್ತಾದಿಗಳ ಕಣ್ಮನ ಸೆಳೆಯುವ ರೀತಿಯಲ್ಲಿದೆ.

# ಮೇಲುಕೋಟೆ

ಮೈಸೂರಿನಿಂದ ಉತ್ತರಕ್ಕೆ ಸುಮಾರು ಐವತ್ತು ಕಿ.ಮೀ. ದೂರದಲ್ಲಿ ಮತ್ತು ಮಂಡ್ಯದಿಂದ ವಾಯುವ್ಯಕ್ಕೆ ಮೂವತ್ತಾರು ಕಿ.ಮೀ. ದೂರದಲ್ಲಿ ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿ ಕಂಗೊಳಿಸುತ್ತಿರುವ ಮೇಲುಕೋಟೆಯು ಶ್ರೀವೈಷ್ಣವರ ಪ್ರಮುಖ ಆರಾಧನಾ ಸ್ಥಳಗಳಲ್ಲಿ ಒಂದಾಗಿದೆ. ಮೇಲುಕೋಟೆಯೆಂದರೆ ಕೋಟೆಗಳಲ್ಲೆಲ್ಲ ಶ್ರೇಷ್ಠವಾದದ್ದು ಎಂದೂ ಆಗುತ್ತದೆ. ಪವಿತ್ರ ಯಾತ್ರಾಸ್ಥಳವಾದ ಇಲ್ಲಿರುವ ಚೆಲುವ ನಾರಾಯಣಸ್ವಾಮಿ ದೇವಾಲಯವು ಬೆಟ್ಟದ ಮೇಲೆ ಕಟ್ಟಲ್ಪಟ್ಟಿದ್ದು ಕೋಟೆಯಿಂದ ಆವರಿಸಲ್ಪಟ್ಟಿದೆ. ಶ್ರೀವೈಷ್ಣವರ ದಿವ್ಯದೇಶಗಳಲ್ಲೊಂದಾದ ಇದನ್ನು ಶ್ರೀವೈಷ್ಣವ ಮತಾಚಾರ್ಯರಾದ ರಾಮಾನುಜರು 'ಯದು ಶೈಲ ದೀಪಂ' ಎಂದು ಕರೆದಿದ್ದಾರೆ. ಇದರ ಪ್ರಾಮುಖ್ಯತೆಗೆ ಇದೇ ನಿದರ್ಶನವಾಗಿದೆ. ಇಂತಹ ಮೇಲುಕೋಟೆಯಲ್ಲಿರುವ ಯೋಗಾನರಸಿಂಹ ದೇವಾಲಯವು ಎತ್ತರವಾದ ಶೈಲದ ಮೇಲಿದ್ದು ಸಪ್ತ ಕ್ಷೇತ್ರಗಳಲ್ಲಿ ಒಂದಾಗಿ ಪ್ರಸಿದ್ಧವಾಗಿದೆ.

ಮೇಲುಕೋಟೆಗೆ 'ತಿರುನಾರಾಯಣಪುರ' ಅಥವಾ 'ಯಾದವಾದ್ರಿ' ಎಂಬ ಹೆಸರಿದೆ. ಇದನ್ನು ನಾರಾಯಣಾದ್ರಿ, ವೇದಾದ್ರಿ, ಯದುಗಿರಿ ಎಂದು ಕರೆಯುತ್ತಾರೆ. ಕೃತಯುಗದಲ್ಲಿ ಸನತ್ಕುಮಾರನು ಪೂಜಿಸಿದ ನಾರಾಯಣ ಕ್ಷೇತ್ರವಾದ್ದರಿಂದ 'ನಾರಾಯಣಾದ್ರಿ' ಎಂದೂ ತ್ರೇತಾಯುಗದಲ್ಲಿ ದತ್ತಾತ್ರೇಯನು ವೇದಗಳ ಪ್ರವಚನವನ್ನು ಮಾಡಿದುದರಿಂದ 'ವೇದಾದ್ರಿ' ಎಂದೂ ದ್ವಾಪರಯುಗದಲ್ಲಿ ಶ್ರೀಕೃಷ್ಣ ಮತ್ತಿತರರು ಪೂಜೆ ಸಲ್ಲಿಸಿದ ಕಾರಣ 'ಯದು ಗಿರಿ'ಯೆಂದೂ ಇದು ಪ್ರಖ್ಯಾತವಾಗಿದೆ. ಕಲಿಯುಗದಲ್ಲಿ ರಾಮಾನುಜರು ಇದರ ಮಹತಿಗೆ ಕಾರಣರಾಗಿ 'ಯದುಶೈಲ'ವೆಂದು ಕರೆದಿದ್ದಾರೆ. ತಮಿಳುನಾಡಿನಲ್ಲಿ ಜನಿಸಿದ ಆಚಾರ್ಯರು ಮೇಲುಕೋಟೆಗೆ ಬಂದು ಹನ್ನೆರಡು ವರ್ಷಗಳ ಕಾಲ ತಂಗಿದ್ದರು. ಅಂದಿನಿಂದ ಮೇಲುಕೋಟೆ ಶ್ರೀವೈಷ್ಣವರ ಪಾವನ ಕ್ಷೇತ್ರವಾಗಿದೆ.

ಯೋಗಾನರಸಿಂಹಸ್ವಾಮಿ ದೇವಾಲಯವು ಇಲ್ಲಿನ ಬೆಟ್ಟದ ಮೇಲಿದೆ. ಸಾಮಾನ್ಯವಾಗಿ ನಾರಸಿಂಹ ಕ್ಷೇತ್ರಗಳನ್ನು ಬೆಟ್ಟದ ಮೇಲಾಗಲಿ, ಗುಹೆಯಲ್ಲಾಗಲಿ, ಕಾಡಿನಲ್ಲಾಗಲಿ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಭಗವಂತನ ಅರ್ಚಾಮೂರ್ತಿಗಳನ್ನು ಸ್ಥಾಪಿಸಲಾಗಿದೆ. ಇವುಗಳಲ್ಲಿ ಯೋಗಾನರಸಿಂಹನು ಶ್ರೇಷ್ಠನಾಗಿ ಶಾಂತಭಾವವನ್ನು ಉಂಟು ಮಾಡುತ್ತಿದ್ದಾನೆ. ಬೆಟ್ಟದ ದೇವರಾಗಿ ವಿಜೃಂಭಿಸುತ್ತಿರುವ ನೃಸಿಂಹನನ್ನು ಮೇಲುಕೋಟೆಯಲ್ಲಿ ಅರ್ಚಿಸುತ್ತಿದ್ದಾರೆ. ಬೆಟ್ಟದ ಕೆಳಗಿರುವ ಕಲ್ಯಾಣಿಯಲ್ಲಿ ತನ್ನ ಪ್ರತಿಬಿಂಬವನ್ನು ಚೆಲ್ಲುತ್ತ ಮನೋಹರವಾಗಿ ಕಂಗೊಳಿಸುವ ಈ ಆಲಯವು ವೈಭವದಿಂದ ಮೆರೆಯುತ್ತಿದೆ.

ಗುಡಿಯ ಗೋಪುರವು ಬೆಟ್ಟದ ಶಿಖರದಂತೆ ಕಾಣುತ್ತದೆ. ಬೆಟ್ಟದ ಮೇಲೇರಲು ಸೋಪಾನ ಮಾರ್ಗವನ್ನು ನಿರ್ಮಿಸಿದ್ದಾರೆ. ಸುಮಾರು ಮುನ್ನೂರು ಮೆಟ್ಟಿಲುಗಳಿವೆ. ಆಲಯದ ಪ್ರವೇಶ ದ್ವಾರವನ್ನು ತಲುಪಲು ಈ ಮೆಟ್ಟಿಲುಗಳನ್ನೇರಿ ಬರುವಾಗ ಉಂಟಾಗುವ

ಆಯಾಸವನ್ನು ಪರಿಹರಿಸಿಕೊಳ್ಳಲು ಅಲ್ಲಲ್ಲಿ ಮಂಟಪಗಳಿವೆ. ಮಧ್ಯದಲ್ಲೊಂದು ಪುಟ್ಟ ಕೊಳವಿದೆ. ಇದರಿಂದ ಬಾಯಾರಿಕೆ ಪರಿಹಾರವಾಗುತ್ತದೆ. ಪ್ರಕೃತಿಯ ವಿಹಂಗಮ ದೃಶ್ಯವನ್ನು ಕಂಡು ಮೇಲೇರಿದಂತೆ ಐದಂತಸ್ತಿನ ಮಹಾದ್ವಾರವು ಮೇಲುಕೋಟೆಗೆ ಬರುವ ಭಕುತಜನರನ್ನು ಸ್ವಾಗತಿಸುತ್ತದೆ.

ಪುರಾಣಕತೆಯ ಪ್ರಕಾರ ಇಲ್ಲಿನ ನರಸಿಂಹ ದೇವರನ್ನು ಭಕ್ತಪ್ರಹ್ಲಾದನೆ ಪ್ರತಿಷ್ಠೆ ಮಾಡಿರುತ್ತಾನೆ. ಆತನು ಈ ಪುಣ್ಯ ಸ್ಥಳದಲ್ಲಿ ವಿಷ್ಣುಚಿತ್ತ ಎಂಬಾತನನ್ನು ಕಾಣುವ ಸಲುವಾಗಿ ಬಂದಾಗ ಈ ನೃಸಿಂಹ ಗಿರಿಯಲ್ಲಿ ನರಸಿಂಹನ ಸಾನ್ನಿಧ್ಯವನ್ನು ಅನುಭವಿಸಿದನಂತೆ. 'ತನ್ನ ಈ ದರ್ಶನದ ಮಹತ್ವವನ್ನು ಎಲ್ಲರೂ ಅನುಭವಿಸಲಿ. ಎಲ್ಲರಿಗೂ ಭಗವಂತನ ಸನ್ನಿಧಿ ಪ್ರಾಪ್ತವಾಗಲಿ' ಎಂಬ ಕಾರಣದಿಂದ ಇಲ್ಲಿ ಈ ಮಂಗಳ ಮೂರ್ತಿಯನ್ನು ಪ್ರತಿಷ್ಠೆ ಮಾಡಿದನೆಂಬ ನಂಬಿಕೆ ಇದೆ. ಭಗವಂತನ ಸನ್ನಿಧಿಗೆ ತಲುಪಲು ನವಗ್ರಹರೂಪಿಯಾದ ಒಂಬತ್ತು ಮೆಟ್ಟಲನ್ನೇರಿ ಬರಬೇಕು.

ನವರಂಗಕ್ಕೆ ಬಂದು ಅಲ್ಲಿಂದ ಸುಕನಾಸಿಯೊಳಗೆ ಹೋಗಿ ಸ್ವಾಮಿಯ ದರ್ಶನದಿಂದ ಪುನೀತರಾಗಬಹುದು. ಧರ್ಮಸಹಿಷ್ಣುತೆಗೆ ನಿದರ್ಶನವಾಗಿ ಟಿಪ್ಪು ಸುಲ್ತಾನನು ನೀಡಿರುವ ನಗಾರಿಯನ್ನು ದೇವಾಲಯದ ಬಯಲು ಮಾಳಿಗೆಯಲ್ಲಿ ಕಾಣಬಹುದು. ಪರಕಾಲಮಠದವರು ನೀಡಿರುವ ದೊಡ್ಡಗಂಟೆಯು ತನ್ನ ನಾದದಿಂದ ಎಲ್ಲರನ್ನು ಎಚ್ಚರಿಸುವಂತಿದೆ. ಅಲ್ಲಿಂದ ಮೇಲೇರಿದರೆ ನರಸಿಂಹ ದೇವರ ದಿವ್ಯವಾದ ವಿಮಾನಗೋಪುರವನ್ನು ಸಂದರ್ಶಿಸಿ ಬರಬಹುದು. ದೇವರ ಕಿರೀಟವನ್ನು ಹೋಲುವಂತಿರುವ ದೇವರ ವಿಮಾನಗೋಪುರ ಸಂದರ್ಶನವು ಮುಕ್ತಿಪ್ರದವೂ ಹೌದು. ಗಣೇಶ, ಶ್ರೀನಿವಾಸ ದೇವಾಲಯ ಮತ್ತು ಪರಕಾಲ ಮಠಗಳಿಗೆ ಭೇಟಿ ನೀಡಿ ಮರಳಿ ಬರುವಾಗ ಮಾರ್ಗ ಮಧ್ಯದಲ್ಲಿರುವ ಮಂಟಪದಲ್ಲಿ ಮತ್ತೊಮ್ಮೆ ವಿಶ್ರಮಿಸಿ ಬೆಟ್ಟದ ಬುಡವನ್ನು ತಲುಪಬಹುದು.

ನರಸಿಂಹ ಸ್ವಾಮಿಯ ಉತ್ಸವಕ್ಕೆ ಚೆಲುವ ನಾರಾಯಣಸ್ವಾಮಿಯ ಮೂರ್ತಿಗಳನ್ನೇ ಉಪಯೋಗಿಸುತ್ತಾರೆ. ಸ್ವಾಮಿಯ ಉತ್ಸವಾದಿಗಳು ಪ್ರಸಿದ್ಧವಾಗಿವೆ. ಪ್ರಹ್ಲಾದ ಪರಿಪಾಲನೋತ್ಸವ ನೃಸಿಂಹ ಜಯಂತಿಗಳು ವಿಶೇಷವಾಗಿ ನೆರವೇರುತ್ತವೆ. ಮುಮ್ಮಡಿ ಕೃಷ್ಣರಾಜ ಒಡೆಯರು ಸಮರ್ಪಿಸಿರುವ ಅತಿ ಹೆಚ್ಚು ತೂಕವುಳ್ಳ ಬಂಗಾರದ ಕಿರೀಟವನ್ನು ನೃಸಿಂಹ ಜಯಂತಿಯಂದು ಸ್ವಾಮಿಗೆ ತೊಡಿಸುತ್ತಾರೆ. ತಮ್ಮ ರಾಣಿಯವರು ಅಸ್ವಸ್ಥರಾದಾಗ ಮೇಲುಕೋಟೆ ನೃಸಿಂಹನ ಆರಾಧನೆಯಿಂದ ಗುಣಮುಖರಾದ ಕಾರಣ ಒಡೆಯರು ಈ ಕಾಣಿಕೆಯನ್ನು ಸಮರ್ಪಿಸಿದ್ದಾರೆ.

ಒಟ್ಟಿನಲ್ಲಿ ಮೇಲುಕೋಟೆ ಇತಿಹಾಸ ಪ್ರಸಿದ್ಧವಾಗಿ ಮತ್ತು ಇದರೊಂದಿಗೆ ಮುಖ್ಯವಾದ ಧಾರ್ಮಿಕ ಕ್ಷೇತ್ರವಾಗಿ ಅಗತ್ಯ ಸಾರಿಗೆ ಸಂಚಾರದ ಅನುಕೂಲಗಳಿಂದ ಅತಿಶ್ರೇಷ್ಠ ಸ್ಥಳವೆನಿಸಿದೆ.

# ಮಾರೇಹಳ್ಳಿ

ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕಿನಲ್ಲಿರುವ ಮಾರೇಹಳ್ಳಿಯು ತಾಲೂಕು ಕೇಂದ್ರದಿಂದ ಮೂರು ಕಿ.ಮೀ. ದೂರದಲ್ಲಿದೆ. ಮಳವಳ್ಳಿಗೆ ಸಾಕಷ್ಟು ಬಸ್ ಸೌಕರ್ಯವಿದ್ದು ಅಲ್ಲಿಂದ ಮಾರೇಹಳ್ಳಿಗೆ ನಡೆದುಕೊಂಡೇ ತಲುಪುವುದು ಅಸಾಧ್ಯವೇನಲ್ಲ. ಸಾರ್ವಜನಿಕವಾಗಿ ಅಷ್ಟೇನೂ ಪ್ರಸಿದ್ಧವಾಗದಿದ್ದರೂ, ಈ ಹಳ್ಳಿಯನ್ನು ದೈವಿಕತೆ ಮತ್ತು ಐತಿಹಾಸಿಕತೆಗಳ ದೃಷ್ಟಿಯಿಂದ ಗಮನಿಸಲಡ್ಡಿಯಿಲ್ಲ. ಇಲ್ಲಿರುವ ಲಕ್ಷ್ಮಿನರಸಿಂಹಸ್ವಾಮಿ ದೇವಾಲಯವು ಈ ಸ್ಥಳಕ್ಕೆ ಧಾರ್ಮಿಕ ವಾತಾವರಣವನ್ನು ಸೃಷ್ಟಿಸಿಕೊಟ್ಟಿದೆ.

ಕರ್ನಾಟಕ ಇತಿಹಾಸದಲ್ಲಿ ಚೋಳರಾಜರದ್ದೊಂದು ಅಧ್ಯಾಯವನ್ನು ಗಮನಿಸ ಬಹುದು. ಇವರು ಕನ್ನಡ ನೆಲದ ಕೆಲವೊಂದು ರಾಜವಂಶದೊಂದಿಗೆ ಸಂಬಂಧ ಹೊಂದಿದ್ದರು. ಇವರ ಕಾಲದಲ್ಲಿ ಶೈವಾರಾಧನೆಗೆ ಮಹತ್ವ ದೊರೆಯಿತು. ಶೈವಧರ್ಮದ ಶ್ರೇಷ್ಠ ಪ್ರವರ್ತಕರಾದ ಗಂಗರೊಂದಿಗೆ ಇವರು ನಡೆಸಿದ ಘರ್ಷಣೆ -ಕುವಳಾಲನಾಡಿನ ಆಕ್ರಮಣ - ಇವೆಲ್ಲವೂ ನಮ್ಮ ಇತಿಹಾಸದ ಭಾಗಗಳೇ ಆಗಿವೆ. ಶೈವ ಧರ್ಮೀಯರಾದರೂ ವೈಷ್ಣವ ಧರ್ಮಕ್ಕೆ ಚೋಳರಾಜರು ನೀಡಿದ ಪ್ರೋತ್ಸಾಹಕ್ಕೆ ಕಳಸವಿಟ್ಟಂತೆ ನಮಗೆ ಇಂದಿನ ಮಾರೇಹಳ್ಳಿ ನರಸಿಂಹ ದೇವಾಲಯವು ಕಂಡು ಬರುತ್ತಿದೆ. ಚೋಳರ ಆರಂಭಿಕ ದೊರೆಗಳಲ್ಲಿ ಅತ್ಯಂತ ಶ್ರೇಷ್ಠನಾದ ರಾಜರಾಜನ ಕಾಲದಲ್ಲಿ ಈ ದೇವಾಲಯವನ್ನು ಕಟ್ಟಲಾಗಿದೆಯೆಂದು ಊಹಿಸಬಹುದು. ರಾಜರಾಜನಿಗೆ 'ರಾಜಾಶ್ರಯ' ಎಂಬ ಬಿರುದಿತ್ತು. ಹಾಗೆಯೇ ಇಲ್ಲಿನ ದೇವಾಲಯವನ್ನು ಸಹ 'ರಾಜಾಶ್ರಯ ವಿಣ್ಣಗರಂ' ಎಂದು ಕರೆಯಲಾಗಿದೆ. ವಿಣ್ಣಗರಂ ಎಂಬುದು ವಿಷ್ಣುಗೃಹವನ್ನು ನಿರ್ದೇಶಿಸುತ್ತದೆ.

ಮಾರೇಹಳ್ಳಿಯಲ್ಲಿ ಎಂಟನೆಯ ಶತಕದಿಂದ ಆರಂಭವಾಗಿ ಹದಿನೆಂಟನೆ ಶತಮಾನ ದವರೆಗೆ ಅನೇಕ ಶಾಸನಗಳು ಬೆಳಕಿಗೆ ಬಂದಿವೆ. ಈ ಸ್ಥಳವು ಒಂದು ಪಟ್ಟಣವಾಗಿದ್ದ ವಿಚಾರವು ಈ ಶಾಸನಗಳಿಂದ ವ್ಯಕ್ತವಾಗುತ್ತದೆ. ಇಡೀ ಪ್ರದೇಶವು ಚೋಳರು, ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಒಡೆಯರು, ಟಿಪ್ಪುಸುಲ್ತಾನ್ ಮುಂತಾದ ಪ್ರಸಿದ್ಧ ರಾಜರ ಆಳ್ವಿಕೆಗೆ ಒಳಪಟ್ಟಿತ್ತು.

ಸುಮಾರು ಹದಿನೇಳನೆ ಶತಮಾನಕ್ಕೆ ಸೇರಿದ ಒಂದು ಶಾಸನದಲ್ಲಿ ಈ ಸ್ಥಳವು ಹೆಚ್ಚಿನ ಸಂಖ್ಯೆಯಲ್ಲಿ ಪಂಡಿತರನ್ನು ಹೊಂದಿದ್ದ ಸ್ಥಳವೆಂದೂ, ವಿದ್ಯೆಗೆ ಹೆಸರಾದ ಪಟ್ಟಣವೆಂದೂ ವ್ಯಾಖ್ಯಾನಿಸಲಾಗಿದೆ. ವಿದ್ಯೆಗೆ ಹೆಸರಾದ ಪಟ್ಟಣವೆಂದ ಮೇಲೆ ಇದರ ಸಾಂಸ್ಕೃತಿಕ ಹಿನ್ನೆಲೆಯೂ ಸಾಕಷ್ಟು ಸಂಪತ್ಭರಿತವಾಗಿರಬೇಕು.

ಮಾರೇಹಳ್ಳಿಯ ಲಕ್ಷ್ಮಿನರಸಿಂಹಸ್ವಾಮಿಯ ವಿಗ್ರಹವು ನೋಡಲು ಸುಂದರವಾಗಿದೆ. ಸುಖಾಸನದಲ್ಲಿ ಕುಳಿತಿರುವ ಮೂರ್ತಿಯು ಎಂತಹವರನ್ನಾದರೂ ಆಕರ್ಷಿಸುವಂತಿದೆ.

ಚೋಳರಿಗಿದ್ದ ವೈಷ್ಣವ ಭಕ್ತಿಗೆ ಶ್ರೇಷ್ಠ ಉದಾಹರಣೆಯಾಗಿದೆ. ಮೇ ಇಲ್ಲವೆ ಜೂನ್ ತಿಂಗಳಲ್ಲಿ ಇಲ್ಲಿ ಬ್ರಹ್ಮೋತ್ಸವವು ನಡೆಯುತ್ತದೆ. ಸುತ್ತಮುತ್ತಲಿನ ಊರುಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಆಗಮಿಸಿ ಉತ್ಸಾಹವಾದಿಗಳಲ್ಲಿ ಪಾಲ್ಗೊಂಡು ತಮ್ಮ ಭಕ್ತಿಗೌರವಗಳನ್ನು ಸಲ್ಲಿಸುತ್ತಾರೆ.

# ಮದ್ದೂರು

ಬೆಂಗಳೂರಿಗೆ ಸುಮಾರು ಎಂಬತ್ತು ಕಿ.ಮೀ. ದೂರದಲ್ಲಿರುವ ಮದ್ದೂರು ತಾಲೂಕು ಕೇಂದ್ರವಾಗಿದೆ. ಮಂಡ್ಯ ಜಿಲ್ಲೆಗೆ ಸೇರಿದ ಈ ಪಟ್ಟಣಕ್ಕೆ ಮೈಸೂರು ಬೆಂಗಳೂರಿನಿಂದ ಸಾಕಷ್ಟು ಸೌಕರ್ಯವಿದೆ. ಶಿಂಷಾನದಿಯ ದಂಡೆಯ ಮೇಲಿರುವ ಈ ಸ್ಥಳಕ್ಕೆ ನೈಸರ್ಗಿಕ ಬೆಂಬಲವಿದೆ. ಪ್ರಾಕೃತಿಕವಾಗಿ, ಪೌರಾಣಿಕವಾಗಿ, ಚಾರಿತ್ರಿಕವಾಗಿ ಸಹ ಮಹತ್ವ ಪಡೆದಿರುವ ಮದ್ದೂರಿನ ನರಸಿಂಹ ದೇವಾಲಯವು ಅನೇಕ ಕಾರಣಗಳಿಂದ ವಿಶಿಷ್ಟವಾದದ್ದೆಂದು ಹೇಳಬಹುದು. ಶಿಲ್ಪಶಾಸ್ತ್ರದ ದೃಷ್ಟಿಯಿಂದ ಇಲ್ಲಿನ ಮೂರ್ತಿಗೆ ತನ್ನದೇ ಆದ ಸ್ಥಾನವಿದೆ.

ಮದ್ದೂರನ್ನು ಪ್ರಾಚೀನವಾದ ನಗರವೆಂದು ನಂಬಿಕೊಂಡು ಬರಲಾಗಿದೆ. ಇದರ ಮೂಲ ಹೆಸರು ಅರ್ಜುನ ಪುರಿ. ಕದಂಬ ಋಷಿಗಳು ತಪಸ್ಸು ಮಾಡಿದ ಸ್ಥಳವಿದು. ಇವರೇ ನರಸಿಂಹ ದೇವರನ್ನು ಪ್ರತಿಷ್ಠೆ ಮಾಡಿದವರು. ದ್ವಾಪರ ಯುಗದಲ್ಲಿ ಕೃಷ್ಣನ ಜೊತೆಯಲ್ಲಿ ಈ ಕ್ಷೇತ್ರಕ್ಕೆ ಬಂದು ಅರ್ಜುನನು ಇಲ್ಲಿನ ಸ್ವಾಮಿಯನ್ನು ಅರ್ಚಿಸಿದ ಕಾರಣ ಇದು ಅರ್ಜುನಪುರಿಯಾಯಿತು. ಹೊಯ್ಸಳರ ಕಾಲದಲ್ಲಿ ಇದೊಂದು ಅಗ್ರಹಾರವಾಗಿತ್ತು. ವಿಷ್ಣುವರ್ಧನ ಇದನ್ನು 'ನರಸಿಂಹ ಚತುರ್ವೇದಿ ಮಂಗಲಮ್' ಎಂದು ಕರೆದ. ಈ ಅಗ್ರಹಾರವು ವೈಷ್ಣವರಿಗೆ ದಾನವಾಗಿ ಬಂದುದು. ಆದರೆ ಇಂದು ಮದ್ದೂರು ಎಂಬ ಹೆಸರನ್ನೇ ಬಳಸಲಾಗುತ್ತಿದೆ.

ತಲಕಾಡಿನ ಗಂಗರಕಾಲದಲ್ಲಿ ಇದು ಪ್ರಖ್ಯಾತವಾಗಿತ್ತು. ಇದನ್ನು ಚಿಕ್ಕ ಗಂಗವಾಡಿ ಪ್ರಾಂತಕ್ಕೆ ಸೇರಿಸಲಾಗಿತ್ತು. ಮೈಸೂರಿನ ಅರಸರಾದ ರಾಜ ಒಡೆಯರ್‌ರವರು ಈ ಅಗ್ರಹಾರವನ್ನು ಇದರ ಕೋಟೆಯ ಸಮೇತ ವಶಪಡಿಸಿಕೊಂಡರು. ಹೈದರಾಲಿಯ ಕಾಲದಲ್ಲಿ ಇಲ್ಲಿನ ಕೋಟೆಯ ಪುನರ್ ನಿರ್ಮಾಣವಾಯಿತು. ಇದಕ್ಕೊಂದು ಹೊಸದಾದ ಸ್ವರೂಪ ಬಂದಿತು. ಹೆಚ್ಚು ಕಾಲ ಬಾಳುವಂತಾಯಿತು. ಆದರೆ ಹದಿನೆಂಟನೆ ಶತಮಾನದ ವೇಳೆಗೆ ನಮ್ಮ ದೇಶವನ್ನು ಮುತ್ತಿಕೊಂಡ ಬ್ರಿಟಿಷರು ಈ ಕೋಟೆ ಮತ್ತಿತರ ಪ್ರಮುಖ ಕಟ್ಟಡಗಳನ್ನು ನಾಶಪಡಿಸಿದರು. ಶ್ರೀರಂಗಪಟ್ಟಣದ ಮೇಲೆ ಧಾಳಿಗೆ ಹೊರಟ ಲಾರ್ಡ್ ಕಾರ್ನ್‌ವಾಲೀಸನು ಮದ್ದೂರಿನ ಕೋಟೆಯನ್ನು ನಾಶಗೊಳಿಸಿದ. ಇದರ ದುರಂತಕ್ಕೆ ಪ್ರಮುಖ ಕಾರಣಕರ್ತನಾದ.

ನರಸಿಂಹಸ್ವಾಮಿ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ದೇವಾಲಯವು ಮೂಲತಃ ಹೊಯ್ಸಳ ವಾಸ್ತುಶಿಲ್ಪದಿಂದ ಕೂಡಿದ್ದರೂ ವಿಜಯನಗರದ ಅರಸರ ಕಾಲದಲ್ಲಿ ಇದರ ವಿಸ್ತರಣೆಯಾಗಿದೆ. ವಿಶಾಲವಾದ ಆವರಣದಲ್ಲಿರುವ ಮುಖಮಂಟಪ, ನವರಂಗ ಗರ್ಭಗೃಹದಿಂದ ಕೂಡಿದ ದೇವಸ್ಥಾನವಿದೆ. ಗೋಪುರದ ಸಮೇತವಾಗಿರುವ ಆಲಯವು ದ್ರಾವಿಡ ಶೈಲಿಯ ಎಲ್ಲ ಲಕ್ಷಣಗಳನ್ನು ಹೊಂದಿದೆ. ಗರ್ಭಗೃಹದಲ್ಲಿನ ನರಸಿಂಹನ ವಿಗ್ರಹವನ್ನು ಕಲಾತ್ಮಕವಾಗಿ ಬಿಡಿಸಿರುತ್ತಾರೆ. ಸುಮಾರು ಆರು ಅಡಿ ಎತ್ತರವಿರುವ ಮೂರ್ತಿಯಲ್ಲಿ ಒಪ್ಪೋ್ವರಣಗಳಿವೆ. ಉಗ್ರಸ್ವರೂಪ ಧರಿಸಿರುವಂತೆ ಕಾಣುವ ಸ್ವಾಮಿಯು ಕ್ರಿಯಾತ್ಮಕ ಭಂಗಿಯಲ್ಲಿರುತ್ತಾನೆ. ಹಿರಣ್ಯಕಶಿಪುವಿನ ಸಂಹಾರ ಕಾರ್ಯದಲ್ಲಿ ತೊಡಗಿರುವ ಮೂರ್ತಿಯ ನಿರ್ಮಾಣದಲ್ಲಿ ಬಾಯಿ ಕೋರೆ ಹಲ್ಲುಗಳು, ಕೆಂಡವನ್ನು ಹೊರ ಸೂಸುವಂತಿರುವ ಜ್ವಾಲಾನೇತ್ರಗಳು ಮೂಲಾಬಂಧ ಇಡೀ ಮುಖದಲ್ಲಿ ಎದ್ದು ಕಾಣುವ ಕರಾಳ ಭಾವನೆಗಳನ್ನು ಸ್ಪಷ್ಟವಾಗಿ ಪಡಿಮೂಡಿಸಲಾಗಿದೆ. ಭೀಕರತೆಯ ಸ್ವಾಭಾವವು ಸಹಜವಾಗಿ ಹೊರ ಹೊಮ್ಮಿದೆ.

ಕರ್ನಾಟಕದಲ್ಲಿರುವ ನರಸಿಂಹ ದೇವಾಲಯಗಳಲ್ಲಿ ವಿಶೇಷ ಶಿಲ್ಪದಂತೆ ಕಂಗೊಳಿಸುತ್ತಿರುವ ಮದ್ದೂರಿನ ನರಸಿಂಹಸ್ವಾಮಿ ಹಾಗೂ ಇಲ್ಲಿನ ದೇವಸ್ಥಾನವು ಭಕ್ತಿ-ಭಯ-ಭಾವಗಳ ಸಂಗಮವೆಂದು ಹೇಳಬಹುದು ಈ ದೇವಸ್ಥಾನದಲ್ಲಿ ಒಂದು ಕಡೆಯಲ್ಲಿ ರಾಮ-ಲಕ್ಷ್ಮಣ ಸೀತೆಯರ ಮತ್ತು ಭಕ್ತಹನುಮಂತನ ಸುಂದರ ವಿಗ್ರಹಗಳಿವೆ. ವೈಶಾಖಮಾಸದ ಹುಣ್ಣಿಮೆಯ ದಿನದಂದು ಇಲ್ಲಿ ಬ್ರಹ್ಮರಥವನ್ನು ಎಳೆಯುತ್ತಾರೆ. ಈ ಸಂದರ್ಭದಲ್ಲಿ ಸಾವಿರಾರು ಮಂದಿ ಸುತ್ತಮುತ್ತಲಿನ ಊರುಗಳಿಂದಷ್ಟೇ ಅಲ್ಲದೆ ನಾಡಿನ ಮೂಲೆಮೂಲೆಗಳಿಂದ ಆಗಮಿಸಿ ಕೃತಾರ್ಥರಾಗುತ್ತಾರೆ.

# ಕಿಕ್ಕೇರಿ

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕಿನಲ್ಲಿದೆ ಕಿಕ್ಕೇರಿ. ಶ್ರವಣ ಬೆಳಗೊಳ ಕ್ಷೇತ್ರ ಇಲ್ಲಿಂದ ಕೇವಲ ಹತ್ತು ಮೈಲಿ ದೂರದಲ್ಲಿದೆ. ಕಿಕ್ಕೇರಿಯಲ್ಲಿ ಎರಡು ನೃಸಿಂಹ ದೇವಾಲಯಗಳಿವೆ.

ಬ್ರಹ್ಮೇಶ್ವರ ದೇವಾಲಯದ ಸುಪ್ರಸಿದ್ಧ ಶಿಲ್ಪಗಳು ಅತ್ಯುತ್ತಮವಾಗಿವೆ. ಈ ದೇವಸ್ಥಾನದಲ್ಲಿಯ ನವರಂಗದ ವಿಷ್ಣುವಿನ ವಿಗ್ರಹವು ನಾಲ್ಕು ಅಡಿ ಎತ್ತರವಾಗಿದೆ. ಶಿಲ್ಪಿಯು ತನ್ನ ಕೈಚಳಕವನ್ನು ಚೆನ್ನಾಗಿ ಬಳಸಿಕೊಂಡಿರುವನು. ನವರಂಗದಲ್ಲಿ ಎಂಟು ದಿಕ್ಕುಗಳಲ್ಲಿ ಭುವನೇಶ್ವರಿ, ಮದನಿಕಾ ವಿಗ್ರಹಗಳು ಅತ್ಯಂತ ಆಕರ್ಷಕವಾಗಿವೆ. ಇಲ್ಲಿನ ಅಷ್ಟ ದಿಕ್ಪಾಲಕರು ನವಗ್ರಹಗಳನ್ನು ನೋಡಿದವರಿಗೆ ಮತ್ತೊಮ್ಮೆ ನೋಡಬೇಕೆನಿಸುವಂತಿಯಲ್ಲಿವೆ.

# ನಾಗಮಂಗಲ

ಮಂಡ್ಯ ಜಿಲ್ಲೆಯಲ್ಲಿರುವ ನಾಗಮಂಗಲವು ಜಿಲ್ಲಾ ಕೇಂದ್ರದಿಂದ ನಲವತ್ತೊಂದು ಕಿಲೋ ಮೀಟರ್ ದೂರದಲ್ಲಿದೆ. ಬೆಂಗಳೂರಿನಿಂದಲೂ ಈ ಸ್ಥಳಕ್ಕೆ ನೇರವಾಗಿ ಬರಬಹುದು ಮೊದಲಿಗೆ ಫಣಿಪುರ, ನಾಗಪುರ, ನಾಗಮಂಡಳ ಎಂಬ ಹೆಸರಿನಿಂದ ಈ ಸ್ಥಳವನ್ನು ಕರೆಯುತ್ತಿದ್ದರು. ಇದನ್ನು ಅನಂತ ಕ್ಷೇತ್ರವೆಂದು ಕರೆಯುತ್ತಾರೆ. ಇಲ್ಲಿ ಯೋಗಾನರಸಿಂಹ ದೇವಾಲಯವಿದೆ. ತ್ರಿಕೂಟಾಚಲವಾದ ನರಸಿಂಹ ದೇವಾಲಯ ಇಲ್ಲಿನ ಪ್ರಸಿದ್ಧ ಆಕರ್ಷಣೆ ಯಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಅಧ್ಯಾಯವಾಗಿರುವ ಹೊಯ್ಸಳವಂಶದ ರಾಜರಿಗೆ ನಾಗಮಂಗಲದೊಂದಿಗೆ ಇದ್ದ ಸಂಬಂಧ ಮೌಲಿಕವಾದದ್ದು. ಅವರ ಕಾಲಕ್ಕೆ ಇದೊಂದು ಅಗ್ರಹಾರವಾಗಿತ್ತು. ಆರಂಭದಲ್ಲಿ ದಂಡಕಾರಣ್ಯ ಪ್ರದೇಶವಾಗಿದ್ದು ಇಲ್ಲಿಗೆ ಮೊದಲು ವಲಸೆ ಬಂದ ಲೋಹಿತ ವಂಶದ ನಾಯಕರ ಆಳ್ವಿಕೆಗೆ ಈ ಪ್ರದೇಶವು ಒಳ ಪಟ್ಟಿತ್ತು. ಇಲ್ಲಿನ ಕೋಟೆ ನಿರ್ಮಾಣವಾದದ್ದು ಇವರ ಕಾಲದಲ್ಲಿ. ಸುಮಾರು ಹದಿನಾರನೆ ಶತಕದವರೆಗೆ ಈ ವಂಶದ ನಾಯಕರು ಇಲ್ಲಿ ಆಳ್ವಿಕೆ ನಡೆಸಿದರು. ಇಲ್ಲಿನ ಎರಡು ಕೋಟೆಗಳಲ್ಲಿ ಒಂದನ್ನು ಈ ವಂಶದವರು ನಿರ್ಮಿಸಿದ್ದಾರೆ. ಮತ್ತೊಂದನ್ನು ಎಂದರೆ ಹೊರಗಿನ ಕೋಟೆಯನ್ನು ಹದಿನಾರನೇ ಶತಮಾನದಲ್ಲಿ ಚನ್ನಪಟ್ಟಣದ ಪಾಳೇಯಗಾರನಾಗಿದ್ದ ಜಗದೇವರಾಯನು ನಿರ್ಮಾಣ ಮಾಡಿಸಿರುತ್ತಾನೆ.

ನಾಗಮಂಗಲದ ಯೋಗಾನರಸಿಂಹಸ್ವಾಮಿ ದೇವಾಲಯವು ಹೊಯ್ಸಳ ವಾಸ್ತುಶಿಲ್ಪ ದಿಂದ ಕೂಡಿದೆ. ಈ ನರಸಿಂಹ ದೇವಸ್ಥಾನವು ಹುತ್ತಿನಲ್ಲಿ ಹೂತುಹೋಗಿದ್ದು ನರಸಿಂಹ ನಾಯಕನಿಗೆ ಸ್ವಪ್ನವಾಗಿ ಇದನ್ನು ಹುತ್ತದಿಂದ ಬೇರ್ಪಡಿಸಿ ಆಲಯವನ್ನು ನಿರ್ಮಿಸಲು ಆದೇಶವಾಯಿತು. ಅದರಂತೆ ಈತ ದೇವರಿರುವ ಹುತ್ತವನ್ನು ಅರಸುತ್ತ ಬರುತ್ತಿರಲು ಈ ಸ್ಥಳದಲ್ಲಿ ಸರ್ಪವೊಂದು ಸುತ್ತುತ್ತಿದ್ದುದನ್ನೂ ನರಸಿಂಹ ದೇವರು ಆವಿರ್ಭವಿಸಿ ಇದ್ದುದನ್ನೂ ಕಂಡು ಇಲ್ಲಿಯೇ ದೇವಾಲಯವನ್ನು ನಿರ್ಮಿಸಿದ.

ದೇವರಿರುವ ಭಾಗ ಮತ್ತು ದ್ವಾರಪಾಲಕರು ಇರುವವರೆಗಿನ ದೇವಾಲಯದ ಭಾಗವನ್ನು ಸಿದ್ಧಗೊಳಿಸಿ, ಸುಮಾರು ಒಂದು ಸಾವಿರದ ಎರಡು ವರ್ಷಗಳಾದವೆಂದು ಹೇಳುತ್ತಾರೆ. ಆನಂತರ ದೇವಾಲಯದ ಉಳಿದ ಭಾಗವನ್ನು ಯದುವಂಶಕ್ಕೆ ಸೇರಿದ ರಾಣಿಯಾದ ನರಸಿಂಹ ನಾಯಕಿಯು ನಿರ್ಮಿಸಿರುತ್ತಾಳೆ. ಒಳ ಪ್ರಕಾರವು ಜಗದೇವರಾಯನ ಕೊಡುಗೆಯಾಗಿದೆ. ಗರ್ಭಗೃಹದಲ್ಲಿ ಹುತ್ತಿನ ಆಕಾರದ ಒಂದು ಗಿಡವಿದೆ. ಕಂಬಗಳನ್ನು ಬಿಟ್ಟರೆ ಹೆಚ್ಚಿನ ಕಲಾವಂತಿಕೆಯೇನೂ ಇಲ್ಲ ನರಸಿಂಹ ವಿಗ್ರಹವು ದೊರೆತ ಜಾಗದಲ್ಲಿ ಬೆಳೆದಿದ್ದ ಸುಮಾರು ನಲವತ್ತು ಅಡಿ ಉದ್ದದ ಹೊಂಗೆ ಮರದ ಕೊಂಬೆಯಿದೆ.

ಭೃಗು ಮಹರ್ಷಿಗಳು ನರಸಿಂಹ ದೇವರನ್ನು ಪ್ರತಿಷ್ಠಾಪಿಸಿದರೆಂಬ ಪೌರಾಣಿಕ ನಂಬಿಕೆಯಿದೆ. ವೈಖಾನಸಾಗಮ ರೀತ್ಯಾ ಇಲ್ಲಿ ಪೂಜಾದಿಗಳು ನೆರವೇರುತ್ತಿವೆ. ವೈಶಾಖ ಶುದ್ಧ ಹುಣ್ಣಿಮೆ ದಿವಸ ಬ್ರಹ್ಮರಥೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಲಾಗುತ್ತದೆ. ನಾಗಮಂಗಲವು ಲೋಹ ಪಾತ್ರೆಗಳಿಗೂ ಪ್ರಸಿದ್ಧವಾದದ್ದು. ಇದೇ ಹೆಸರಿನ ಹಿತ್ತಾಳೆ ಮತ್ತು ಕಂಚಿನ ಪಾತ್ರೆಗಳನ್ನು ವಿಗ್ರಹಗಳನ್ನೂ ಇಲ್ಲಿಗೆ ಬಂದವರು ಕೊಳ್ಳದೆ ಹೋಗುವುದಿಲ್ಲ. ಪ್ರಾಚೀನ ಕಲೆಗಾರಿಕೆಯನ್ನು ಮತ್ತು ಲೋಹಗಾರಿಕೆಯನ್ನು ಕಾಣಲು ಬಯಸುವವರಿಗೆ ಈ ಸ್ಥಳವು ಭರವಸೆ ಮೂಡಿಸುತ್ತದೆ.

ನಾಗಮಂಗಲದಲ್ಲಿರುವ ಮತ್ತೊಂದು ದೇವಾಲಯವು ಸೌಮ್ಯಕೇಶವ ದೇವಾಲಯ ವೆಂದು ಪ್ರಸಿದ್ಧವಾಗಿದೆ. ಇದೊಂದು ತ್ರಿಕೂಟಾಚಲ. ಇದು ಹೊಯ್ಸಳರ ದೊರೆಯಾದ ವಿಷ್ಣುವರ್ಧನನ ಕಾಲಕ್ಕೆ ಸೇರಿದ್ದೆಂದು ಊಹಿಸುತ್ತಾರೆ. ಮಧ್ಯದ ಗರ್ಭಗೃಹದಲ್ಲಿ ಸೌಮ್ಯ ಕೇಶವಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮತ್ತೆರಡು ಗರ್ಭಗುಡಿಗಳಲ್ಲಿ ನರಸಿಂಹ ಮತ್ತು ವೇಣುಗೋಪಾಲರ ಮೂರ್ತಿಗಳಿವೆ. ದೇವಾಲಯದ ಮುಂಭಾಗದಲ್ಲಿರುವ ಸುಮಾರು ಐವತ್ತೈದು ಅಡಿ ಎತ್ತರದ ಎರಡೂವರೆ ಅಡಿ ಅಗಲವಿರುವ ಗರುಡಗಂಬವು ಉತ್ತಮವಾದ ಕಲಾಕೃತಿಯಾಗಿದೆ. ಗೋಪುರ ಮತ್ತು ಕಂಬವನ್ನು ಎತ್ತಿಸಿದವನು ಜಗದೇವರಾಯನೆಂದು ಹೇಳುತ್ತಾರೆ. ಈತನ ಅರಮನೆಯು ದೇವಾಲಯದ ಸಮೀಪದಲ್ಲಿದ್ದುದಕ್ಕೆ ನಿದರ್ಶನವಾಗಿ ಕೆಲವು ಗುರುತುಗಳಿವೆ.

ಸಮೀಪದಲ್ಲಿ ಹಲವು ಕಂಬಗಳಿರುವ ದೊಡ್ಡ ಮಂಟಪವಿದೆ. ಇದು ಹಿಂದಿನ ಸಭಾಮಂಟಪವಿರಬಹುದು. ಊರಿಗೆ ಸಮೀಪವಾಗಿ ಅರವತ್ತು ಅಡಿ ವ್ಯಾಸ ಮತ್ತು ಮೂರು ಅಡಿ ಮಾತ್ರ ಆಳವಿರುವ ಕೊಳವಿದೆ. ಜಗದೇವರಾಯನು ಜಲಕ್ರೀಡೆಗಾಗಿ ಈ ಮಂಟಪವನ್ನು ಕಟ್ಟಿಸಿದನೆಂದು ಹೇಳುತ್ತಾರೆ. ನಾಗಮಂಗಲವು ದೈವಿಕತೆ ಮತ್ತು ಕಲೆ ಗಾರಿಕೆಯನ್ನು ಪ್ರದರ್ಶಿಸುತ್ತಿದೆ. ಅರಸರ ಕಲಾಪ್ರೇಮಕ್ಕೆ ಅದರ ವೈಭವಕ್ಕೆ ಹೆಸರುವಾಸಿಯಾದ ಪ್ರವಾಸಿ ಸ್ಥಳವಾಗಿದೆ. ಪ್ರಾಚೀನವಾದ ಕಲೆಯೊಂದಿಗೆ ಇಲ್ಲಿರುವ ದೈವೀನೆಲೆಯೂ ಸೇರಿ ನಾಗಮಂಗಲವು ಸಂದರ್ಶನಕ್ಕೆ ಯೋಗ್ಯವಾಗಿದೆ.

# ತೊಣ್ಣೂರು

ಮಂಡ್ಯ ಜಿಲ್ಲೆಯಲ್ಲಿರುವ ಪಾಂಡವಪುರವು ಕಾವೇರಿ ನದಿಯ ಬಲಬಂಡೆಯ ಮೇಲಿರುವ ಪುರಸಭಾ ಪಟ್ಟಣ. ಈ ತಾಲೂಕಿನಲ್ಲಿರುವ ತೊಣ್ಣೂರು ಒಂದು ಪುಟ್ಟ ಗ್ರಾಮವಾಗಿದೆ. ಇದು ಪಾಂಡವಪುರಕ್ಕೆ ಎಂಟು ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ತೊಣ್ಣೂರನ್ನು ಯಾದವಪುರ, ಯಾದವ ನಾರಾಯಣಪುರ, ಯಾದವ ನಾರಾಯಣ ಚತುರ್ವೇದಿ ಮಂಗಲಮ್ ಎಂದು ಉಲ್ಲೇಖಿಸಲಾಗಿದೆ.

ೊಂಡನೂರು ಎಂಬ ಇತಿಹಾಸ ಪ್ರಸಿದ್ಧವಾದ ಹೆಸರೂ ಸಹ ಇದ್ದಂತೆ ತೊಂಡ ಎಂದರೆ ಭಕ್ತ ಎಂದರ್ಥ. ಅವನ ವಾಸಸ್ಥಳ ತೊಂಡನೂರು, ರಾಜಧಾನಿಯಾಗಿದ್ದ ತೊಣ್ಣೂರನ್ನು ಬಿಟ್ಟಿದೇವನು ರಾಜ್ಯಪಾಲನಾಗಿ ರ್ಯತ್ರಯತಲ್ಲಿ ಒಬ್ಬರಾದ ರಾಮಾನುಜರು ಇವನನ್ನು ಭೇಟಿಯಾಗಿದ್ದರು. ್ರಮದಾಚಾರ್ಯರ ಪ್ರಭಾವದಿಂದಲೇ ವೈಷ್ಣವ ಮತವನ್ನು ಸ್ವೀಕರಿಸಿದ್ದು ಮೀಪವಾಗಿರುವ ಈ ಗ್ರಾಮದಲ್ಲಿ ರಾಮಾನುಜರು ತಮ್ಮ ಧಾರ್ಮಿಕ ು ಮಾಡಿರುವುದು ಇದನ್ನು ನೋಡಿದವರಿಗೆ ಅರಿವಾಗಬಹುದು.

ು ಶ್ರೀಮಂತವಾದ ಜೈನ ಕ್ಷೇತ್ರವಾಗಿತ್ತೆಂಬುದಕ್ಕೆ ಇಲ್ಲಿರುವ ಬಸದಿಗಳು ಇದು ಶೈವ ಕ್ಷೇತ್ರವೂ ಆಗಿ ಪ್ರಸಿದ್ಧವಾದದ್ದು ಹೊಯ್ಸಳರ ಕಾಲದ ಿ ದೇವಾಲಯಗಳಿಗೆ ಬಸದಿಗಳಿಗೆ ನೀಡಲಾದ ದತ್ತಿಗಳನ್ನು ಪ್ರಸ್ತಾಪಿಸು

ಎರಡು ಬೆಟ್ಟಗಳ ನಡುವೆ ಇರುವ ಸ್ಥಳದಲ್ಲಿ ದಂಡೆಯೊಂದನ್ನು ದ ಕೆರೆಯು ಮನೋಹರವಾದ ದೃಶ್ಯವನ್ನುಂಟು ಮಾಡುತ್ತಿದೆ. ಇದಕ್ಕೆ ಅಥವಾ ಮೋತಿ ತಲಾಬ್ ಎಂಬ ಹೆಸರಿದೆ. ದಕ್ಷಿಣದ ಸುಬೇದಾರನ ಗ್ ಎಂಬುವನು ಕ್ರಿ.ಶ. ೧೭೪೬ರಲ್ಲಿ ಈ ಕೊಳಕ್ಕೆ ಭೇಟಿಕೊಟ್ಟು ತಲಾಬ್ ಎಂದರೆ ಮುತ್ತುಗಳ ಕೊಳ ಎಂದು ಕರೆದಿರುತ್ತಾನೆ. ಅಷ್ಟು ಾದ ಮತ್ತು ತಣ್ಣಗಿನ ನೀರು ಇಲ್ಲಿನದು ಆಗಿರುತ್ತದೆ. ಮೊಗೆದಷ್ಟೂ ಲ್ಲಿರುತ್ತದೆ.

ಿನಲ್ಲಿ ಸುಪ್ರಸಿದ್ಧವಾದ ನಾರಾಯಣ ದೇವಾಲಯವಿದೆ. ಇದಲ್ಲದೆ ್ಯವಾದ ಆಲಯವು ಇದೆ. ಗುಡ್ಡದ ಮೇಲಿರುವ ಯೋಗಾನರಸಿಂಹ ನ್ನೆರಡನೆಯ ಶತಮಾನದಲ್ಲಿ ನಿರ್ಮಿಸಲಾಗಿದೆ. ಸಂಪ್ರದಾಯದ ಪ್ರಕಾರ ರಿಗೆ ಸಂಬಂಧಿಸಿದ ದೇವಾಲಯವಾಗಿದೆ. ಶ್ರೀಮದಾಚಾರ್ಯರು ಒಂದೇ ಸಾವಿರ ಮಂದಿ ಜೈನರೊಡನೆ ವಾದವನ್ನು ಮಾಡಿ ಗೆದ್ದರೆಂಬ ಲ್ಲಿ ರಾಮಾನುಜ ಆಚಾರ್ಯರ ಅತ್ಯಂತ ಸುಂದರವಾದ ವಿಗ್ರಹವು

ರ್ಗವಾಗಿ ಪಾಂಡವಪುರಕ್ಕೆ ಬಂದು ಅಲ್ಲಿಂದ ರಸ್ತೆ ಸಾರಿಗೆ ವಾಹನದಲ್ಲಿ ು ಸೇರಬಹುದು. ಆದರೂ ಈ ಕ್ಷೇತ್ರದ ಸಂದರ್ಶನಕ್ಕೆ ವಾಹನ ್ಪಮಟ್ಟಿಗೆ ಕಡಮೆಯೆಂದೇ ಹೇಳಲು ಅಡ್ಡಿಯಿಲ್ಲ. ಹೀಗೆ ತೊಣ್ಣೂರಿನ ಾನುಜರ ಜೀವನದೊಂದಿಗೆ ಸಹಯೋಗವನ್ನು ಹೊಂದಿಕೊಂಡಂತೆಯೇ

## ಶಿವಮೊಗ್ಗ ಜಿಲ್ಲೆ

# ಭದ್ರಾವತಿ

ಶಿವಮೊಗ್ಗ-ಭದ್ರಾವತಿಗಳನ್ನು ಅವಳಿ ನಗರಗಳೆಂದು ಕರೆಯುತ್ತಾರೆ. ಭದ್ರಾವತಿಯು ಕೈಗಾರಿಕಾ ಪ್ರದೇಶವಾಗಿಯೂ ಪ್ರಸಿದ್ಧವಾಗಿದೆ. ಕರ್ನಾಟಕದಲ್ಲಿ ಪ್ರಧಾನವಾಗಿ ಗುರುತಿಸಲ್ಪಡುವ ಈ ಪಟ್ಟಣವು ಕಲಾತ್ಮಕವಾದ ಕೊಡುಗೆಯನ್ನು ಧಾರ್ಮಿಕನೆಲೆಯೊಂದರ ಮೂಲಕ ನೀಡಿ ಎಲ್ಲರ ಗಮನವನ್ನು ಸೆಳೆದಿದೆ. 'ಬೆಂಕಿಪುರ' 'ವೆಂಕಿಪುರ'ಗಳೆಂಬ ಸ್ಥಳನಾಮವನ್ನು ಗಳಿಸಿ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ. ಕರ್ನಾಟಕ ರಾಜ್ಯದ ವರಪ್ರದವಾದ ಭದ್ರಾನದಿಯ ದಂಡೆಯ ಮೇಲಿರುವ ಭದ್ರಾವತಿಯನ್ನು ಅನೇಕ ದೃಷ್ಟಿಗಳಿಂದ ಪ್ರಸಿದ್ಧವಾದುದ್ದೆಂದು ಗಮನಿಸಬಹುದು. ಇಂಥಲ್ಲಿನ ಲಕ್ಷ್ಮೀನರಸಿಂಹ ದೇವಾಲಯವು ಹೊಯ್ಸಳ ಕಲಾಪ್ರದರ್ಶನದ ಹೆಗ್ಗುರುತಾಗಿ ವಿಜೃಂಭಿಸುತ್ತಿದೆ. ಅಪಾರ ಸಂಖ್ಯೆಯಲ್ಲಿ ಆಸ್ತಿಕರಾದ ಭಕ್ತವೃಂದವನ್ನು ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾಗಿದೆ. ಇಲ್ಲಿರುವ ದೇವಾಲಯವು ಭದ್ರಾವತಿಯ ಧಾರ್ಮಿಕ ಸಂಪತ್ತನ್ನು ವೃದ್ಧಿಗೊಳಿಸುವಲ್ಲಿ ಪ್ರಮುಖವಾದದ್ದು.

ವೆಂಕಿಋಷಿಯು ತನ್ನ ಗುರುಮುಖೇನ ನರಸಿಂಹಾವತಾರದ ಕಥೆಯನ್ನು ಕೇಳಿದಾಗಿನಿಂದ ಲಕ್ಷ್ಮೀನೃಸಿಂಹನ ಉಪಾಸನೆಗೆ ತೊಡಗಿದ. ಒಂದು ದಿನ ಶ್ರೀಹರಿಯು ಈತನ ಕನಸಿನಲ್ಲಿ ಕಾಣಿಸಿಕೊಂಡು ಫಾಲ್ಗುಣ ಬಹುಳ ಪಂಚಮಿಯ ದಿವಸ ಆತನ ಇಷ್ಟಾರ್ಥವು ಸಿದ್ಧಿಯಾಗುವುದೆಂದು ಹೇಳಿ ಅಂತರ್ಧಾನನಾದ. ಆ ಮಹರ್ಷಿಯು ಮತ್ತಷ್ಟು ಹೆಚ್ಚಿನ ಭಕ್ತಿ ಉಪಾಸನೆಗಳನ್ನು ಕೈಗೊಂಡು ಭಗವಂತನು ತಿಳಿಸಿದ ದಿನಕ್ಕಾಗಿ ಕಾತುರನಾಗಿದ್ದ. ಅಂತಹ ದಿನವು ಬಂದೇ ಬಂದಿತು. ತನ್ನ ಆಶ್ರಮದಲ್ಲಿ ಭಗವಂತನ ಮೂರ್ತಿಯು ಗೋಚರವಾಯಿತು. ಸಂತಸಭರಿತನಾದ ಮುನಿಯು ಮೂರ್ತಿಯನ್ನು ಪೂಜಿಸಿದ. ಹೀಗೆ ಪುರಾಣ ಕಥೆಯೊಂದರ ಪ್ರಕಾರವಾಗಿ ಭದ್ರಾನದಿಯ ಪಶ್ಚಿಮವಾಹಿನಿಯ ತಟದಲ್ಲಿ ಪ್ರಸಿದ್ಧ ಮುನಿವರೇಣ್ಯರಾದ ವೆಂಕಿಋಷಿಗಳ ಸಾಧನೆಯಿಂದ ಅನುಗ್ರಹಿತನಾಗಿರುವ ಲಕ್ಷ್ಮೀನರಸಿಂಹ ಸ್ವಾಮಿಗೆ ಅನಂತರದ ಕಾಲದಲ್ಲಿ ಆಲಯ ನಿರ್ಮಾಣವಾಗಿದೆ.

## ಸುಂದರ ಆಲಯ

ಭದ್ರಾವತಿಯಲ್ಲಿರುವ ದೇವಾಲಯವು ಎಲ್ಲ ಹೊಯ್ಸಳ ದೇವಾಲಯಗಳಂತೆ ನಕ್ಷತ್ರಾಕಾರದ ಜಗತಿಯ ಮೇಲೆ ನಿರ್ಮಾಣವಾಗಿದೆ. ಇದು ತ್ರಿಕೂಟಾಚಲವಾಗಿ ಶೋಭಿಸುತ್ತಿದೆ. ಹೊಯ್ಸಳರ ಕಾಲದ ಅನೇಕ ದೇವಾಲಯಗಳು ತ್ರಿಕೂಟಾಚಲಗಳೇ ಆಗಿರುತ್ತವೆ. ಆಲಯದಲ್ಲಿರುವ ಶಾಸನದ ಪ್ರಕಾರವಾಗಿ ಇಲ್ಲಿನ ಕಟ್ಟಡದ ಕಾರ್ಯವು ಕ್ರಿ.ಶ. ೧೨೨೪ರಲ್ಲಿ ಪೂರ್ಣವಾಯಿತು. ಹೊಯ್ಸಳ ಸಾಮ್ರಾಜ್ಯವನ್ನು ಪರಿಪಾಲಿಸಿದ ವಿಷ್ಣುವರ್ಧನನ ಮೊಮ್ಮಗ

ಎರಡನೆ ವೀರಬಲ್ಲಾಳನ ಮಗ ವೀರನರಸಿಂಹನು ಈ ಆಲಯವನ್ನು ಕಟ್ಟಿಸಿರುತ್ತಾನೆ. ದೇವರ ಕೈಂಕರ್ಯಗಳಿಗಾಗಿ ಈತನು ದೇವರ ನರಸೀಪುರ, ಕುಮಾರನಹಳ್ಳಿ, ತಂಕಾನೂರು ಎಂಬ ಗ್ರಾಮಗಳನ್ನು ದಾನವಾಗಿ ನೀಡಿರುತ್ತಾನೆ. ಈ ರೀತಿ ಹೊಯ್ಸಳ ರಾಜರಿಂದ ನಿರ್ಮಿತವಾದ ಈ ಸುಂದರ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿ 'ತ್ರಿಕೂಟಾಚಲ'ವಾಗಿ ಪ್ರಸಿದ್ಧವಾಗಿದೆ. ಮೂರು ಸುಕನಾಸಿಗಳನ್ನು ಹೊಂದಿದ ಪ್ರಖ್ಯಾತ ಪೂಜಾಮಂದಿರವಾಗಿದೆ.

ಹೊಯ್ಸಳರ ಕಾಲದ ಅಗ್ರಹಾರವಾಗಿಯೂ ಪ್ರಸಿದ್ಧವಾಗಿರುವ ಭದ್ರಾವತಿಯಲ್ಲಿ ಪ್ರಧಾನವಾಗಿ ಕಂಗೊಳಿಸುತ್ತಿರುವುದು ಲಕ್ಷ್ಮೀನರಸಿಂಹ ಆಲಯ. ಭದ್ರಾನದಿಯು ಇಲ್ಲಿ ಒಂದು ತಿರುವನ್ನು ಪಡೆದು ಮುಂದೆ ಹರಿಯುತ್ತದೆ.ಇದರ ದಂಡೆಯಲ್ಲಿರುವ ಕಾರಣದಿಂದ ಪಟ್ಟಣಕ್ಕೆ ಭದ್ರಾವತಿಯೆಂಬ ಹೆಸರು ಬಂದಿದೆ. ಸಂಸ್ಕೃತ ಭಾಷೆಯಲ್ಲಿ ತಿರುವನ್ನು ವಂಕಿ ಯೆಂದೂ ಕರೆಯುತ್ತಾರೆ. ಬೆಂಕಿಪುರ ವೆಂಬ ಅಭಿದಾನಕ್ಕೆ ಇದೂ ಕಾರಣವಾಗಿರಬಹುದು. ವಿಜಯನಗರದ ಅರಸರು ಊರಿನ ಅಭಿವೃದ್ಧಿಗೆ ಮೂಲಕಾರಣರಾಗಿದ್ದಾರೆ.

ಹದಿನೈದನೆ ಶತಮಾನದಲ್ಲಿ ದುಮ್ಮಿ ಮತ್ತು ಬಾಣೂರುಗಳ ನಾಯಕರಾದ ಎಲೆಲಕ್ಕನಾಯಕನೆಂಬ ವ್ಯಕ್ತಿಯು ವಂಕಿಪುರದ ಸುತ್ತ ದಟ್ಟವಾಗಿ ಹರಡಿದ್ದ ಅರಣ್ಯವನ್ನು ಕಡಿಸಿ ನರಸಿಂಹಪುರ ಮತ್ತು ಲಕ್ಷ್ಮೀಪುರಗಳೆಂಬ ಎರಡು ಗ್ರಾಮಗಳನ್ನು ನಿರ್ಮಿಸಿದ್ದನೆಂಬ ಸಂಗತಿಯು ದಾಖಲೆಗಳ ಮೂಲಕ ತಿಳಿದುಬರುತ್ತದೆ. ಲಕ್ಷ್ಮೀನರಸಿಂಹ ದೇವರ ಬಗೆಗೆ ನಾಯಕರು ಹೊಂದಿದ್ದ ಧರ್ಮ-ಶ್ರದ್ಧೆಗಳ ನಿದರ್ಶನವಾಗಿ ಈ ಗ್ರಾಮಗಳ ರಚನೆಯಾಗಿದೆ ಎಂದು ಅರಿತುಕೊಳ್ಳಬಹುದು.

## ಸುಂದರ ಮೂರ್ತಿ

ತ್ರಿಕೂಟಾಚಲವಾಗಿರುವ ಲಕ್ಷ್ಮೀನರಸಿಂಹ ದೇವಾಲಯದ ಪ್ರಧಾನ ಗರ್ಭಗುಡಿಯಲ್ಲಿ ಸ್ವಾಮಿಯ ಮನೋಹರವಾದ ವಿಗ್ರಹವು ಶೋಭಿಸುತ್ತಿದೆ. ಇದೊಂದು ಬಹುಸುಂದರವಾದ ಮತ್ತು ಅಳತೆ ಪ್ರಮಾಣಗಳಲ್ಲಿ ಹಿರಿದಾದ ಉನ್ನತ ಮೂರ್ತಿಯಾಗಿದೆ. ದೇವರ ಕೀರ್ತಿಗೆ ಇದು ಸೋದಾಹರಣವಾಗಿದೆ. ನರಸಿಂಹನ ಎಡತೊಡೆಯ ಮೇಲೆ ಲಕ್ಷ್ಮೀದೇವಿಯು ವಿರಾಜಿಸುತ್ತಿದ್ದಾಳೆ. ಗರುಡಪೀಠದ ಮೇಲೆ ವಿರಾಜಿಸಿರುವ ಲಕ್ಷ್ಮೀನರಸಿಂಹ ಮೂರ್ತಿಯ ಪ್ರತಿಮಾ ಲಕ್ಷಣದಲ್ಲಿ ನಿರ್ದಿಷ್ಟತೆ ಮತ್ತು ನಿಖರತೆಯನ್ನು ಅರಿಯಬಹುದಾಗಿದೆ. ಚತುರ್ಭುಜ ಮೂರ್ತಿಯ ಹಸ್ತಗಳಲ್ಲಿ ಶಂಖ-ಚಕ್ರ, ಗದಾ-ಪದ್ಮಗಳು ಅಲಂಕಾರ ಪ್ರಾಯವಾಗಿ ಶೋಭಿಸುತ್ತಿವೆ. ಪ್ರಧಾನ ದೇವರ ಗರ್ಭಗುಡಿಯ ಇಕ್ಕೆಲಗಳಲ್ಲಿ ಬೆಣ್ಣೆಗಣಪತಿ ಹಾಗೂ ಶೃಂಗೇರಿ ಶಾರದೆಯರನ್ನು ಪ್ರತಿಷ್ಠೆ ಮಾಡಲಾಗಿದೆ.

ತ್ರಿಕೂಟಾಚಲದ ಉಳಿದೆರಡು ಗರ್ಭಗೃಹಗಳಲ್ಲಿ ವೇಣುಗೋಪಾಲ ಮತ್ತು ಚನ್ನಕೇಶವ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿರುತ್ತಾರೆ. ವೇಣುಗೋಪಾಲನ ವಿಗ್ರಹವು

ಮನೋಜ್ಞವಾಗಿದ್ದು ಹೊಯ್ಸಳ ಕಲಾಶಿಲ್ಪದಿಂದ ಆಕರ್ಷಕವಾಗಿದೆ. ದೇವರ ವಿಗ್ರಹದಲ್ಲಿ ಬಿಡಿಸಲಾಗಿರುವ ಗೋಪಿಕಾ ಸ್ತ್ರೀಯರು ಮತ್ತು ಗೋವುಗಳು ಕೃಷ್ಣನ ವೇಣುಗಾನದಲ್ಲಿ ತಲ್ಲೀನವಾಗಿರುವಂತೆ ಭಾಸವಾಗುತ್ತದೆ. ಮತ್ತೊಂದು ಗರ್ಭಗೃಹದಲ್ಲಿರುವ ಚನ್ನಕೇಶವ ಮೂರ್ತಿಯು ಚತುರ್ಭುಜ ಮೂರ್ತಿಯಾಗಿ ಶಂಖ-ಚಕ್ರ, ಗದಾ-ಪದ್ಮಗಳಿಂದ ಕಂಗೊಳಿಸು ತ್ತಿದೆ. ಆಗಮಶಾಸ್ತ್ರರೀತ್ಯ ಕೆತ್ತಲಾದ ವಿಗ್ರಹದ ಪ್ರಭಾವಳಿಯು ವಿಶಿಷ್ಟವಾದದ್ದು. ಇದರಲ್ಲಿ ಬಿಡಿಸಲಾಗಿರುವ ದಶಾವತಾರದ ವಿವರಗಳು ಹೊಯ್ಸಳಶೈಲಿಯ ಪ್ರತಿಪಾದನೆಗೆ ಉತ್ತಮ ನಿದರ್ಶನ.

ಹೊಯ್ಸಳರ ಕಾಲದ ಸುಂದರ ವಾಸ್ತುಕೃತಿಯಾಗಿರುವ ದೇವಾಲಯದ ಬಲಭಾಗ ದಲ್ಲಿ ರಂಗಮಂಟಪವಿದೆ. ಸುಕನಾಸಿ ಮತ್ತು ನವರಂಗದ ಕಂಬಗಳಲ್ಲಿ ಮೇಲ್ಚಾವಣಿಯಲ್ಲಿ ಕೆತ್ತಲಾಗಿರುವ ಬೆಳಕಿಂಡಿಗಳು ಗಮನಾರ್ಹವಾದದ್ದು. ದೇವಾಲಯದ ಹೊರಭಾಗದಲ್ಲಿ ದೇವಾಲಯ ಗೋಪುರಗಳ ಮಾದರಿಯನ್ನಿಡಲಾಗಿದೆ. ಇದು ಅಂದವಾಗಿದೆ. ಮಧ್ಯಭಾಗದಲ್ಲಿ ಹೊಯ್ಸಳ ಕಲಾಭಿಜ್ಞತೆಯ ಸಾಕಾರ ಮೂರ್ತಿಗಳಾದ ಶಿಲಾಬಾಲಿಕೆಯರ ಅಂದವಾದ ಕೆತ್ತನೆ ಮನದುಂಬುವಂತಿದೆ. ಎಡೆಗಣಪತಿ, ಉಗ್ರನರಸಿಂಹ, ಆಂಜನೇಯ, ಕಾಳಿಂಗಮರ್ಧನ ಕೃಷ್ಣ, ವೇಣುಗೋಪಾಲ, ಮಹಿಷಾಸುರ ಮರ್ದಿನಿಯರ ಕಲಾತ್ಮಕ ಶಿಲ್ಪಗಳಿವೆ. ಕಲಾ ಆರಾಧನೆಯನ್ನು ಬಯಸುವ ಕಣ್ಣುಗಳು ಇವೆಲ್ಲವನ್ನು ಕಂಡು ಧನ್ಯವಾಗುತ್ತವೆ.

ಸನಾತನಧರ್ಮ ಸಂಸ್ಕೃತಿಗಳ ಹರಿಕಾರರಾದ ಯತಿವರೇಣ್ಯರು ನಮ್ಮ ನಾಡಿನಲ್ಲಿ ಪೂಜನೀಯರಾದರು. ಸಂತರು- ಶ್ರೇಷ್ಠರು-ಮಹಂತರು ಈ ನಾಡಿನ ಎಲ್ಲೆಡೆ ಪಾದರಸದಂತೆ ಹರಿದಾಡಿ ಭಗವಂತನ ಇರುವಿಕೆಯನ್ನು ಪ್ರತಿಪಾದಿಸಿದ್ದಾರೆ. ನಮ್ಮ ಪಾಲಿಗೆ ಸಾಕಷ್ಟು ಸಂಪತ್ತನ್ನು ಬಿಟ್ಟುಹೋಗಿದ್ದಾರೆ. ವಾದಿರಾಜರು ಈ ಮಹಾನುಭಾವರ ಸಾಲಿಗೆ ಸೇರುತ್ತಾರೆ. ಇವರು ರಚಿಸಿದ ಕೃತಿಯ ಹೆಸರು 'ತೀರ್ಥಪ್ರಬಂಧ' ಹೆಸರೇ ಸೂಚಿಸುವಂತೆ ಇದರಲ್ಲಿ ಪುಣ್ಯತೀರ್ಥಗಳ ವಿವರಣೆಯಿದೆ. ಇದರಲ್ಲಿ ಒಂದು ಪದ್ಯವು ಹೀಗೆ ಸಾಗಿರುತ್ತದೆ-

*ನತೋಽಸ್ಮಿ ತುಂಗಾಂ ವಿಲಸತ್ತರಂಗಾಂ, ಅಘೌಘ ಭಂಗಾಂ ಹರಿಪಾದಸಂಗಾಂ*
*ಶ್ರೀತೋಽಸ್ಮಿ ಭದ್ರಾಂ ಹೃತಪಾದನಿದ್ರಾಂ ವಿಮುಕ್ತಿವದ್ಯಾಂ ವಿಮಲೈಕಸಾಧ್ಯಾಂ*

ಈ ಪದ್ಯವೇ ಹೇಳುವಂತೆ ತುಂಗಾ ಮತ್ತು ಭದ್ರಾನದಿಗಳ ತೀರದಲ್ಲಿ ಶ್ರೀಹರಿಯ ಕ್ಷೇತ್ರಗಳು ಶೋಭಿಸುತ್ತಿವೆ. ಇವುಗಳ ಸಾಲಿಗೆ ಭದ್ರಾವತಿಯ ಲಕ್ಷ್ಮೀನರಸಿಂಹ ದೇವಾಲಯ ವನ್ನು ಸೇರಿಸಿಕೊಳ್ಳಬಹುದು. ಭದ್ರಾವತಿಯ ದೇವಾಲಯವು ಕರ್ನಾಟಕ ರಾಜ್ಯದ ಪ್ರಾಚ್ಯವಸ್ತು ಇಲಾಖೆಯ ಅಧೀನಕ್ಕೊಳಪಟ್ಟಿರುತ್ತದೆ. ಇದರ ಆಡಳಿತವನ್ನು ಮುಜರಾಯಿ ಇಲಾಖೆಯು ನಿರ್ವಹಿಸುತ್ತದೆ. ಧರ್ಮದರ್ಶಿಗಳ ಸಮಿತಿಯನ್ನು ರಚಿಸಿರುತ್ತಾರೆ. ಈ ಸಮಿತಿಯವರು ಇಲ್ಲಿನ ಅಭಿವೃದ್ಧಿ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದಾರೆ. ಮೂಲವರರು ನರಸಿಂಹನೇ ಆದರೂ ಉತ್ಸವಾದಿ ಗಳು ಶ್ರೀ-ಭೂ ಸಮೇತರಾದ ಶ್ರೀನಿವಾಸರಿಗೆ ನೆರವೇರುತ್ತಿರುವುದು ಭದ್ರಾವತಿಯ ದೇವಾಲಯದ ವೈಶಿಷ್ಟ್ಯವೆಂದು ಹೇಳಬಹುದು.

# ಕೂಡಲಿ

ಕರ್ನಾಟಕದ ಕೀರ್ತಿಯನ್ನು ಬೆಳಗಿಸಬಲ್ಲ ಹಿರಿಮೆಗೆ ಪಾತ್ರವಾಗಿರುವ ಶಿವಮೊಗ್ಗ ಜಿಲ್ಲೆಯು ಧಾರ್ಮಿಕ ವಿಕಾಸಕ್ಕೂ ತನ್ನ ಕೊಡುಗೆಯನ್ನಿತ್ತಿದೆ. ಭದ್ರಾವತಿಯ ಉಕ್ಕು, ಸೊರಬದ ಕಲೆಗಾರಿಕೆಗಳು ನಮ್ಮನ್ನು ಬೆರಗುಗೊಳಿಸುವಂತಿದ್ದರೆ ಈ ಜಿಲ್ಲೆಯ ದೇವಾಲಯಗಳಲ್ಲಿ ಶಿಲ್ಪಗಳು ಬರೀ ಕಡೆದುನಿಂತಿಲ್ಲ, ಸುಂದರ ಕಾವ್ಯವಾಗಿ ಅರಳಿ ನಿಂತಿವೆ. ಅವುಗಳಲ್ಲಿ ಕೂಡಲಿಯೂ ಒಂದಾಗಿದೆ.

ಕೂಡಲಿ ಕ್ಷೇತ್ರವು ಶಿವಮೊಗ್ಗೆಯ ಈಶಾನ್ಯ ದಿಕ್ಕಿನಲ್ಲಿ ತುಂಗ ಮತ್ತು ಭದ್ರಾ ನದಿಗಳ ಸಂಗಮದಲ್ಲಿದೆ. ಎರಡು ನದಿಗಳು ಸೇರುವ ಸ್ಥಳದಲ್ಲಿರುವ ಕಾರಣ ಇದಕ್ಕೆ ಈ ಹೆಸರು ಬಂದಿದೆ. ನಿಸರ್ಗ ರಮಣೀಯತೆ, ಪ್ರಶಾಂತ ವಾತಾವರಣಗಳು ಈ ಕ್ಷೇತ್ರಕ್ಕೆ ಹೆಮ್ಮೆಯನ್ನು ಗಳಿಸಿಕೊಟ್ಟಿವೆ. ಇದರೊಟ್ಟಿಗೆ ಇಲ್ಲಿನ ಧಾರ್ಮಿಕ ಪ್ರಭಾವದಿಂದಲೂ ಸಹ ಕೀರ್ತಿಗಳಿಸಿದೆ. ದೇವಾಲಯಗಳು ಮತ್ತು ಮಠಗಳು ಇಲ್ಲಿವೆ. ಇವು ಈ ಸ್ಥಳಕ್ಕೆ ವರದಾನವಾಗಿವೆ.

ಕೂಡಲಿಯಲ್ಲಿರುವ ನರಸಿಂಹ ದೇವಾಲಯವು ಆಕರ್ಷಕ ಆಲಯವಾಗಿದೆ. ರಾಮೇಶ್ವರ ದೇವಾಲಯಕ್ಕೆ ಸ್ವಲ್ಪವೇ ದೂರದಲ್ಲಿರುವ ಈ ಆಲಯದ ಗೋಡೆಗಳು ಮತ್ತು ಕಂಬಗಳು ಹೆಚ್ಚು ಅಲಂಕೃತವಾಗಿವೆ. ಗೋಡೆಗಳ ಮೇಲೆ ಗೋಪುರಗಳು ಮತ್ತು ತೋರಣಗಳೂ ಇದೆ. ಕಂಬಗಳ ಮೇಲೆ ಏಣಿಸರಗಳಿವೆ. ಮೇಲ್ಛಾವಣಿಯ ಮಧ್ಯದ ಭುವನೇಶ್ವರಿಯಲ್ಲಿರುವ ದೊಡ್ಡಗಾತ್ರದ ಪದ್ಮವು ಶೋಭಿಸುವಂತಹದ್ದು. ಇಲ್ಲಿರುವ ನವರಂಗ ಮತ್ತು ಗರ್ಭಗೃಹಗಳ ದ್ವಾರದಲ್ಲಿ ಜಾಲಂದ್ರಗಳಿವೆ.

ಶಿವಮೊಗ್ಗ ಜಿಲ್ಲೆಯಲ್ಲಿ ಬೌದ್ಧ ಮತ್ತು ಜೈನ ಧರ್ಮಗಳ ಪ್ರಾಚೀನತೆಯನ್ನು ತಿಳಿಸುವ ಶಾಸನಗಳಿವೆ. ಆದರೆ ವೈಷ್ಣವ ಧರ್ಮದ ಪ್ರಾಚೀನತೆಗೆ ಇಲ್ಲಿ ದೊರೆತಿರುವ ಸಾಮಗ್ರಿ ಅಲ್ಪವಾದರೂ ಇದು ಅಪೂರ್ವವಾದದ್ದು. ಇಂತಹವುಗಳಲ್ಲಿ ಕೂಡಲಿಯಲ್ಲಿರುವ ನರಸಿಂಹ ಶಿಲ್ಪವೂ ಒಂದಾಗಿದೆ. ಹೊಯ್ಸಳ ದೇವಾಲಯಗಳಲ್ಲಿ ಈ ಶಿಲ್ಪವನ್ನು ಕಾಣಬಹುದಾದರೂ ಇದರ ಪ್ರಾಚೀನತೆ ಇನ್ನೂ ತುಂಬ ಹಿಂದಕ್ಕೆ ಹೋಗಬಹುದು. ಮೂರ್ತಿ ಶಿಲ್ಪದ ದೃಷ್ಟಿಯಿಂದ ಇದು ಐದರಿಂದ ಏಳನೇ ಶತಮಾನಕ್ಕೆ ಸೇರುತ್ತದೆ. ಲಕ್ಷಣಶಾಸ್ತ್ರ ಮತ್ತು ಶೈಲಿಗಳು ಈ ಅಂಶವನ್ನು ಘೋಷಿಸುತ್ತವೆ. ಈ ಹಿನ್ನೆಲೆಯಲ್ಲಿ ಕೂಡಲಿಯ ನರಸಿಂಹ ಸ್ವಾಮಿಯನ್ನು ಗಮನಿಸಬಹುದಾಗಿದೆ.

ಗರ್ಭಗೃಹದಲ್ಲಿರುವ ನರಸಿಂಹ ವಿಗ್ರಹವು ಪುರಾತನವಾದದ್ದು. ಇದಕ್ಕೆ ಚಿಂತಾಮಣಿ ನರಸಿಂಹನೆಂಬ ಹೆಸರಿದೆ. ಮೂರ್ತಿಯ ಎತ್ತರ ಸುಮಾರು ಮೂರು ಅಡಿಗಳು. ದ್ವಿಬಾಹುಗಳನ್ನು ಹೊಂದಿರುವುದು ಈ ಸ್ವಾಮಿಯ ವಿಶೇಷ. ವೀರಾಸನದಲ್ಲಿ ಕುಳಿತಿರುವ ಸ್ವಾಮಿಯು

ತನ್ನ ಬಲಗೈಯಲ್ಲಿ ಪಾತ್ರೆಯನ್ನು ಹಿಡಿದಿದ್ದಾನೆ. ಇದಕ್ಕೆ ಚಿಂತಾಮಣಿಯೆಂಬ ಹೆಸರಿದೆ. ಎಡಗೈಯನ್ನು ತೊಡೆಯ ಮೇಲಿಟ್ಟು ಕುಳಿತಿರುವ ಮೂರ್ತಿಯ ಹಣೆಯ ಮೇಲೆ ಪ್ರಹ್ಲಾದನ ಹಸ್ತದ ಗುರುತು ಕಾಣುತ್ತದೆ. ಇಲ್ಲಿನ ನರಸಿಂಹ ಮೂರ್ತಿಯನ್ನು ಶಾಲಿಗ್ರಾಮ ಶಿಲೆಯಿಂದ ನಿರ್ಮಿಸಿದ್ದಾರೆ. ಶಿರಸ್ಸಿನಲ್ಲಿ ಚಕ್ರದ ಚಿಹ್ನೆಯೂ ಇರುವುದರಿಂದ ಈ ಮೂರ್ತಿಗೆ 'ಶಿರಶ್ಚಕ್ರಮೂರ್ತಿ' ಎಂಬ ನಾಮಧೇಯವಿದೆ.

ಕೂಡಲಿಯ ಇಂತಹ ಅಪರೂಪವಾದ ನರಸಿಂಹನ ಉತ್ಸವ ಮೂರ್ತಿಯಾಗಿ ಶೋಭಿಸುತ್ತಿರುವುದು ವೆಂಕಟೇಶ್ವರ ಸ್ವಾಮಿ. ಕಾರ್ತಿಕ ಮಾಸದ ಹುಣ್ಣಿಮೆಯ ದಿನ ನಡೆಯುವ ಬ್ರಹ್ಮೋತ್ಸವಕ್ಕೆ ಅಧಿಕ ಸಂಖ್ಯೆಯಲ್ಲಿ ಭಕ್ತಾದಿಗಳು ಸೇರುತ್ತಾರೆ. ಒಟ್ಟಿನಲ್ಲಿ ಕೂಡಲಿಯು ನರಸಿಂಹನ ಶಿಲ್ಪಗಳ ದೃಷ್ಟಿಯಿಂದ ಪ್ರತ್ಯೇಕ ಅಧ್ಯಯನವನ್ನೇ ಶಿಲ್ಪಶಾಸ್ತ್ರ ಅಧ್ಯಯನಕ್ಕೆ ಸೇರಿಸುವಂತಿವೆ.

# ಕುಬಟೂರು

ಶಿವಮೊಗ್ಗ ಜಿಲ್ಲೆಯ ಸೊರಬ ಪಟ್ಟಣಕ್ಕೆ ಅತ್ಯಂತ ಸಮೀಪವಾಗಿರುವುದು ಕುಬಟೂರು. ಇದೊಂದು ಪುರಾತನ ಸ್ಥಳವಾಗಿಯೂ ಹೆಸರುವಾಸಿಯಾಗಿರುತ್ತದೆ. ಕುಪ್ಪಟೂರು, ಕುಂತಲ ನಗರ ಎಂಬ ಇನ್ನಿತರ ಹೆಸರುಗಳನ್ನು ಇದು ಹೊಂದಿದ್ದಿತು ಎಂಬುದು ಇಲ್ಲಿನ ಇತಿಹಾಸವನ್ನು ಪರಾಮರ್ಶಿಸಿದಾಗ ಕಂಡುಬರುವ ಅಂಶವಾಗಿದೆ.

ಪ್ರಾಚೀನ ಅಗ್ರಹಾರವಾಗಿದ್ದ ಈ ಸ್ಥಳದಲ್ಲಿ ನರಸಿಂಹಸ್ವಾಮಿಯು ನೆಲೆಸಿರುತ್ತಾನೆ. ಕುಬಟೂರಿನ ಪಶ್ಚಿಮ ದಿಕ್ಕಿನಲ್ಲಿ ಚಿಂತಾಮಣಿ ನರಸಿಂಹ ದೇವಾಲಯವಿದೆ. ಇಲ್ಲಿರುವ ನರಸಿಂಹನು ಹಲವು ವಿಶಿಷ್ಟತೆಗಳನ್ನು ಹೊಂದಿದವನಾಗಿರುತ್ತಾನೆ. ಮುಂದಲೆ ಕೂದಲನ್ನು ಎಳೆಎಳೆಯಾಗಿ ಬಿಡಿಸಿದಂತಿರುವ ಈ ಶಿಲ್ಪವು ಪ್ರತಿಮಾಶಾಸ್ತ್ರದ ದೃಷ್ಟಿಯಿಂದ ಗಮನಿಸಿದಾಗ ಸುಮಾರು ಐದು ಅಥವಾ ಆರನೆಯ ಶತಮಾನಕ್ಕೆ ಸೇರಿರಬಹುದೆಂದು ಹೇಳಬಹುದಾಗಿದೆ.

ಉಪವೀತಧಾರಿಯಾಗಿ, ಸರಳ ಅಲಂಕೃತನಾದ ಈ ದ್ವಿಭುಜ ನರಸಿಂಹನನ್ನು ಶಿಲ್ಪಶಾಸ್ತ್ರದ ವಿಕಾಸದ ದೃಷ್ಟಿಯಿಂದಲೂ ಸಹ ವಿಶೇಷವಾಗಿ ಪರಿಗಣಿಸಬಹುದಾಗಿದೆ. ಮೂರ್ತಿ ಶಿಲ್ಪದ ಅಧ್ಯಯನಕ್ಕೆ ಅನುಸಾರವಾಗಿ ಈ ಶಿಲ್ಪವನ್ನು ಹೆಚ್ಚು ಪ್ರಮಾಣಬದ್ಧವಾದುದು ಎಂದು ಹೇಳಬಹುದು.

ಕುಬಟೂರಿಗೆ ಹೋಗಿ ಬರಲು ಸಾಕಷ್ಟು ಉತ್ತಮವೆನ್ನಬಹುದಾದ ಸಾರಿಗೆ ಸಂಪರ್ಕ ವ್ಯವಸ್ಥೆಯಿರುವುದರಿಂದ ಚಿಂತಾಮಣಿ ನರಸಿಂಹನ ದರ್ಶನಭಾಗ್ಯವನ್ನು ಪಡೆಯುವುದಕ್ಕಾಗಿ ಭಕ್ತಾದಿಗಳು ಬಂದುಹೋಗುತ್ತಿರುತ್ತಾರೆ.

## ಬೆಳಗಾವಿ ಜಿಲ್ಲೆ

# ರಾಯಭಾಗ

ಕರ್ನಾಟಕ-ಮಹಾರಾಷ್ಟ್ರ ನಡುವಣ ಗಡಿವಿವಾದದ ಕೇಂದ್ರಬಿಂದುವಾಗಿರುವ ಬೆಳಗಾವಿ ಜಿಲ್ಲೆಗೆ ಸೇರಿದ ರಾಯಭಾಗ್ ತಾಲೂಕು ಕೇಂದ್ರವಾಗಿರುತ್ತದೆ. ಹನ್ನೊಂದನೆ ಶತಮಾನದಲ್ಲಿ ಇದೊಂದು ಜೈನ ಕೇಂದ್ರಸ್ಥಳವಾಗಿದ್ದಂತೆ ತಿಳಿದುಬರುತ್ತದೆ. ನಂತರ ಹದಿನೈದನೆಯ ಶತಮಾನದಲ್ಲಿ ಎಂದರೆ ವಿಜಯನಗರದ ಅರಸರು ಕರ್ನಾಟಕವನ್ನು ಆಳುತ್ತಿದ್ದ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಹದಿನೇಳನೆಯ ಶತಮಾನದಲ್ಲಿ ಈ ವ್ಯಾಪಾರಸ್ಥಳವನ್ನು ಫ್ರೆಂಚ್ ಪ್ರವಾಸಿಯಾದ ಟ್ಯಾವರ್ನಿಯು ಸಂದರ್ಶಿಸಿದ್ದ. ಇಲ್ಲಿನ ವ್ಯಾಪಾರ ವೈಭವವನ್ನು ಈ ದಿಸೆಯಲ್ಲಿ ಇದರ ಪ್ರಗತಿಯನ್ನು ನೋಡಿ ಸಹಿಸಲಾರದೆ ರಣದುಲ್ಲಾಖಾನನ್ನು ಈ ನಗರವನ್ನು ನಾಶಮಾಡಿದನಂತೆ. ಇಂದು ಸಾಧಾರಣವಾದ ರೀತಿಯಲ್ಲಿ ರಾಯಭಾಗ್ ಕಂಡುಬರುತ್ತಿದೆ.

ರಾಯಬಾಗ್‌ನಲ್ಲಿ ಪ್ರೇಕ್ಷಣೀಯ ಸ್ಥಳವಾದ ಪುಟ್ಟದೊಂದು ಸ್ಮಾರಕವಾಗಿ ಉಳಿದಿರುವುದು ನರಸಿಂಹ ದೇವಾಲಯ. ಹೊರನೋಟಕ್ಕೆ ಇಲ್ಲೊಂದು ದೇವಾಲಯವಿದೆ ಯೆಂದು ಯಾರ ಗಮನಕ್ಕೂ ಬರುವಂತೆ ಇರುವದಲ್ಲ ಎಂದರೆ ಪೂಜಾ ಮಂದಿರದ ಯಾವ ಕುರುಹಗಳೂ ಈ ಸ್ಥಳದಲ್ಲಿಲ್ಲ. ಕಬ್ಬಿಣದ ಭದ್ರವಾದ ಬಾಗಿಲನ್ನು ತೆರೆದು ಬಯಲಿನೊಳಗೆ ಪ್ರವೇಶಿಸಬಹುದು. ಸೂಕ್ಷ್ಮವಾಗಿ ಗಮನಿಸಿದರೆ ಕೆಳಗಿಳಿದು ಹೋಗಲು ಮಾರ್ಗವೊಂದು ಕಾಣುತ್ತದೆ. ಇಲ್ಲಿ ಇಳಿದು ನೇರಕ್ಕೆ ಕಾಣುವ ಕೋಣೆಯ ಸಮೀಪ ಸಾಗಿ ಮತ್ತೆ ಎಡಕ್ಕೆ ಇಳಿದು ಹೋದರೆ ಸ್ವಲ್ಪ ಹೆಚ್ಚು ವಿಶಾಲವಾದ ಕೋಣೆಗೆ ಬರುತ್ತೇವೆ. ಇದಕ್ಕೊಂದು ಇತಿಹಾಸವನ್ನು ಹೇಳುತ್ತದೆ. ಇಲ್ಲಿ ಶ್ರೀ ಪಂತಮಹಾರಾಜ ಬಾಳೆಕುಂದ್ರಿ ಅವರ ವಿವಾಹ ನಡೆದುದಕ್ಕೆ ಸಮರ್ಥನೆ ನೀಡುವಂತೆ ಅವರ ದೊಡ್ಡದಾದ ಭಾವಚಿತ್ರವನ್ನು ಗೋಡೆಯಲ್ಲಿ ಇಳಿಬಿಟ್ಟಿದ್ದಾರೆ. ಇವರ ಅನುಯಾಯಿಗಳಿಗೆ ಇದೊಂದು ಯಾತ್ರಾಸ್ಥಳವಾಗಿರುವುದಂತೆ ಕೊಲ್ಲಾಪುರದ ಮಹಾರಾಜರಾದ ಛತ್ರಪತಿ ರಾಜಾರಾಮ ಅವರು ಈ ದೇವಾಲಯಕ್ಕೆ ಆಗಾಗ ಭೇಟಿ ನೀಡುತ್ತಿದ್ದು, ಅವರ ಕೃಪೆಯ ಕಾರಣದಿಂದ ಅಭಿವೃದ್ಧಿ ಹೊಂದುವಂತಾಗಿದೆ.

ಗರ್ಭಗೃಹದಲ್ಲಿರುವ ನರಸಿಂಹನು ಉಗ್ರಸ್ವಭಾವದವನಾಗಿ ಕಾಣುತ್ತಾನೆ. ಸುಮಾರು ಮೂರಡಿ ಪೀಠದ ಮೇಲೆ ಎರಡೂವರೆ ಅಡಿಯಷ್ಟೆತ್ತರದ ಕರಿಯ ಹೊಳಪಾದ ಕಲ್ಲಿನ ಮೂರ್ತಿಯು ಕಂಗೊಳಿಸುತ್ತಿದೆ. ಇದನ್ನು ಸಮೀಪದ ಕೃಷ್ಣಾನದಿಯ ದಂಡೆಯಲ್ಲಿರುವ ಜಲೀಲಪುರದಿಂದ ತಂದದ್ದೆಂದು ಹೇಳುತ್ತಾರೆ. ಹದಿನಾರು ಕೈಗಳಿಂದ ಕೂಡಿದ ಈ ಮೂರ್ತಿಯ ಕತ್ತನೆಯ ಎಂತಹವರನ್ನು ಮೋಹಗೊಳಿಸುತ್ತದೆ. ಸ್ವಲ್ಪ ಪಕ್ಕಕ್ಕೆ ತಿರುಗಿದಂತೆ

ಕಂಡುಬರುವ ಸ್ವಾಮಿಯ ನಯನಮನೋಹರ ದೃಶ್ಯ ಶತ್ರುಸಂಹಾರ ಕಾರ್ಯದಲ್ಲಿ ಏಕಚಿತ್ತನಾದಂತೆ ನೋಟವಿದೆ. ಕೆತ್ತನೆಯ ವಿವರಗಳು ತುಂಬ ಸ್ಪಷ್ಟವಾಗಿದೆ. ಸ್ವಾಮಿಯನ್ನು ನಮ್ಮ ಸಮೀಪವಾಗಿ ಕಾಣುವ ಸೌಭಾಗ್ಯ ಈ ಸನ್ನಿಧಿಯಲ್ಲಿರುವುದು ವಿಶೇಷವೆಂದು ಹೇಳಬಹುದು. ಸ್ವಾಮಿಯ ಎಡ ಬಲ ಬದಿಗಳಲ್ಲಿ ಗೋಡೆಹಾಕಿ ಮುಚ್ಚಿದ ಭಾಗಗಳಿವೆ. ಇಲ್ಲಿ ಏನಿದೆಯೆಂಬುದು ಇಂದಿಗೂ ಒಂದು ರಹಸ್ಯವಾಗಿದೆ. ಹಿಂಭಾಗಕ್ಕೆ ಸ್ಥಳವಿದ್ದು ಪ್ರದಕ್ಷಿಣೆ ಮಾಡಲು ಅವಕಾಶವಿದೆ. ಒಟ್ಟಿನಲ್ಲಿ ರಾಯಬಾಗ್‌ನ ನರಸಿಂಹ ಜ್ವಾಲಾರೂಪದಲ್ಲಿ ಕಾಣುತ್ತಿರುವುದರಲ್ಲಿ ಯಾವ ಸಂಶಯವೂ ಇಲ್ಲ.

## ಹಲಸಿ

ಭೂವರಾಹ ನರಸಿಂಹ ಕ್ಷೇತ್ರವಾದ ಹಲಸಿಯು ಬೆಳಗಾವಿ ಜಿಲ್ಲೆಯಲ್ಲಿದೆ. ಜಿಲ್ಲಾ ಕೇಂದ್ರಸ್ಥಳದಿಂದ ನಲವತ್ತು ಕಿ.ಮೀ. ದೂರದಲ್ಲಿರುವ ಈ ಸ್ಥಳವು ಕದಂಬರ ಆಳ್ವಿಕೆಗೆ ಒಳಪಟ್ಟಿದ್ದಿತು. ಕರ್ನಾಟಕದ ಇತಿಹಾಸಕ್ಕೆ ಮತ್ತು ಕನ್ನಡನಾಡಿಗೆ ತಮ್ಮ ಅಪೂರ್ವವಾದ ಕೊಡುಗೆಯನ್ನು ನೀಡಿದ ಕದಂಬ ರಾಜರ ಎರಡನೆಯ ರಾಜಧಾನಿಯಾಗಿ ಹಲಸಿಯು ಪ್ರಸಿದ್ಧವಾಯಿತು.

ಸ್ವಾತಂತ್ರ್ಯ ಸಂಗ್ರಾಮಕ್ಕೆ ತಮ್ಮ ಸೇವೆ ಸಲ್ಲಿಸಿದ ಮಹಾ ಪುರುಷರಿಂದಲೂ, ಸಾಹಿತ್ಯ ಕಲೆಗಳ ಕ್ಷೇತ್ರಕ್ಕೆ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ ಪ್ರಸಿದ್ಧ ವ್ಯಕ್ತಿಗಳಿಂದಲೂ ಶೋಭಿಸುತ್ತಿರುವ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿಗೆ ಸೇರಿದ ಹಲಸಿ ಕ್ಷೇತ್ರವು ಶ್ರೀನರಸಿಂಹ ದೇವಾಲಯಗಳ ದೃಷ್ಟಿಯಿಂದಲೂ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದೆ. ನಮ್ಮ ನಾಡಿನ ಧಾರ್ಮಿಕ ಸಿರಿಯನ್ನು ಅಧಿಕ ಗೊಳಿಸಿದೆ.

ನರಸಿಂಹನ ಮೂರ್ತಿಗಳು ಲಕ್ಷ್ಮಿಯೊಂದಿಗೆ ಇರುವುದಾಗಲೀ, ದುಷ್ಟಸಂಹಾರದ ಉಗ್ರರೂಪದಿಂದಾಗಲೀ, ಯೋಗಪಟ್ಟಿಕೆಯನ್ನು ಧರಿಸಿ ಕುಳಿತಿರುವುದಾಗಲೀ ಸಾಮಾನ್ಯವಾಗಿ ಕಾಣುವ ಶಿಲ್ಪಗಳಾಗಿವೆ. ಆದರೆ ಹಲಸಿಯ ಶ್ರೀನರಸಿಂಹಸ್ವಾಮಿಯನ್ನು ಭೂ ವರಾಹ ನರಸಿಂಹನೆಂದು ಗುರುತಿಸಿರುವುದು ಆರಾಧನಾ ದೃಷ್ಟಿಯಿಂದ ಸ್ವಲ್ಪ ಭಿನ್ನವಾದದ್ದೆಂದು ಹೇಳಬಹುದು.

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ದೃಷ್ಟಿಯಿಂದ ಮಹತ್ತ್ವವಾಗಿರುವ ಈ ದೇವಾಲಯ ರಚನೆ ಕ್ರಿ.ಶ. ೧೧೭೦ಕ್ಕೆ ಸೇರಿದೆ. ಇದಕ್ಕೆ ಸಂಬಂಧಿಸಿದಂತೆ ಇಲ್ಲಿ ದೊರೆತಿರುವ ಶಿಲಾಶಾಸನಗಳು ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ. ಕದಂಬರ ಆರನೆಯ ದೊರೆ ಪೆರ್ಮಾಡಿಯ ಕಾಲದಲ್ಲಿ ಇದರ ರಚನೆಯಾಗಿರುವುದಾಗಿ ತಿಳಿದುಬರುತ್ತದೆ. ಗೋವೆಯ ಕದಂಬರಿಗೆ ಸೇರಿದ ಈ ಕ್ಷೇತ್ರವು ತನ್ನ ಹಿರಿಮೆಯನ್ನು ಸಾರುತ್ತಿದೆ.

## ಚಿತ್ರದುರ್ಗ ಜಿಲ್ಲೆ

# ಹೊಳಲ್ಕೆರೆ

ಚಿತ್ರದುರ್ಗ ಜಿಲ್ಲೆಯು ಕರ್ನಾಟಕದ ಪ್ರಸಿದ್ಧ ಗಿರಿದುರ್ಗಗಳ ಪ್ರದೇಶವಾಗಿದೆ. ಈ ಜಿಲ್ಲೆಯಲ್ಲಿನ ಹಲವಾರು ಸ್ಮಾರಕಗಳು ದೇಶವಿದೇಶಗಳಿಂದ ಬರುವ ಪ್ರವಾಸಿಗರನ್ನು ಚಕಿತಗೊಳಿಸುತ್ತವೆ. ಸ್ವತಃ ಚಿತ್ರದುರ್ಗದಲ್ಲಿಯೇ ಇರುವ ಪ್ರಖ್ಯಾತವಾದ ಏಳುಸುತ್ತಿನ ಕೋಟೆ, ಕೊತ್ತಲ, ಬುರುಜುಗಳು ಇತಿಹಾಸದ ಅಧ್ಯಯನಕ್ಕೆ ಸಹಕಾರಿಯಾಗುತ್ತಿವೆ. ಇಂತಹ ಜಿಲ್ಲೆಗೆ ಸೇರಿದ ಎರಡು ನರಸಿಂಹಕ್ಷೇತ್ರಗಳು ಹೊಳಲ್ಕೆರೆ ಮತ್ತು ಹೊರಕೆರೆ ದೇವರಪುರಗಳಾಗಿವೆ.

ಹೊಳಲ್ಕೆರೆಯು ಬೆಂಗಳೂರಿಗೆ ಇನ್ನೂರಾ ಮೂವತ್ನಾಲ್ಕು ಕಿಲೋಮೀಟರ್ ದೂರದಲ್ಲಿದೆ. ಈಗಿನ ಪಟ್ಟಣವನ್ನು ದುಮ್ಮಿಯ ದೊಡ್ಡಣ್ಣನಾಯಕನ ಅಧೀನದಲ್ಲಿದ್ದ ಬೋಯಗೌಡನೆಂಬ ವ್ಯಕ್ತಿಯು ಹನ್ನೆರಡನೆಯ ಶತಮಾನದಲ್ಲಿ ಸ್ಥಾಪಿಸಿದನೆಂದು ತಿಳಿದು ಬರುತ್ತದೆ. ಇಲ್ಲಿನ ಬಯಲು ಗಣಪತಿಯ ದೇವಾಲಯವು ಬೃಹತ್ ಶಿಲ್ಪದಿಂದ ಕೂಡಿದ ಪ್ರಸಿದ್ಧ ದೇವಸ್ಥಾನವಾಗಿದೆ. ಈ ಗಣಪತಿಯ ಎಡಕಂಕುಳಿನ ಬಳಿಯಲ್ಲಿ ಉದ್ಭವ ನರಸಿಂಹನ ಮೂರ್ತಿಯಿದೆ. ಇದನ್ನು ಕಂಕುಳು ನರಸಿಂಹ ಎಂದು ಕೂಡಾ ಕರೆಯುವ ಪ್ರತೀತಿಯಿದೆ.

# ಹೊರಕೆರೆ ದೇವರಪುರ

ಹೊಳಲ್ಕೆರೆಯಿಂದ ಹೊರಕೆರೆ ದೇವರಪುರಕ್ಕೆ ಸುಮಾರು ಮೂವತ್ತು ಕಿಲೋ ಮೀಟರ್ ಅಂತರದಲ್ಲಿದೆ. ಇದು ಗಿರಿವನಗಳ ನಡುವೆ ಶೋಭಿಸುತ್ತಿರುವ ಪ್ರಾಕೃತಿಕ ನೆಲೆ ಯಾಗಿದೆ. ಇದನ್ನು ಜೈನರಾಜನಾಗಿದ್ದ ಉತ್ತುಂಗನೆಂಬುವನು ಆಳುತ್ತಿದ್ದಂತೆ ತಿಳಿದುಬರು ತ್ತದೆ. ಆತನ ಆಳ್ವಿಕೆಗೆ ಸೇರಿದ ನಂದನನಗರದ ಬಡಾವಣೆಯೆಂದು ಇದನ್ನು ಭಾವಿಸಲಾಗು ತ್ತಿದೆ. ಆದ್ದರಿಂದಲೇ ಇದು ಹೊರಕೆರೆ. ಈ ಸ್ಥಳದಲ್ಲಿ ಹೊಯ್ಸಳ ಶೈಲಿಗೆ ಸೇರಿದ ಪ್ರಾಚೀನವಾದ ಲಕ್ಷ್ಮೀನರಸಿಂಹ ದೇವಾಲಯವಿದೆ. ಇದರ ಬಲಗಡೆಗಿರುವ ಹೆಜ್ಜೆಯ ಗುರುತನ್ನು ಶ್ರೀಪಾದವೆಂದು ಹೇಳುತ್ತಾರೆ. ಮತ್ತೊಂದು ಪಾದವು ಕೃಷ್ಣಾಚಲದಲ್ಲಿದೆಯೆಂದು ನಂಬಿಕೊಂಡು ಬರಲಾಗಿದೆ. ಹೀಗೆ ಶ್ರೀಪಾದದ ಆರಾಧನೆಯ ಕ್ಷೇತ್ರವಾಗಿ ನರಸಿಂಹನ ಆರಾಧನೆಯ ವೈಶಿಷ್ಟ್ಯವೊಂದನ್ನು ಪ್ರತಿನಿಧಿಸುತ್ತಿರುವ ಹೊರಕೆರೆ ದೇವರಪುರವನ್ನು ಭಕ್ತಿ ಭಾವದ ನಿಸರ್ಗಸ್ಥಳಗಳಲ್ಲಿ ಒಂದಾಗಿ ಗುರುತಿಸುವುದು ಸಾಧ್ಯ.

## ದಾವಣಗೆರೆ ಜಿಲ್ಲೆ

# ಬಾಗುಳಿ

ಈ ಮೊದಲು ಬಳ್ಳಾರಿ ಜಿಲ್ಲೆಗೆ ಸೇರಿದುದಾಗಿದ್ದು, ಪ್ರಸ್ತುತ ದಾವಣಗೆರೆ ಜಿಲ್ಲೆಯ ಹರಪನಹಳ್ಳಿಯಿಂದ ಸುಮಾರು ಒಂಬತ್ತು ಕಿ.ಮೀ. ದೂರದಲ್ಲಿರುವ ಬಾಗುಳಿಯಲ್ಲಿ ಕಲ್ಲೇಶ್ವರ ದೇವಾಲಯವಿದೆ. ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸೇರಿದ ಈ ದೇಗುಲವನ್ನು ಕೆರೆಯಂಚಿನಲ್ಲಿ ಕಟ್ಟಲಾಗಿದೆ. ಈ ಊರಿನ ತುಂಬ ಅನೇಕ ಪ್ರಾಚ್ಯವಸ್ತುಗಳಿದ್ದು ಅವುಗಳನ್ನೆಲ್ಲ ಒಂದೆಡೆ ಸಂಗ್ರಹಿಸಿ ಸಂರಕ್ಷಿಸುವ ಕಾರ್ಯವನ್ನು ಇಲ್ಲಿ ಅತ್ಯಂತ ಶಿಸ್ತುಬದ್ಧವಾಗಿ ಮತ್ತು ಅಚ್ಚುಕಟ್ಟಾಗಿ ಮಾಡಲಾಗಿದೆ. ಇಲ್ಲಿರುವ ವಸ್ತು ಸಂಗ್ರಹಾಲಯ ಇತರರಿಗೆ ಮಾರ್ಗದರ್ಶನ ವನ್ನು ಮಾಡುವಂತಿದೆ.

ಹನ್ನೊಂದನೆಯ ಶತಮಾನದಲ್ಲಿ ಆಳ್ವಿಕೆ ನಡೆಸಿದ ಕಲ್ಯಾಣಿ ಚಾಲುಕ್ಯರಿಗೆ ಸೇರಿದ ಕಲ್ಲೇಶ್ವರ ದೇವಾಲಯದ ದ್ವಾರಬಂಧ, ಮುಖಮಂಟಪದ ಮೇಲ್ಛಾವಣಿ, ಇಲ್ಲಿನ ಕಂಬಗಳು ಉನ್ನತವಾದ ಕಲಾ ಪರಂಪರೆಯನ್ನು ಪ್ರತಿನಿಧಿಸುತ್ತವೆ. ಮುಖ್ಯ ದೇವಾಲಯದ ಮುಂದೆ ಎಡಭಾಗದ ಉಪಗುಡಿಯಲ್ಲಿರುವ ಇಲ್ಲಿನ ನರಸಿಂಹ ಶಿಲ್ಪವು ಉತ್ಕೃಷ್ಟವಾದ ಕಲಾನಿರ್ಮಿತಿಯಾಗಿದೆ.

ದೇವಾಲಯದ ಉತ್ತರ ದಿಕ್ಕಿನಲ್ಲಿರುವ ದಕ್ಷಿಣಕ್ಕೆ ಮುಖಮಾಡಿರುವ ದೇವಗೃಹ ದಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಉಗ್ರ ನರಸಿಂಹನ ಮನೋಹರ ಮೂರ್ತಿಯನ್ನು ಕಾಣಬಹುದಾಗಿದೆ. ಇದರ ಎತ್ತರ ಸುಮಾರು ಐದು ಅಡಿಗಳು. ಕಲೆಗಾರಿಕೆಯ ವಿಶಿಷ್ಟತೆಯಿಂದಲೂ, ಶಿಲ್ಪಿಯ ಅಪಾರವಾದ ಶ್ರದ್ಧೆ ಪರಿಶ್ರಮ ಗಳಿಂದಲೂ ಉಗ್ರಭಾವವು ಎದ್ದುಕಾಣುವಂತಿರುವ ಈ ಶಿಲ್ಪದಲ್ಲಿ ಅಷ್ಟೇ ಸೂಕ್ಷ್ಮವಾಗಿ ಪ್ರಸನ್ನತೆಯೂ ಕೂಡ ತುಂಬಿಕೊಂಡಿರುವುದನ್ನು ಮನಗಾಣಬಹುದು.

ಇದೊಂದು ಅಪರೂಪದ ಮೂರ್ತಿಯಂತೆ ಕಂಡುಬರುತ್ತಿರುವುದಾದರೂ ಕಾಲದ ಹರವು ಮತ್ತು ನೈಸರ್ಗಿಕ ಕಾರಣಗಳು ಇದರ ಸಹಜತೆಗೆ ಕಳಂಕವುಂಟು ಮಾಡಿವೆ. 'ಶಿಲ್ಪಚಿಕಿತ್ಸೆ (ರಾಸಾಯನಿಕ ಉಪಚಾರ)'ಯಿಂದ ಇದಕ್ಕೆ ಕಾಯಕ ನೀಡುವಂತಾದಲ್ಲಿ ಮತ್ತಷ್ಟು ಕಾಲ ಉಳಿಯುವಂತಾದೀತು.

ಈ ನಿಟ್ಟಿನಲ್ಲಿ ಸರ್ಕಾರ ಮತ್ತು ಸಂಬಂಧಪಟ್ಟ ಇಲಾಖೆಗಳವರು ಆದ್ಯಗಮನವನ್ನು ನೀಡಬೇಕಾದ್ದು ಅವಶ್ಯಕವಾಗಿದೆ. ಈ ಕಾರ್ಯವಾಗಲಿ, ಅಪರೂಪದ ನರಸಿಂಹ ವಿಗ್ರಹವನ್ನು ಮುಂದಿನ ಪೀಳಿಗೆಯೂ ದರ್ಶಿಸುವಂತೆ ಆಗಲಿ ಎಂಬುದು ಭಕ್ತಾದಿಗಳ ಅಭಿಲಾಷೆಯಾಗಿದೆ.

# ಮಾಯಕೊಂಡ

ಮಾಯಕೊಂಡವು ದಾವಣಗೆರೆಗೆ ಮೂವತ್ಮೂರು ಕಿ.ಮೀ. ದೂರದಲ್ಲಿದೆ. ಇದು ಹೋಬಳಿ ಕೇಂದ್ರವೂ ಆಗಿದೆ. ಇಟ್ಟಿಗೆಪುರದ ರಾಜನು ತನ್ನ ಹೆಣ್ಣುಮಕ್ಕಳಾದ ಮಾಯಮ್ಮ ಮತ್ತು ಉಚ್ಚಮ್ಮನವರಿಗೆ ಎರಡು ಸ್ಥಳಗಳನ್ನು ಕೊಟ್ಟನಂತೆ. ಮಾಯಮ್ಮನ ಹೆಸರಿನಿಂದ ಮಾಯಕೊಂಡವನ್ನು ಗುರುತಿಸಲಾಗಿದೆ. ಇಲ್ಲಿರುವ ದೇವಾಲಯಗಳಲ್ಲಿ ಓಬಳ ನರಸಿಂಹ ದೇವಾಲಯವು ಊರಹೊರಗಿದೆ. ಪ್ರಾಯಶಃ ಹಳೆಯ ಊರು ಅಲ್ಲಿಯೇ ಇದ್ದಿರಬೇಕು. 'ಅಹೋಬಿಲ' ಎಂಬುದರ ಸವೆದ ರೂಪವು ಓಬಳ ಎಂದಾಗುತ್ತದೆ ಎಂದರೆ ಇದರಿಂದ ಅಹೋಬಲೇಶ್ವರನ ಜನಾದರಣೀಯತೆ ಮನದಟ್ಟಾಗುತ್ತದೆ. ದೇವಾಲಯದಲ್ಲಿ ದುಂಡನೆಯ ಶಿಲೆಯಿದ್ದು 'ಸಾಲಿಗ್ರಾಮ'ವನ್ನು ಹೋಲುತ್ತದೆ. ಇದನ್ನು 'ಉದ್ಭವ ನರಸಿಂಹ'ನೆಂದೂ ಸಹಾ ಕರೆಯುತ್ತಾರೆ.

ಮಾಯಕೊಂಡವು ಚಾಲುಕ್ಯ ಹೊಯ್ಸಳ ಮತ್ತು ವಿಜಯನಗರದ ಅರಸರ ಕಾಲದಲ್ಲಿ ತನ್ನ ವೈಭವದ ಪರಾಕಾಷ್ಠತೆಯನ್ನು ತಲುಪಿದ್ದುದ್ದು ಗೊತ್ತಾಗುತ್ತದೆ. ಊರಿನ ಕೋಟೆಯನ್ನು ಹಿರೇಮದಕರಿ ನಾಯಕನು ಕಟ್ಟಿಸಿದ್ದಾಗಿದ್ದು ಇದೊಂದು ಚಾರಿತ್ರಿಕ ಗುಣವನ್ನು ಹೊಂದಿರುತ್ತದೆ. ಈತನ ಮೇಲಣ ಗೌರವ ಭಾವನೆಯ ದ್ಯೋತಕವಾಗಿ ಈತನ ಸಮಾಧಿಯನ್ನು ಇಲ್ಲಿ ಕಾಪಾಡಿಕೊಂಡು ಬರಲಾಗಿದೆ.

## ಹಾವೇರಿ ಜಿಲ್ಲೆ

# ರಾಣಿಬೆನ್ನೂರು

ಬೆಂಗಳೂರಿನಿಂದ ಪುಣೆ ಮಾರ್ಗದಲ್ಲಿರುವ ರಾಣಿಬೆನ್ನೂರು ಈಗ ಹಾವೇರಿ ಜಿಲ್ಲೆಗೆ ಸೇರಿರುತ್ತದೆ. ಮೊದಲು ಧಾರವಾಡ ಜಿಲ್ಲೆಗೆ ಸೇರಿದ್ದ ಇದು ಬೆಂಗಳೂರಿಗೆ ಸುಮಾರು ಮೂರುನೂರಾ ಎಪ್ಪತ್ತೈದು ಕಿಲೋಮೀಟರ್ ದೂರದಲ್ಲಿದೆ. ರಾಷ್ಟ್ರೀಯ ಹೆದ್ದಾರಿಯಲ್ಲಿ ಇರುವ ಈ ಪಟ್ಟಣವು ತಕ್ಕ ಸೌಲಭ್ಯಗಳಿಂದ ಕೂಡಿದ್ದು ಪ್ರಯಾಣಿಕರಿಗೆ ಕನಿಷ್ಟ ಸೌಲಭ್ಯಗಳನ್ನು ನೀಡುತ್ತಿದೆ.

ರಾಣಿಬೆನ್ನೂರಿನಲ್ಲಿರುವ ಶ್ರೀಲಕ್ಷ್ಮೀನರಸಿಂಹ ದೇವಾಲಯವು ಕೋಟೆಯ ಪ್ರದೇಶದಲ್ಲಿ ಎತ್ತರವಾದ ಸ್ಥಳದಲ್ಲಿದೆ. ಇದನ್ನು ಕಲ್ಲು ಹಾಗೂ ಗಾರೆಯಿಂದ ಭದ್ರವಾದ ನಿರ್ಮಿಸಲಾಗಿದೆ. ಸುಮಾರು ಒಂದುನೂರಾ ಹನ್ನೆರಡು ವರ್ಷಗಳ ಕೆಳಗೆ ಕಟ್ಟಲಾದ ಈ ದೇವಸ್ಥಾನಕ್ಕೆ ಕೆಲವು ಶ್ರೀಮಂತ ಕುಟುಂಬಗಳಷ್ಟೇ ಅಲ್ಲದೆ ಅನೇಕ ಬಡಕುಟುಂಬಗಳವರ

ನೆರವೂ ದೊರೆತಿದೆ. ಪ್ರಮುಖವಾಗಿ ಈ ದೇವಾಲಯದ ನಿರ್ಮಾಣಕ್ಕೆ ಕಾರಣಕರ್ತ ರಾದವರೆಂದು ಶ್ರೀ ಆರಳಪ್ಪನಾಯಕ ಗೋಪಾಲಪ್ಪನಾಯಕ ಹಲಗೇರಿಯವರನ್ನು ಗುರುತಿಸಿ ಕೊಂಡು ಬರಲಾಗಿದೆ. ಇವರು ತಮ್ಮ ಸ್ವಂತ ಖರ್ಚಿನಿಂದ ನಿರ್ಮಿಸಿದ ಈ ದೇವಾಲಯ ಇಂದು ಅಭಿವೃದ್ಧಿ ಪಥದಲ್ಲಿ ಸಾಗುತ್ತ ಬಂದಿದೆ.

ಶ್ರೀ ಲಕ್ಷ್ಮೀನರಸಿಂಹದೇವರ ಸುಂದರವಾದ ವಿಗ್ರಹವನ್ನು ಶ್ರೀ ಹಲಗೇರಿ ಅವರು ಸುಪ್ರಸಿದ್ಧ ಆಚಾರ್ಯರೊಬ್ಬರಿಂದ ಕಡೆಯಿಸಿರುತ್ತಾರೆ. ಹತ್ತೊಂಬತ್ತನೆ ಶತಮಾನದ ಎಂಟನೆ ದಶಕದ ಆರಂಭದಲ್ಲಿ ಇದರ ಪ್ರತಿಷ್ಠಾಪನಾಕಾರ್ಯವು ನಡೆದಿರುತ್ತದೆ. ನಂತರದ ಕಾಲದಲ್ಲಿ ಎಂದರೆ ಸುಮಾರು ಒಂದು ಸಾವಿರದ ಎಂಟು ನೂರಾ ತೊಂಬತ್ತರಲ್ಲಿ ಈ ಆಲಯದ ಎಡಬದಿಯಲ್ಲಿ ಶ್ರೀ ಗುರುರಾಘವೇಂದ್ರ ಸಾರ್ವಭೌಮರ ಬೃಂದಾವನ ಪ್ರತಿಷ್ಠೆಯಾಗಿರುತ್ತದೆ. ಇದಲ್ಲದೆ ಶ್ರೀವೆಂಕಟೇಶ ದೇವಸ್ಥಾನ ಮತ್ತು ಒಂದೆರಡು ಸುಪ್ರಸಿದ್ಧ ವಾದ ಮಠಗಳೂ ಇಲ್ಲಿ ಕಂಡುಬರುತ್ತವೆ. ಹೀಗೆ ನರಸಿಂಹಸ್ವಾಮಿಯ ನೆಲೆಯಾಗಿ ಮೊದಲುಗೊಂಡ ರಾಣಿಬೆನ್ನೂರಿನ ಈ ದೇವಾಲಯ ಸಂಕೀರ್ಣವು ಪ್ರಸಿದ್ಧವಾಗಿದೆ.

# ಸವಣೂರು

ಹಾವೇರಿಯಿಂದ ಸುಮಾರು ಮೂವತ್ತಾರು ಕಿಲೋಮೀಟರ್ ದೂರದಲ್ಲಿರುವ ಸವಣೂರಿನಲ್ಲಿ ಶ್ರೀಸತ್ಯಬೋಧ ಶ್ರೀಪಾದಂಗಳವರ ಮಠ ಮತ್ತು ಬೃಂದಾವನಗಳಿವೆ. ಮಾಧ್ವ ಪರಂಪರೆಯಲ್ಲಿನ ಈ ಮಠಕ್ಕೆ ತುಂಬ ಪ್ರಾಮುಖ್ಯತೆಯಿದೆ. ಈ ಸಂಪ್ರದಾಯದ ಶಿಷ್ಯರು ಕರ್ನಾಟಕದ ಅನೇಕ ಭಾಗಗಳಲ್ಲಿ ಹರಡಿಹಂಚಿಹೋಗಿದ್ದಾರೆ. ಆದರೆ ಮಠದ ಬಗ್ಗೆ ಅವರೆಲ್ಲರ ಅಭಿಮಾನ ಪೂಜ್ಯತೆಯ ಭಾವಗಳಿಂದ ಇಲ್ಲಿನ ಮಠವು ಏನಕೇನ ಪ್ರಕಾರೇಣ ಅಭಿವೃದ್ಧಿ ಪಥದಲ್ಲಿ ಸಾಗಿದೆ.

ಸವಣೂರಿನ ಮಠದಲ್ಲಿ ಶ್ರೀಸತ್ಯಬೋಧರ ಬೃಂದಾವನವಿರುವ ಸನ್ನಿಧಿಯು ಎದ್ದು ಕಾಣುವಂತಿರುವುದಾದರೂ ಬಾರದೆ ಹೋಗುವ ಹಾಗಿರುವ ಇಲ್ಲಿನ ನರಸಿಂಹನ ಸನ್ನಿಧಾನವು ಕುತೂಹಲಕರವಾದದ್ದು. ಸಾಧಾರಣವಾದ ರೀತಿಯಲ್ಲಲ್ಲದೆ ಗಮನಿಸಿ ನೋಡಿ ದಾಗ ಮಾತ್ರ ಭಗವಂತನ ನೆಲೆಯನ್ನು ದರ್ಶಿಸಲು ಸಾಧ್ಯವಾಗುವಂತಿರುವುದು ಇಲ್ಲಿನ ವಿಶೇಷವಾಗಿದೆ.

ಮಠದೊಳಕ್ಕೆ ಪ್ರವೇಶಿಸಿದ ಕೂಡಲೇ ಎಡಭಾಗಕ್ಕೆ ಸಾಗಿ ಕೆಳಗಡೆ ನಾಲ್ಕಾರು ಮೆಟ್ಟಿಲಿಳಿದು ಮತ್ತೆ ಬಲಗಡೆಗೆ ಹೊರಳಿದರೆ ಲಕ್ಷ್ಮೀನರಸಿಂಹನ ದಿವ್ಯ ಸನ್ನಿಧಾನವಿದೆ. ಸುಮಾರು ಎರಡು ಅಡಿ ಪದ್ಮಪೀಠದ ಮೇಲೆ ವಿರಾಜಮಾನವಾಗಿರುವ ಶ್ರೀಲಕ್ಷ್ಮೀನರ ಸಿಂಹ ಸ್ವಾಮಿಯು ತನ್ನ ಎಡ ಅಂಕದ ಮೇಲೆ ಲಕ್ಷ್ಮೀದೇವಿಯನ್ನು ಹೊಂದಿದ್ದಾನೆ.

ನಾಲ್ಕು ಕೈಗಳು ಶೋಭಿಸುತ್ತಿವೆ. ಶಂಖ-ಚಕ್ರ, ವರದಹಸ್ತಗಳನ್ನು ಹೊಂದಿರುವ ಸ್ವಾಮಿಯನ್ನು 'ಅಹೋಬಿಲ ಲಕ್ಷ್ಮೀನರಸಿಂಹ'ನೆಂದು ಕರೆಯುತ್ತಿದ್ದಾರೆ. ಪ್ರತಿನಿತ್ಯ ಪೂಜೆ, ಅರ್ಚನೆ, ಪಂಚಸೂಕ್ತಗಳಿಂದ ಭಗವಂತನ ಆರಾಧನೆಯು ಇಲ್ಲಿ ನಡೆಯುತ್ತಿದೆ.

ಸವಣೂರಿನ ಮತ್ತೊಂದು ಗಮನಾರ್ಹ ಸಂಗತಿಯಾಗಿ ನರಸಿಂಹನ 'ದಾರುಶಿಲ್ಪ'ವನ್ನು ಕಾಣಬಹುದು. ಇದು ಗುರುಗಳಿಗೆ ವಿಶೇಷ ಪೂಜೆ, ನೈವೈದ್ಯವನ್ನು ನೀಡುವ ಸ್ಥಳದಲ್ಲಿದೆ. ಸಾಮಾನ್ಯವಾಗಿ ಇಲ್ಲಿನ ಮೂರ್ತಿಗಳು ಮಾತ್ರವೇ ಎಲ್ಲೆಡೆ ಪೂಜೆಗೊಳ್ಳುತ್ತ ಬಂದಿರುವುದಾದರೂ ಶಿಲ್ಪಿಯ ಅಂತರಂಗ ಸ್ವಭಾವವನ್ನೂ ಸೂಕ್ಷ್ಮ ಕಲೆಗಾರಿಕೆಯನ್ನೂ ಪ್ರದರ್ಶಿಸುವಂತೆ ಕಂಡುಬರುವ ದಾರುಶಿಲ್ಪಗಳಿಗೆ ಹತ್ತುಹಲವು ಉದಾಹರಣೆಗಳಿವೆ. ಇವುಗಳಿಂದ ನಮ್ಮ ಸಾಂಸ್ಕೃತಿಕ ಪರಂಪರೆಯ ವಿಶಿಷ್ಟತೆಯ ಅರಿವಾಗುತ್ತದೆ.

# ಕಾಗಿನೆಲೆ

ಕರ್ನಾಟಕ ರಾಜ್ಯದಲ್ಲಿ ಹೊಸದಾಗಿ ರಚಿತವಾಗಿ ಜಿಲ್ಲೆಗಳಲ್ಲಿ ಹಾವೇರಿಯೂ ಸೇರಿದೆ. ಇಲ್ಲಿಗೆ ಸುಮಾರು ಹನ್ನೆರಡು ಕಿಲೋಮೀಟರ್ ದೂರದಲ್ಲಿರುವ ಕಾಗಿನೆಲೆಯು ನಮ್ಮ ದಾಸಶ್ರೇಷ್ಠರಲ್ಲೊಬ್ಬರಾದ ಕನಕದಾಸರ ಜನ್ಮಸ್ಥಳ. ಸುಮಾರು ಹತ್ತು ದೇವಾಲಯಗಳು, ಹದಿನಾರು ಶಾಸನಗಳಿಂದ ಕೂಡಿದ ಈ ಪ್ರದೇಶವನ್ನು ಬನವಾಸಿಯ ಚಾಲುಕ್ಯರು, ದೇವಗಿರಿಯ ಯಾದವರು ಆಳಿರುತ್ತಾರೆ. ಈ ಆಳರಸರ ಕಾಲದಲ್ಲಿ ಕಾಗಿನೆಲೆಯು ಒಂದು ಸಾಂಸ್ಕೃತಿಕ ಕೇಂದ್ರವಾಗಿ ಪ್ರಸಿದ್ಧಿ ಪಡೆಯಿತು. ಈ ವಂಶದವರು ನೀಡಿದ ದಾನ ದತ್ತಿಗಳಿಂದ ಇಲ್ಲಿನ ದೇವಾಲಯ-ಮಂದಿರಗಳು ಉನ್ನತಿ ಹೊಂದಿದವು. ಇವುಗಳಲ್ಲೊಂದು ಇಲ್ಲಿರುವ ಪ್ರಸಿದ್ಧವಾದ ಶ್ರೀ ಲಕ್ಷ್ಮೀನರಸಿಂಹ ದೇವಾಲಯ.

ಕಾಗಿನೆಲೆಯವರೆ ಆದ ಕನಕದಾಸರು ವಿಜಯನಗರದ ಅರಸರ ಕಾಲದಲ್ಲಿ ಇಲ್ಲಿ ದಣಾಯಕರಾಗಿದ್ದರು. ತಮ್ಮ ಪೂರ್ವಾಶ್ರಮದಲ್ಲಿ ಕನಕಪ್ಪ ನಾಯಕರಾಗಿದ್ದ ಇವರು ಅಪಾರವಾದ ಧನ-ಕನಕಗಳನ್ನು ತ್ಯಾಗ ಮಾಡಿ ಭಗವಂತನ ಸೇವೆಯ ದೀಕ್ಷೆ ತೊಟ್ಟರು. ಆದಿಕೇಶವನ ಭಕ್ತರಾದ ಇವರು ಆ ಅಂಕಿತದಲ್ಲಿಯೇ ನೂರಾರು ಕೀರ್ತನೆಗಳನ್ನು ರಚಿಸಿದರು. ಹರಿದಾಸ ಸಾಹಿತ್ಯಕ್ಕೊಂದು ವಿಶೇಷ ಶೋಭೆಯನ್ನುಂಟು ಮಾಡಿದರು.

ಕಾಗಿನೆಲೆಯ ದೇವಾಲಯವು ಮೂಲತಃ ನರಸಿಂಹ ದೇವಾಲಯವೇ ಆಗಿದೆ. ಮಣ್ಣಿನಿಂದ ಕಟ್ಟಲಾಗಿರುವ ಈ ಆಲಯದಲ್ಲಿ ಪ್ರಧಾನವಾಗಿ ನರಸಿಂಹಸ್ವಾಮಿಯನ್ನು ಕಾಣಬಹುದಾದರೆ, ಎಡಗಡೆಗೆ ಕೇಶವನನ್ನು ಪ್ರತಿಷ್ಠೆ ಮಾಡಲಾಗಿದೆ.

ಕನಕದಾಸರ ಸಾಹಿತ್ಯವು ಉತ್ಕೃಷ್ಟವಾದ ಸವಿಯಿಂದ ಕೂಡಿದೆ. ಇವುಗಳು ಅಧ್ಯಾತ್ಮದ ಸೊಗಡಿನಿಂದ ತುಂಬಿವೆ. ಭಗವಂತನ ಮಹಿಮೆಯ ಹೂರಣವನ್ನು ಹೊಂದಿವೆ. ಕನಕದಾಸರು

ತಮ್ಮ ಕೀರ್ತನೆಗಳಲ್ಲಿ ಆದಿಕೇಶವನನ್ನು ಹಾಡಿ ಹೊಗಳಿದ್ದಾರಲ್ಲದೆ ವಿಷ್ಣುವಿನ ಅವತಾರಗಳನ್ನು ಸಹ ಸ್ತುತಿಸಿದ್ದಾರೆ. ನರಸಿಂಹಾವತಾರವನ್ನು ಕುರಿತ ಕೀರ್ತನೆಗಳಿಗೆ ಕಾಗಿನೆಲೆಯ ಸ್ವಾಮಿಯೇ ಸ್ಫೂರ್ತಿದಾಯಕನಾಗಿದ್ದಾನೆಂದು ಹೇಳಬಹುದು. ಇಂತಹ ಮಹಿಮೆಯಿಂದ ಕೂಡಿ ಈ ನರಸಿಂಹನು ಅನೇಕರ ಆರಾಧ್ಯದೈವವಾಗಿ ಕಂಗೊಳಿಸುತ್ತಿದ್ದಾನೆ.

ಕಾಗಿನೆಲೆಯ ಸಂಸ್ಥೆಗೆ 'ಶ್ರೀಲಕ್ಷ್ಮೀನರಸಿಂಹಾದಿಕೇಶವ ದೇವಸ್ಥಾನ' ವೆಂದು ಹೆಸರು. ಕನಕದಾಸರು ತಮ್ಮ ಮೋಹನ ತರಂಗಿಣಿಯಲ್ಲಿ ಈ ರೀತಿ ಹೇಳಿರುತ್ತಾರೆ- 'ಯೋಗಿ ಹೃತ್ಕಮಾಲಾಸನ ಕಾಗಿನೆಲೆಯ ನರಸಿಂಹಾದಿಕೇಶವನಾಗಿಪ ಜನಮನೋರಥವ' ಆದಿಕೇಶವನ ಹೆಸರು ನರಸಿಂಹದೇವರೊಂದಿಗೆ ಸಮಾಸರೂಪದಲ್ಲಿ ಉಪಯೋಗಿಸಲಾಗಿದೆ. ಕಾಗಿನೆಲೆಯಲ್ಲಿ ಮೊದಲು ನರಸಿಂಹನ ದರ್ಶನ ತೆಗೆದುಕೊಂಡು ಆದಿಕೇಶವನ ದರ್ಶನಕ್ಕೆ ಹೋಗುವ ವಾಡಿಕೆಯಿದೆ. ನರಸಿಂಹನು ಆದಿಕೇಶವನಿಗಿಂತ ಹಳೆಯವನು. ಇಲ್ಲಿ ಕೇಶವ ಪ್ರಥಮನಾದರೂ ಪ್ರಭುತ್ವ ನರಸಿಂಹನದೆಂದು ಹೇಳಬಹುದೇನೋ.

# ಬಂಕಾಪುರ : ವೀರನರಸಿಂಹ

ಬಂಕಾಪುರವು ಧಾರವಾಢ ಜಿಲ್ಲೆ ಶಿಗ್ಗಾಂವಿಗೆ ಸೇರಿದ ಒಂದು ಗ್ರಾಮ. ಹುಬ್ಬಳ್ಳಿ ರಸ್ತೆಯಲ್ಲಿ ಹಾವೇರಿಗೆ ನಿಕಟವಾಗಿದೆ. ಈ ಊರಿಗೆ ಬರಬೇಕಾದರೆ ರಾಷ್ಟ್ರೀಯ ಹೆದ್ದಾರಿ ಯಿಂದ ಸುಮಾರು ೨ ಕಿ.ಮೀ. ಉಪರಸ್ತೆಯಲ್ಲಿ ಪ್ರವೇಶಿಸಬೇಕು. ಊರಿನ ಅಂಚೆ ಕಚೇರಿಯ ಸಮೀಪದಲ್ಲಿ ನರಸಿಂಹನ ಸನ್ನಿಧಾನವಿದೆ. ಹೊರನೋಟಕ್ಕೆ ಇಲ್ಲಿ ಯಾವುದೇ ದೇವಾಲಯವಿರುವುದರ ಕುರುಹು ಕಾಣದು. ಸ್ವಾಮಿಯು ನೆಲೆಸಿರುವ ಸ್ಥಳಕ್ಕೆ ಬ್ರಾಹ್ಮಣ ಕೇರಿಯೆಂದು ಹೇಳುತ್ತಾರೆ. ಅರ್ಚಕರ ಮನೆಗೆ ಹೊಂದಿಕೊಂಡಿರುವ ವಿಶಾಲವಾದ ಹಜಾರ ದಲ್ಲಿ ದೇವರ ಸನ್ನಿಧಾನವಿದೆ.

ದೇವಾಲಯದಂತಿರದೆ ಪೂಜಾಗೃಹದಂತೆ ಕಾಣುತ್ತಿರುವುದು ಈ ಸ್ಥಳದ ವೈಶಿಷ್ಟ್ಯ ತೋರವೆಯ ನರಸಿಂಹನ ದರ್ಶನ ಬಯಸುವವರು ನೆಲಮಾಳಿಗೆಯನ್ನು ಪ್ರವೇಶಿಸುವ ರೀತಿಯಲ್ಲಿ, ಇಲ್ಲಿರುವ ಸ್ವಾಮಿಯನ್ನು ಆರಾಧಿಸುವವರು ಮೆಟ್ಟಿಲುಗಳನ್ನಿಳಿದು ಹೋಗಬೇಕು. ಇಲ್ಲಿ ಶೋಭಿಸುತ್ತಿದ್ದಾನೆ ಅಷ್ಟಭುಜ ನರಸಿಂಹ. ಉಗ್ರ ಅಥವಾ ವೀರ ಭಾವನೆಯಿಂದ ತನ್ನ ತೊಡೆಯಮೇಲೆ ಹಿರಣ್ಯಕಶಿಪುವನ್ನು ಕೆಡವಿ ಕೊಂಡು ಅವನನ್ನು ಸೀಳಿ ಕೊರಳಮಾಲೆ ಯನ್ನು ಧರಿಸುತ್ತಿದ್ದಾನೆ. ಸುಮಾರು ಎರಡೂವರೆ ಅಡಿ ಎತ್ತರವಿರುವ ಶಿಲಾಮೂರ್ತಿಯನ್ನು ಒಂದುಅಡಿ ಪೀಠದ ಮೇಲೆ ಪ್ರತಿಷ್ಠೆ ಮಾಡಿದ್ದಾರೆ. ಮೂರ್ತಿಯ ಕೆಳಭಾಗದಲ್ಲಿ ಅದೇ ಶಿಲೆಯಲ್ಲಿ ಲಕ್ಷ್ಮೀದೇವಿ ಮತ್ತು ಪ್ರಹ್ಲಾದನನ್ನು ಎರಡು ಬದಿಗೆ ನಯವಾಗಿ ಕೆತ್ತಿರುತ್ತಾರೆ.

ಬಂಕಾಪುರದ ನರಸಿಂಹ ದೇವರಿಗೆ ಸುಮಾರು ಐದುನೂರು ವರ್ಷಗಳ ಪ್ರಾಚೀನತೆ ಯಿರುವುದಾಗಿ ತಿಳಿದುಬರುತ್ತದೆ. ಯತಿಸಾರ್ವಭೌಮರಲ್ಲಿ ಶ್ರೇಷ್ಠರಾದ ಶ್ರೀಪಾದರಾಜರು

ಈ ಸ್ವಾಮಿಯನ್ನು ಸ್ತುತಿಸಿದ್ದಾರೆ. ವಾದಿರಾಜ ಯತಿಗಳು ಈ ಸ್ಥಳಕ್ಕೆ ಭೇಟಿ ನೀಡಿದ್ದಾರೆ. ಜಗನ್ನಾಥದಾಸರು ಇಲ್ಲಿ ಕೆಲವು ಕಾಲ ನೆಲೆಸಿದ್ದವರಾಗಿದ್ದಾರೆ. ಈ ರೀತಿಯಲ್ಲಿ ಪರಂಪರಾನು ಗತವಾಗಿ ಆರಾಧನೆಗೊಳ್ಳುತ್ತಿರುವ ಇಲ್ಲಿನ ನರಸಿಂಹನ ಸ್ಥಾಪನೆಯ ಬಗ್ಗೆ ಪ್ರಚಲಿತವಾದ ಘಟನೆಯೊಂದನ್ನು ಇಂದಿನವರು ಸ್ಮರಿಸಿಕೊಳ್ಳುತ್ತಾರೆ.

ಸುಮಾರು ಏಳೆಂಟು ತಲೆಮಾರುಗಳ ಹಿಂದಿನ ವಿಚಾರ ಸರಣಿ ಈ ನೆನಪಿನ ಸುರುಳಿಯಲ್ಲಿ ಅಡಕವಾಗಿದೆ. ಆಗ ಮತ್ತು ಈಗಲೂ ಸಹ ಪೂಜಾರ ವಂಶದವರ ಆರಾಧ್ಯದೇವರು ತೊರವೆ ನರಸಿಂಹ. ಈ ವಂಶಸ್ಥರು ಪ್ರತಿವರ್ಷವೂ ನರಸಿಂಹ ಜಯಂತಿ ಯಂದು ತೊರವೆಗೆ ಹೋಗಿ ಯಥೋಚಿತ ರೀತಿಯಲ್ಲಿ ಭಗವಂತನನ್ನು ಆರಾಧಿಸುತ್ತಿದ್ದರು. ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಆದರೆ ವೃಧ್ಧಾಪ್ಯದ ಬಲವಾದ ಕಾರಣದಿಂದ ಇವರ ವಂಶದ ಪ್ರಸಿದ್ಧ ವ್ಯಕ್ತಿಯೊಬ್ಬರಿಗೆ ತೊರವೆಗೆ ಹೋಗಲು ಸಾಧ್ಯವಾಗಲಿಲ್ಲ. ಇದ ರಿಂದಾಗಿ ಇವರ ಮನಸ್ಸಿಗೆ ಅಪಾರವಾದ ವ್ಯಥೆಯುಂಟಾಯಿತು. ಅವರು ದೇವರಲ್ಲಿ ಮೊರೆ ಹೋದರು. ಆತನ ದರ್ಶನಕ್ಕಾಗಿ ಹಂಬಲಿಸಿದರು.

ಒಂದು ದಿನ ಅವರ ಕನಸಿನಲ್ಲಿ ಸ್ವಾಮಿಯು ಪ್ರತ್ಯಕ್ಷನಾಗಿ ಅವರು ಇದಕ್ಕಾಗಿ ದುಃಖ ಪಡಬಾರದೆಂದು ತಾನೇ ಅವರಲ್ಲಿ ಬರುತ್ತೇನೆಂದು ಆಶ್ವಾಸನೆ ನೀಡುತ್ತಾನೆ. ನದಿಯ ತೀರದಲ್ಲಿರುವ ತನ್ನನ್ನು ಅಲ್ಲಿಂದ ತಂದು ಅವರ ಊರಿನಲ್ಲಿಯೇ ಪ್ರತಿಷ್ಠೆ ಮಾಡಬೇಕೆಂದು ಅಪ್ಪಣೆಯಾಯಿತು. ಸಂಪ್ರದಾಯನಿಷ್ಠರಾದ ಆಚಾರ್ಯರು ತಮ್ಮ ಭಕ್ತರ ಸಮೂಹದೊಂದಿಗೆ ಸ್ವಾಮಿಯು ನಿರ್ದೇಶಿಸಿದ ನದಿತೀರಕ್ಕೆ ಹೋಗಿ ಅಲ್ಲಿ ಶಿಲಾ ರೂಪದಲ್ಲಿದ್ದ ಸ್ವಾಮಿಯನ್ನು ತಂದು ಈಗಿನ ಸ್ಥಳದಲ್ಲಿ ಪ್ರತಿಷ್ಠೆ ಮಾಡಿರುತ್ತಾರೆ. ಬಂಕಾಪುರಕ್ಕೆ ಸಮೀಪದಲ್ಲಿರುವುದು ವರದಾನದಿಯೇ ಆದ್ದರಿಂದ ಅಲ್ಲಿನ ದೈವವು ಊರಿನೊಳಗೆ ಬಂದು ನೆಲೆಸಿದ್ದಾನೆಂದು ಹೇಳಬಹುದು.

## ವರದಾತೀರ

ಪ್ರವಾಸಕೃತಿಯನ್ನು ಸಂಸ್ಕೃತದಲ್ಲಿ ಮೊದಲಬಾರಿಗೆ ರಚಿಸಿದ ವಾದಿರಾಜಯತಿಗಳು ಬಂಕಾಪುರಕ್ಕೆ ಆಗಮಿಸಿ ಇಲ್ಲಿನ ಕೇಶವನನ್ನು ಮತ್ತು ವರದಾ ನದಿಗಳೆರಡನ್ನು ಸ್ತುತಿಸಿ ಭಜಿಸಿದ್ದಾರೆ. ಕಾಗಿನೆಲೆಯಲ್ಲಿರುವ ಆದಿಕೇಶವನೇ ಮೂಲತಃ ಬಂಕಾಪುರದ ಕೇಶವ ಎಂದೂ ಕೆಲವರು ಪ್ರತಿಪಾದಿಸುತ್ತಾರೆ. ವರದಾನದಿಯ ಮೂಲಸ್ಥಳ ಇಕ್ಕೇರಿಯ ಸಮೀಪ ದಲ್ಲಿದೆ. ಈ ನದಿಯು ಸುಮಾರು ೧೮೫ ಕಿ.ಮೀ ಉದ್ದವಾಗಿ ಹರಿಯುತ್ತದೆ. ಹಾವೇರಿ ತಾಲೂಕಿನ ಗಳಗನಾಥದ ಸಮೀಪದಲ್ಲಿ ತುಂಗಭದ್ರ ನದಿಗೆ ಸೇರುತ್ತದೆ. ವರದಾನದಿಯ ಬಗ್ಗೆ ಸ್ಥಳ ಪುರಾಣದಲ್ಲಿ ಪ್ರಸಿದ್ಧಿ ಇದೆ.

ಶಿವನು ತನಗೆ ಉಂಟಾದ ಬ್ರಹ್ಮಹತ್ಯಾದೋಷದಿಂದ ವಿಮುಕ್ತನಾಗಲು ಶೃಂಗಋಷಿಯ ಆಶ್ರಮದಲ್ಲಿ ತಪೋನಿರತನಾಗಿರುತ್ತಾನೆ. ಈ ಆಶ್ರಮವು ವರದಾ ನದಿಯ ಮೂಲದಲ್ಲಿದ್ದ

ದ್ದೆಂಬ ನಂಬಿಕೆ ಜನಪದದಲ್ಲಿದೆ. ಹೀಗಿರುವಲ್ಲಿ ನಾರಾಯಣನು ಭಾಗಿರಥಿ ಜಲವನ್ನು ಆತನ ಎಂದರೆ ತಪೋನಿರತನಾಗಿದ್ದ ಶಿವನ ತಲೆಯ ಮೇಲೆ ಸುರಿದು ಅನುಗ್ರಹಿಸುತ್ತಾನೆ. ಈ ರೀತಿ ಸುರಿದ ಅಭಿಷೇಕ ಜಲವು ವರದಾನದಿಯಾಯಿತೆಂದು ಪುರಾಣವು ಹೇಳುತ್ತದೆ.

## ಶ್ರೀಪಾದರಾಜರ ಸ್ತುತಿ

ಶ್ರೀಪಾದರಾಜರು ಯತಿಸಾರ್ವಭೌಮರಾಗಿದ್ದು ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡಿದ್ದಾರೆ. ಇವರು ರಚಿಸಿದ ಕೀರ್ತನೆ, ಹಾಡು, ದಂಡಕಗಳಿಗೆ ಕನ್ನಡ ಸಾಹಿತ್ಯದಲ್ಲಿ ವಿಶೇಷ ಮನ್ನಣೆಯಿದೆ. ಇವರ ರಚನೆಯಾದ 'ದುರಿತಗಜ ಪಂಚಾನನ ಹರಿಯ ದೇವರ ದೇವ ಕಾಯೋ ಗೋವಿಂದ' ಎಂಬಲ್ಲಿ ನರಸಿಂಹನ ಸ್ಮರಣೆಯಿದೆ. ಬಂಕಾಪುರದ ವೀರನರಸಿಂಹ ನನ್ನು ಕಂಡಾಗ ಇವರ ಆತ್ಮಭಾವವು ಮುಗಿಲು ಮುಟ್ಟಿರುವುದನ್ನು ಒಂದು ಕೀರ್ತನೆಯಲ್ಲಿ ವರ್ಣಿಸಲಾಗಿದೆ. ಭಗವಂತನ ಸನ್ನಿಧಿಯಲ್ಲಿ ಅವರ ಮೊರೆ 'ಗಂಗಾಸಲಿಲ'ದಂತೆ ಹರಿದಿರು ವುದನ್ನು ಗಮನಿಸಬಹುದಾಗಿದೆ.

*ಆರುಗತಿ ನಿನಗಧಿಕರಾರು ಧಾರುಣಿಯೊಳಗೆ*
*ತೋರಿಸೈ-ಕರುಣ-ನಿಧಿಯೆ ಕೃಷ್ಣ*
*ಈರೇಳು ಲೋಕಾಧಾರವಾದವಗೆ ಬಲು*
*ಭಾರವಾದವನೆ ನಾನು ಕೃಷ್ಣ*
*ಮೀರಿ ನುಡಿಯಲು ಹದಿನಾರೆರಡು ಪಲ್ಗ(ಳು)*
*ಬೇರು ಕಳಕಳಯಿತೋ ಕೃಷ್ಣ*
*ತೋರು ಬಂಕಾಪುರದ ಧಾರುಣಿಪುರವಾಸ*
*ವೀರನರಸಿಂಹದೇವ ಕೃಷ್ಣ*

(ಶ್ರೀಪಾದರಾಜರ ಕೃತಿಗಳು ಪುಟ- 54)

ಬಂಕಾಪುರಕ್ಕೆ ಸಮೀಪದಲ್ಲಿಯೇ ಇರುವ ಸವಣೂರು ಮತಧರ್ಮೀಯರ ಪವಿತ್ರ ವಾದ ಕ್ಷೇತ್ರ, ಇಲ್ಲಿ ಸತ್ಯಭೋದರ ವೃಂದಾವನವಿದೆ. ಸತ್ಯಭೋದರ ಚರಿತ್ರೆಯಲ್ಲಿ ಕಂತಿ ಪಂಡಿತರು ಬರೆದಿರುವ ನರಸಿಂಹನ ಸ್ತೋತ್ರವೂ ಸಹ ಈ ಕ್ಷೇತ್ರದಲ್ಲಿಯೇ ನೆಲೆಸಿ ಭವ ಬಂಧನಗಳನ್ನು ಕಳೆದು ದುರಿತ ನಿವಾರಕನಾದ ನರಸಿಂಹನ ಅನುಗ್ರಹದ ಸ್ತುತಿ ಯಾಗಿರುತ್ತದೆ.

ತೊರವೆಗೆ ಹೋಗಲಾಗದವರು ಬಂಕಾಪುರಕ್ಕೆ ಬಂದು ಇಲ್ಲಿನ ವೀರನರಸಿಂಹನನ್ನು ಭಜಿಸಿ ಆರಾಧಿಸಿ ಸೇವೆಸಲ್ಲಿಸುವುದರಿಂದ ಕ್ಲೇಶನಿವಾರಣೆಯಾಗುವುದೆಂಬುದು ಅತಿಶಯೋಕ್ತಿ ಯಾಗಲಾರದು. ಬಂಕಾಪುರಕ್ಕೆ ಬಂದು ಹೋಗುವ ಯಾತ್ರಾರ್ಥಿಗಳಿಗೆ ಸಾಕಷ್ಟು ಸಂಖ್ಯೆ ಯಲ್ಲಿ ವಾಹನ ಸೌಕರ್ಯದ ಅನುಕೂಲವಿದೆ.

## ...ಣ ಕನ್ನಡ ಜಿಲ್ಲೆ

# ಉಪ್ಪಿನಂಗಡಿ : ನರಸಿಂಹಕ್ಷೇತ್ರ

...ಂತನ ರೂಪಗಳು ಲೆಕ್ಕವಿಲ್ಲದಷ್ಟಿವೆ. ಒಬ್ಬನೇ ದೇವರನ್ನು ನಾನಾ ಬಗೆಯಲ್ಲಿ ...ದ್ಧತಿಯೂ ಪ್ರಚಲಿತವಾಗಿದೆ. ನರಸಿಂಹ ಆರಾಧನೆಯನ್ನೇ ನಿದರ್ಶನವಾಗಿಟ್ಟು ...ಸುವುದಾದರೆ ಹುತ್ತದಲ್ಲಿ, ವೃಕ್ಷದಲ್ಲಿ, ಅಸ್ಪಷ್ಟವಾದ ಕಲ್ಲಿನ ಆಕಾರದಲ್ಲಿ, ... ರೂಪದಲ್ಲಿ ಈತನನ್ನು ಪೂಜಿಸುತ್ತಿದ್ದಾರೆ. ಲಿಂಗಾಕಾರದಲ್ಲಿ ನರಸಿಂಹನನ್ನು ...ಗೆ ತಮ್ಮ ಭಕ್ತಿಪೂರ್ವಕವಾದ ಗೌರವ ನಮನಗಳನ್ನು ಸಲ್ಲಿಸುತ್ತಿರುವ ...ಕ್ಷಿಣ ಕನ್ನಡ ಜಿಲ್ಲೆ ಉಪ್ಪಿನಂಗಡಿ ಬಳಿಯಲ್ಲಿ ಕಾಣಬಹುದು. ನೇತ್ರಾವತಿ 'ಕಡೇ ಶಿವಾಲಯ'ವೆಂದು ಪ್ರಖ್ಯಾತವಾದ ಇದು ನರಸಿಂಹನ ನೆಲೆಯಾಗಿಯೂ ...ೆ. ಅಷ್ಟಮಠಗಳಲ್ಲಿ ಒಂದಾದ ಸೋದೆಯ ಯತಿವರೇಣ್ಯ ಶ್ರೀವಾದಿರಾಜರು ...ನ ಸ್ವಾಮಿಯನ್ನು ಆರಾಧಿಸಿ ಕೊಂಡಾಡಿದ್ದಾರೆ. 'ಚಿಂತಾಮಣಿ ನರಸಿಂಹ' ಈತನಿಗಿರುವುದು ವಾದಿರಾಜರ ಸ್ತೋತ್ರದಿಂದ ತಿಳಿದುಬರುತ್ತದೆ.

...ನಂಗಡಿಯಿಂದ ಸುಮಾರು ಹತ್ತು ಕಿ.ಮೀ. ದೂರದಲ್ಲಿ ...ಡೇಶ್ವಾಲ್ಯ ಕ್ಷೇತ್ರವನ್ನು ಗುರುತಿಸಬಹುದಾಗಿದೆ. ಇದು ವಾಸ್ತವವಾಗಿ ಶಿವಾಲಯ...ೇ ...ಲ್ಲಿ ಬಲಗಡೆಗೆ ಶ್ರೀವಾದಿರಾಜ ಪ್ರತಿಷ್ಠಿತನಾದ ಮುಖ್ಯ ಪ್ರಾಣದೇವರನ್ನು ...ೆ ದೈವವಾದ ಭೂತರಾಜನನ್ನು ಸಂದರ್ಶಿಸಬಹುದಾಗಿದೆ. ಶಿವಾಲಯವಾದರೂ ...ತ್ರವೆಂದು ಹೇಳಿರುವುದು ಕುತೂಹಲಕರವಾದ ಸಂಗತಿಯಾಗಿದೆ. ಇಲ್ಲಿಗೆ ...ಕ್ಷೇತ್ರ ಮಹಿಮೆಗಳನ್ನು, ಐತಿಹ್ಯಗಳನ್ನು ಗಮನಿಸುವುದರ ಮೂಲಕ ಇದರ ಅರಿತುಕೊಳ್ಳಬಹುದು.

...ನಂಗಡಿಯನ್ನು ದಕ್ಷಿಣಕಾಶಿಯೆಂದು ಕರೆಯಲಾಗಿದೆ. ಇದಕ್ಕೆ 'ಗಯಾಪದ'ವೆಂಬ ...ಹೆಸರನ್ನು ಹೇಳುತ್ತಾರೆ. ಕುಮಾರಧಾರಾ ಮತ್ತು ನೇತ್ರಾವತೀ ನದಿಗಳ ...ಳಿ ಸಹಸ್ರ ಲಿಂಗೇಶ್ವರನು ನರಸಿಂಹನೊಡನೆ ಕೂಡಿಕೊಂಡಿರುವನೆಂಬ ...ಳಪುರಾಣದಲ್ಲಿ ತಿಳಿಸಿದ್ದಾರೆ. ನೇತ್ರಾವತಿಯ ಪಾತ್ರದಲ್ಲಿರುವ ಕಡೇಶ್ವಾಲ್ಯದಲ್ಲಿ ...ರಸಿಂಹಲಿಂಗಗಳೆರಡೂ ಒಟ್ಟಿಗಿರುವುದು. ಸಹಸ್ರಲಿಂಗೇಶ್ವರ ಕ್ಷೇತ್ರದಿಂದ ...ಗಿನ ಪ್ರದೇಶವು ಪವಿತ್ರವಾದದ್ದೆಂದು ಭಾವಿಸುತ್ತಾರೆ. ಇಲ್ಲಿನ ನದೀತೀರದಲ್ಲಿನ ಶಿವಲಿಂಗಗಳೆಂದೇ ಭಕ್ತಿಯಿಂದ ಕಾಣುತ್ತಾರೆ. ಈ ಕಲ್ಲುಗಳನ್ನು ತಮ್ಮೊಂದಿಗೆ ...ಾಪಕರವೆಂದು ಭಾವಿಸಲಾಗುತ್ತದೆ. 'ಕಡೇಶಿವಾಲಯವೆಂದು ನಿನ್ನ ಹೆಸರಿನಿಂದ ...ರಸಿಂಹ ಕ್ಷೇತ್ರವು ಪ್ರಸಿದ್ಧವಾಗಲಿ'- ಎಂಬುದು ಶಿವನಿಗೆ ನರಸಿಂಹನ ...ೆ.

# ಪುರಾಣದ ಹಿನ್ನೆಲೆ

ಸ್ಥಳಪುರಾಣದ ಸಾರಾಂಶವನ್ನು ಇಲ್ಲಿ ಸಂಗ್ರಹಿಸಿಕೊಡಬಹುದಾಗಿದೆ. ಈ ಹಿಂದೆ ತ್ರೇತಾಯುಗದಲ್ಲಿ ಸಿಂಹಾನನೆ ಮೊದಲಾದ ಅರವತ್ತನಾಲ್ಕು ಸಾವಿರ ಯೋಗಿನಿಯರು ಶಿವನನ್ನು ಕುರಿತು ಕಠೋರವಾದ ತಪಸ್ಸನ್ನು ಆಚರಿಸಿದರು. ಈಶ್ವರನೇ ತಮ್ಮ ಪತಿಯಾಗ ಬೇಕೆಂದು ಅವರು ನೂರು ವರ್ಷಗಳ ಸುದೀರ್ಘಕಾಲದ ತಪಸ್ಸನ್ನು ಮಾಡಿದಲ್ಲಿ ಸದಾ ಶಿವನು ಪ್ರತ್ಯಕ್ಷನಾಗಿ ಅವರಿಗೆ ಬೇಕಾದ ವರವನ್ನು ಬೇಡಲು ತಿಳಿಸಿದನು. ಆಗ ಅವರು ಶಿವನಿಗೆ ಅವನೇ ತಮ್ಮನ್ನು ವರಿಸಬೇಕೆಂದು ವಿನಂತಿಸಿದರು. ಆತನು ಹಾಗೆಯೇ ಆಗಲೆಂದು ಅವರ ಬೇಡಿಕೆಯನ್ನು ಮನ್ನಿಸಿ ಕೈಲಾಸವನ್ನು ಸೇರಿದನು. ಯೋಗಿನಿಯರು ಶಿವನನ್ನೇ ಹಿಂಬಾಲಿಸಿ ಹೋದರು. ಅವರ ಅಬ್ಬರವನ್ನು ನೋಡಿದ ಶರ್ವಾಣಿಯು ಬೇಸರಗೊಂಡು ಅವರನ್ನು ಭೂತನಾಯಕರ ನೆರವಿನಿಂದ ಹೊಡೆದು ಓಡಿಸಲು ಪ್ರಯತ್ನಪಟ್ಟಳು. ತನಗೆ ಒದಗಿ ಬಂದ ಸಂಕಷ್ಟದಿಂದ ತನ್ನನ್ನು ಪಾರುಗಾಣಿಸಲು ಸದಾಶಿವನು ದುರಿತನಿವಾರಣನಾದ ನರಸಿಂಹನನ್ನು ಧ್ಯಾನಿಸಿದನು. ಆತನ ಸ್ಮರಣೆಗೆ ಒಲಿದು ಬಂದ ನರಸಿಂಹನು ಶಿವನಿಗೆ 'ನರಸಿಂಹ ಗಾಯತ್ರಿ' ಮಂತ್ರದ ಉಪದೇಶವನ್ನು ನೀಡಿದನು. ಶಂಕರನಿಗೆ ಮೂರು ವರ್ಷಕಾಲ ಭೂಮಿಯಲ್ಲಿ ಸಂಚರಿಸುವಂತೆ ತಿಳಿಸಿದನು. ಅವನನ್ನು ಯೋಗಿನಿಯರೂ ಹಿಂಬಾಲಿಸುವರೆಂದೂ, ಶಿವನು ಇದನ್ನು ಪರಿಗಣಿಸಿದೆ ಪರಶುರಾಮ ಕ್ಷೇತ್ರಕ್ಕೆ ಹೋಗ ಬೇಕೆಂದೂ, ಉಪ್ಪಿನಂಗಡಿ (ಗಯಾಪದ) ಮೂಲಕವಾಗಿ ತಾನು ನೆಲೆಸಿರುವ ಸ್ಥಳಕ್ಕೆ ಬರಬೇಕೆಂದು ತಿಳಿಸುವನು. ಅಲ್ಲಿ ತನ್ನನ್ನು ಕುರಿತು ಧ್ಯಾನಮಾಡಿದಾಗ ತಾನು ಕೂಡಲೇ ಬಂದು ಯೋಗಿನಿಯರನ್ನು ಸಂಹರಿಸಿ ತೊಂದರೆಯನ್ನು ಪರಿಹರಿಸುತ್ತೇನೆಂದು ವಚನ ನೀಡುವನು. ಈ ರೀತಿಯಲ್ಲಿ ನಿರ್ಭೀತನಾದ ಪಾರ್ವತಿಯ ಒಡೆಯನಿಗೆ ಒದಗಿಬಂದ ಭೀತಿ ನಿವಾರಣಾ ಸ್ಥಳವಾಗಿ ಕಡೇಶ್ವಾಲ್ಯವು ಪ್ರಸಿದ್ಧವಾಗಿರುವುದೆಂದು ಪುರಾಣ ಪ್ರಸಂಗದಿಂದ ತಿಳಿದುಬರುವುದು. ಇದು ಕಾರಣವಾಗಿ ನರಸಿಂಹನು ಲಿಂಗರೂಪದಲ್ಲಿ ಇಲ್ಲಿ ವಿರಾಜಿಸು ತ್ತಿದ್ದಾನೆ.

ತ್ರೇತಾಯುಗವು ಅಂತ್ಯಗೊಂಡು ದ್ವಾಪರವು ಆರಂಭವಾದಾಗ ಮತ್ತೊಂದು ಪ್ರಸಂಗವು ಇಲ್ಲಿ ನಡೆದಿರುವುದು ತಿಳಿದುಬರುತ್ತದೆ. ಶಾಂಡಿಲ್ಯನೆಂಬ ಮಹರ್ಷಿಯು ಇಲ್ಲಿಂದ ಎರಡು ಹರದಾರಿ ದೂರದ ಅನಂತನಾಡಿಯಲ್ಲಿ ತಪಸ್ಸಿನಲ್ಲಿ ನಿರತನಾಗಿರುತ್ತಾನೆ. ಆತನ ದೀರ್ಘಕಾಲದ ತಪಸ್ಸಿಗೆ ಅನುಗ್ರಹಿಸಿ ಬ್ರಹ್ಮದೇವನು ಆ ಶಾಂಡಿಲ್ಯ ಮುನಿಗೆ ಚಿಂತಾಮಣಿಯಂತಿರುವ ನಾನಾರತ್ನ ವಿಭೂಷಿತವಾದ ಒಂದು ನರಸಿಂಹ ಸಾಲಿಗ್ರಾಮವನ್ನು ನೀಡುತ್ತಾನೆ. ಈ ಸಾಲಿಗ್ರಾಮಕ್ಕೂ ಚಿಂತಾಮಣಿಯೆಂದು ಹೆಸರಿರುತ್ತದೆ.

ಬ್ರಹ್ಮದೇವನು ಪ್ರಸಾದಿಸಿದ ಸಾಲಿಗ್ರಾಮವನ್ನು ಪ್ರತಿನಿತ್ಯವೂ ಶುಚಿರ್ಭೂತನಾದ ಶಾಂಡಿಲ್ಯನು ಪೂಜೆಮಾಡುತ್ತಿರುತ್ತಾನೆ. ಹೀಗಿರುವಲ್ಲಿ ಒಂದು ದಿನ ತಾನು ಅದನ್ನು ಮುಟ್ಟದ ಕೂಡಲೇ ಅದು ಆ ಸರಸ್ಸಿನಲ್ಲಿ ಬಿದ್ದುಹೋಗುತ್ತದೆ. ಅದಕ್ಕಾಗಿ ಎಷ್ಟೇ

ಹುಡುಕಾಟ ನಡೆಸಿದರೂ ಪ್ರಯೋಜನವಾಗದೆ ಹೋಗುತ್ತದೆ. ಶಾಂಡಿಲ್ಯನು ಒಂದು ವಾರಕಾಲ ನಿರಾಹಾರನಾಗಿ ನರಸಿಂಹನ ಧ್ಯಾನಮಾಡುತ್ತ ಅಲ್ಲಿಯೇ ಕುಳಿತಿರುತ್ತಾನೆ. ಕಡೆಗೊಮ್ಮೆ ನರಸಿಂಹನು ಅವನ ಮನದಲ್ಲಿ ಗೋಚರನಾಗಿ ಆ ಸಾಲಿಗ್ರಾಮವನ್ನು ತಾನೇ ಅಪಹರಿಸಿರುವುದಾಗಿ ಹೇಳಿ ಇದಕ್ಕಾಗಿ ದುಃಖ ಪಡಬಾರದೆಂದು ತಿಳಿಸುತ್ತಾನೆ. ಇಷ್ಟು ಹೇಳಿದ್ದಲ್ಲದೆ ಅಲ್ಲಿಂದ ಉತ್ತರ ದಿಕ್ಕಿನಲ್ಲಿ ನೇತ್ರಾವತೀ ನದೀತೀರದಲ್ಲಿ ತನ್ನ ಪುರಾತನ ನೆಲೆಯಿರುವುದೆಂದೂ, ಅವನು ಅಲ್ಲಿಗೆ ಹೋಗಿ ತನ್ನನ್ನು ಸೇವಿಸಿದಲ್ಲಿ ಅವನ ಇಷ್ಟಾರ್ಥವು ಸಿದ್ಧಿಸುವುದಾಗಿಯೂ ಹೇಳಿ ಅಗೋಚರವಾಗುತ್ತಾನೆ.

ಶಾಂಡಿಲ್ಯನು ನರಸಿಂಹಸ್ವಾಮಿಯು ತಿಳಿಸಿದಂತೆಯೇ ಉತ್ತರಕ್ಕೆ ಸಾಗಿ ಅಲ್ಲಿ ನರಸಿಂಹ ಕ್ಷೇತ್ರವನ್ನು ಕಂಡು ಆನಂದಭರಿತನಾಗುತ್ತಾನೆ. ಒಬ್ಬ ಬೇಡನು ಇವನನ್ನೇ ಬೆನ್ನಟ್ಟಿ ಬಂದಿರುತ್ತಾನೆ. ಶಾಂಡಿಲ್ಯನನ್ನು ಹೊಡೆಯಬೇಕೆಂದು ಅವನು ಶಸ್ತ್ರವೆತ್ತಿರುವಾಗ ಮುನಿಯು ಜೋರಾದ ದನಿಯಲ್ಲಿ 'ಹೇ ನರಸಿಂಹ ನನ್ನನ್ನು ರಕ್ಷಿಸು' ಎಂದು ಕೂಗಿಕೊಳ್ಳು ತ್ತಾನೆ. ಆತನ ಆವೇಶದ ದನಿಗೆ ಸೋತುಹೋದ ಬೇಡನು ತನ್ನ ಕೈಯಲ್ಲಿದ್ದ ಆಯುಧವನ್ನು ಕೆಳಗೆ ಹಾಕುತ್ತಾನೆ. ಶಾಂಡಿಲ್ಯರಿಗೆ ನಮಸ್ಕರಿಸಿ ಅವರೇ ತನ್ನ ಗುರುಗಳೆಂದು ಹೇಳಿ ತನ್ನನ್ನು ಉದ್ಧಾರ ಮಾಡಬೇಕೆಂದು ಪ್ರಾರ್ಥಿಸುತ್ತಾನೆ. ತನ್ನನ್ನು ಪಾಪಗಳಿಂದ ದೂರ ಮಾಡಬೇಕೆಂದು ಬೇಡಿಕೊಳ್ಳುತ್ತಾನೆ. ಅವನ ಬಗ್ಗೆ ಕರುಣೆದೋರಿದ ತಪಸ್ವಿಯು ಅವನು ಅರ್ಪಿಸಿದ ಫಲಪುಷ್ಪಗಳನ್ನು ತೆಗೆದುಕೊಂಡು ಆ ಬೇಡನನ್ನು ಸಹ ತನ್ನ ಜೊತೆಗೆ ಕರೆದು ಕೊಂಡು ನರಸಿಂಹ ದೇವರನ್ನು ಭಕ್ತಿಯಿಂದ ಪೂಜಿಸುತ್ತಾನೆ. ಬೇಡನೂ ಭಕ್ತಿಯಿಂದ ದೇವರನ್ನು ಧ್ಯಾನಮಾಡಿ ತನ್ನ ವೃತ್ತಿಯನ್ನು ಬಿಟ್ಟುಕೊಟ್ಟು ತಪಸ್ಸಿನಲ್ಲಿ ನಿರತನಾಗುತ್ತಾನೆ. ಮುದ್ಗಲನೆಂಬ ಹೆಸರನ್ನು ಹೊಂದಿ ಶಾಂಡಿಲ್ಯರಿಂದ ಬ್ರಹ್ಮಜ್ಞಾನವನ್ನು ಪಡೆದು ಮೋಕ್ಷವನ್ನು ಸಂಪಾದಿಸುತ್ತಾನೆ.

ಹಿಂಸಾಚಾರಿಯೂ, ದುಷ್ಟನೂ ಆಗಿದ್ದ ವ್ಯಕ್ತಿಯನ್ನು ಅಹಿಂಸಾವಾದಿಯಾಗಿ ಶಿಷ್ಟವ್ಯಕ್ತಿ ಯಾಗಿ ಪರಿವರ್ತಿಸಿದ ಶಾಂಡಿಲ್ಯರು ಹುತ್ತದೊಳಗಿನ ನರಸಿಂಹನನ್ನು ಭಕ್ತಿಯಿಂದ ಪೂಜಿಸುತ್ತಿ ದ್ದರು. ಹೀಗಿರಬೇಕಾದರೆ ಅನಂತನಾಡಿಯ ಸರೋವರವು ಬತ್ತಿಹೋಗಿ ನೇತ್ರಾವತಿಯಲ್ಲಿ ವಿಲೀನಗೊಂಡಿತು. ಇದರ ಕಾರಣವಾಗಿ ಸರೋವರದ ತಳದ ಚಿಂತಾಮಣಿ ಸಾಲಿಗ್ರಾಮವು ನರಸಿಂಹ ಶಿಲಾಲಿಂಗದ ಬಾಯೊಳಗೆ ಸೇರಿಹೋಯಿತು. ಇದರಿಂದ ಶಾಂಡಿಲ್ಯನಿಗೆ ಅತ್ಯಂತ ಆನಂದವೂ ಸಮಾಧಾನಗಳೂ ಲಭಿಸಿದವು. ಆತನು "ಸ್ವಾಮಿನ್ ನೀನು ಭಕ್ತರಿಗೆ ಚಿಂತಿತಾ ಭೀಷ್ಟಗಳನ್ನು ಕೊಡುತ್ತ ಚಿಂತಾಮಣಿ ನರಸಿಂಹನೆಂದೇ ಪ್ರಖ್ಯಾತನಾಗು" ಎಂಬುದಾಗಿ ಭಗವಂತನನ್ನು ಬೇಡಿಕೊಳ್ಳುತ್ತಾನೆ. ಕೃತಯುಗದಿಂದ ದ್ವಾಪರದವರೆಗೆ ಇದರ ಪ್ರಖ್ಯಾತಿಯನ್ನು ಈ ರೀತಿ ಮನಗಾಣಬಹುದಾಗಿದೆ.

ಶ್ರೀ ವಾದಿರಾಜಸ್ವಾಮಿಗಳು ಉಪ್ಪಿನಂಗಡಿಯ ಸಂಗಮಸ್ಥಳದಿಂದ ಕಡೇಶ್ವಾಲ್ಯದವರೆಗೆ ಬಾಳೆಎಲೆಯ ಮೇಲೆ ಕೂತು ನದಿಯ ಪ್ರವಾಹದಲ್ಲಿ ತೇಲಿಕೊಂಡು ಬಂದು ನರಸಿಂಹನನ್ನು

ಪೂಜಿಸಿದರೆಂಬ ಐತಿಹ್ಯವು ಪ್ರಚಲಿತವಿದೆ. ಅವರು ಈ ಕ್ಷೇತ್ರದಲ್ಲಿ ತನ್ನ ಅಧೀನದಲ್ಲಿರುವ ನಾನಳಿತ್ತಾಯ (ನಾರಾಯಣ ಭೂತ)ನನ್ನು ರಕ್ಷಕನನ್ನಾಗಿ ನೇಮಿಸಿ ದೇವಾಲಯವನ್ನು ನಿರ್ಮಿಸಿಕೊಟ್ಟು ಇದರ ಪ್ರಸಿದ್ಧಿಗೆ ಕಾರಣರಾಗಿರುತ್ತಾರೆ. ಈಗಲೂ ನಾನಳಿತ್ತಾಯನಿಗೆ ವಿಶೇಷ ಪೂಜೆಗಳು ನೆರವೇರುತ್ತಿದೆ. ದೇವರ ಉತ್ಸವದ ಜೊತೆಗೆ ನಾನಳಿತ್ತಾಯನೂ ಹೊರಡುವ ಪದ್ಧತಿಯಿದೆ. ವಾದಿರಾಜರು ಇಲ್ಲಿಗೆ ಬಂದು ಸೂಕ್ತವಾದ ವ್ಯವಸ್ಥೆಗಳನ್ನು ಮಾಡಿದ ನೆನಪಿಗಾಗಿ ಇಂದಿಗೂ ಸಹ ಸೋದೆಮಠದ ಸ್ವಾಮಿಗಳಿಗೆ ಈ ಕ್ಷೇತ್ರದಲ್ಲಿ ಪ್ರಾಮುಖ್ಯವಿದೆ. ಈ ಮಠದ ಶ್ರೀಗಳವರು ಉತ್ತರದ ಬಾಗಿಲಿಂದ ಒಳಗಡೆಗೆ ಹೋಗಿ ಮಂಗಳಾರತಿ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ. ಉಳಿದವರು ಗರ್ಭಗುಡಿಯ ಹೊರಗಿನ ಮಂಟಪದ ಹೊಸ್ತಿಲಿನಲ್ಲಿಯೇ ನಿಂತು ದೇವರ ದರ್ಶನ ಮಾಡಬೇಕಾಗಿರುತ್ತದೆ.

ಭಾಗವತ ಪುರಾಣದಲ್ಲಿ ಕೊಂಡಾಡಿದ ಹಾಗೆ ಶ್ರೀಹರಿಭಕ್ತಿಯನ್ನು ವೃದ್ಧಿಗೊಳಿಸುವಂತಿರುವ 'ನೇತ್ರಾವತೀ' ನದಿಯ ತಟದಲ್ಲಿರುವ ಚಿಂತಾಮಣಿ ನರಸಿಂಹ ಸ್ವಾಮಿಯು ಭಕ್ತರ ಪಾಪಗಳನ್ನು ದೂರಗೊಳಿಸುತ್ತಿದ್ದಾನೆ. ಅತ್ಯಂತ ಜಾಗ್ರತವಾದ ರಮ್ಯಸ್ಥಳವಾಗಿರುವ ಇಲ್ಲಿಗೆ ಅನೇಕ ಕುಲಭಕ್ತರು ಆಗಮಿಸಿ ತಮ್ಮ ಸೇವಾದಿಗಳನ್ನು ನಡೆಸಿಕೊಂಡು ಹೋಗುತ್ತಾರೆ. ಈ ಕಾರಣದಿಂದಾಗಿಯೇ ನರಸಿಂಹಕ್ಷೇತ್ರಗಳಲ್ಲಿ ಇದನ್ನೊಂದು ಅಪರೂಪಸ್ಥಳವೆಂದು ಹೇಳಬಹುದಾಗಿದೆ.

# ಕುಕ್ಕೆ

ಕುಕ್ಕೆ ಸುಬ್ರಹ್ಮಣ್ಯವು ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ. ಸುಳ್ಯದಿಂದ ಈಶಾನ್ಯಕ್ಕೆ ನಲವತ್ತೈದು ಕಿ.ಮೀ. ದೂರದಲ್ಲಿರುವ ಈ ಪುಣ್ಯಸ್ಥಳಕ್ಕೆ 'ಪುಷ್ಪಗಿರಿ'ಯೆಂಬ ಮತ್ತೊಂದು ಹೆಸರಿದೆ. ಸುಬ್ರಹ್ಮಣ್ಯ ಮಾರ್ಗದಲ್ಲಿಯೇ ಹಾಸನ ಮತ್ತು ಮಂಗಳೂರು ನಡುವಣ ರೈಲ್ವೆ ಮಾರ್ಗವಿದೆ. ಈ ಪ್ರದೇಶದ ಏಳು ಪ್ರಮುಖವಾದ ಪುಣ್ಯಕ್ಷೇತ್ರಗಳಲ್ಲೊಂದಾದ ಈ ಸ್ಥಳಕ್ಕೆ ಆದಿಶಂಕರಾಚಾರ್ಯರು ಭೇಟಿಯಿತ್ತಿದ್ದರೆಂದು ಹೇಳಲಾಗುತ್ತದೆ.

ಸುಬ್ರಹ್ಮಣ್ಯದ ಪ್ರಧಾನ ದೇವತೆ ಸುಬ್ರಹ್ಮಣ್ಯಸ್ವಾಮಿ. ಇದು ಅನಂತನ ರೂಪವೂ ಹೌದು. ಅನಂತನೇ ವಿಷ್ಣುವಿನ ಆದಿಶೇಷ. ವಿಷ್ಣುವೆಂದರೆ ನರಸಿಂಹನೂ ಹೌದು. ಘಾಟಿ ಸುಬ್ರಹ್ಮಣ್ಯದಲ್ಲೂ ಸಹ ಆದಿಶೇಷನ ರೂಪದಲ್ಲಿ ನರಸಿಂಹಾರಾಧನೆಯಿರುತ್ತದೆ. ಹಾಗೇ ಸುಬ್ರಹ್ಮಣ್ಯದಲ್ಲಿಯೂ ಸಹ ನರಸಿಂಹ ದೇವರ ಆರಾಧನೆಗೆ ಅನುಕೂಲವಾಗುವಂತೆ ಪುಟ್ಟಗುಡಿಯೊಂದನ್ನು ನಿರ್ಮಿಸಲಾಗಿದೆ. ಮಧ್ವಾಚಾರ್ಯರ ಸೋದರ ಹಾಗೂ ಶಿಷ್ಯ ಶ್ರೀವಿಷ್ಣುತೀರ್ಥಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಲಕ್ಷ್ಮೀನರಸಿಂಹ ಪೂಜಾಮೂರ್ತಿಯನ್ನು ಮತ್ತು ಈ ದೇವಾಲಯವನ್ನು ಮಧ್ವ ಮಠದವರು ನಿಗಾ ವಹಿಸುತ್ತಿದ್ದಾರೆ.

# ಹಾಲಾಡಿ

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಹಾಲಾಡಿ ಗ್ರಾಮದಲ್ಲಿ ಬಹು ಪುರಾತನವಾದ ಹಾಗೂ ಪ್ರಸಿದ್ಧವಾದ ನರಸಿಂಹ ದೇವಸ್ಥಾನವಿದೆ. ಈ ದೇವ ಸ್ಥಾನದಲ್ಲಿರುವ ಮೂರ್ತಿಯು ಭವ್ಯವಾಗಿದ್ದು ನೋಡುವವರ ಕಣ್ಣುಗಳಿಗೆ ಆನಂದವನ್ನುಂಟು ಮಾಡುತ್ತಿದೆ.

ಸುಮಾರು ನಾಲ್ಕು ಅಡಿ ಎತ್ತರ ಹಾಗೂ ಮೂರು ಅಡಿ ಅಗಲವಾಗಿರುವ ನರಸಿಂಹ ಸ್ವಾಮಿಯು ಲಕ್ಷ್ಮೀದೇವಿಯನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡಿರುವ ಭಂಗಿಯಲ್ಲಿರುವ ವಿಗ್ರಹವು ಮಂಗಳಕರವಾಗಿದೆ. ಸ್ವಾಮಿಯು ತಾನು ಶೇಷಶಾಯಿ ಎಂಬುದನ್ನು ಸೂಚಿಸುವಂತೆ ನಾಲ್ಕೈದು ಸುತ್ತು ಇರುವ ಇಪ್ಪತ್ತೇಳು ಹೆಡೆಗಳಿರುವ ಅನಂತನ ಮೇಲೆ ಆಸೀನನಾಗಿದ್ದಾನೆ. ಅಪರೂಪ ಶಿಲ್ಪಗಳ ಸಾಲಿಗೆ ಈ ನರಸಿಂಹಮೂರ್ತಿ ಯನ್ನು ಕೂಡಾ ಸೇರಿಸಬಹುದಾಗಿದೆ.

ಹಾಲಾಡಿ ನರಸಿಂಹನ ಸ್ಥಾಪನೆಯ ವಿಚಾರದಲ್ಲಿ ಐತಿಹ್ಯವೊಂದು ಪ್ರಸಿದ್ಧವಾಗಿದೆ. ಹಿಂದೊಮ್ಮೆ ಈ ಗ್ರಾಮದಲ್ಲಿ ಮುದ್ದಾಳ ಎಂಬ ಅರಸನಿದ್ದು ಆತನಿಗೆ ತೊಂದರೆ ಉಂಟಾದಾಗ ನರಸಿಂಹ ಮೂರ್ತಿಯನ್ನು ಪ್ರತಿಷ್ಠೆ ಮಾಡಿಸಬೇಕೆಂಬ ಸಂಕಲ್ಪ ಮಾಡಿದನು. ಆತನು ಶೃಂಗೇರಿ ಜಗದ್ಗುರುಗಳ ಮಾರ್ಗದರ್ಶನವನ್ನು ದೊರೆತು ಲಕ್ಷ್ಮೀನೃಸಿಂಹ ಮೂರ್ತಿ ಯನ್ನು ಪ್ರತಿಷ್ಠೆಗೆ ಸಿದ್ಧಪಡಿಸಿದನು. ಆದರೆ ಇದರಲ್ಲಿ ದೋಷವಿತ್ತೋ ಏನೋ ಎಂದೆನಿಸುತ್ತದೆ.

ಲಕ್ಷ್ಮೀನೃಸಿಂಹನು ಜಗದ್ಗುರುಗಳ ಸ್ವಪ್ನದಲ್ಲಿ ಕಾಣಿಸಿಕೊಂಡು ಅವರಿಗೆ 'ಈಗ ಸಿದ್ಧವಾಗಿರುವ ಮೂರ್ತಿಯು ಬೇಡ. ಪಕ್ಕದಲ್ಲಿಯೇ ಹರಿಯುತ್ತಿರುವ ವಾರಾಹಿ ನದಿಯ ಲ್ಲೊಂದು ಮೂರ್ತಿಯಿದೆ. ಅದನ್ನು ತಂದು ಸ್ಥಾಪನೆ ಮಾಡಿ' ಎಂದು ಹೇಳಲಾಗಿ, ಶೃಂಗೇರಿಯ ಆ ಜಗದ್ಗುರುಗಳು ಹೊಳೆಯಲ್ಲಿ ಮಿಂದು ಅಲ್ಲಿ ದೊರೆತ ಲಕ್ಷ್ಮೀನರಸಿಂಹನ ವಿಗ್ರಹವನ್ನು ತಂದು ಪ್ರತಿಷ್ಠಾಪನೆ ಮಾಡಿದರೆಂದು ಹೇಳಲಾಗುತ್ತದೆ. ಮೊದಲಿನ ಮೂರ್ತಿ ಯನ್ನು ಪಕ್ಕದಲ್ಲಿ ಪ್ರತಿಷ್ಠಾಪನೆ ಮಾಡಿರುತ್ತಾರೆ.

ಹೀಗೆ ಗುರುಗಳ ಆಶೀರ್ವಾದದಿಂದ ಮತ್ತು ಅವರ ಪ್ರೇರಣೆಯಿಂದ ಪ್ರತಿಷ್ಠೆಗೊಂಡು ಆರಾಧಿಸಿಕೊಂಡು ಬರಲಾಗುತ್ತಿರುವ ಲಕ್ಷ್ಮೀನರಸಿಂಹನನ್ನು ಹಾಲಾಡಿಯಲ್ಲಿ ದರ್ಶನ ಮಾಡಬಹುದು. ಹಾಲಾಡಿ ಕ್ಷೇತ್ರಕ್ಕೆ ಬಂದು ಹೋಗುವ ಆಸ್ತಿಕ ಬಾಂಧವರ ಸಲುವಾಗಿ ಉತ್ತಮ ರಸ್ತೆ ಮತ್ತು ವಾಹನಗಳ ಸೌಕರ್ಯವನ್ನು ಕಲ್ಪಿಸಲಾಗಿದೆ. ದಿನನಿತ್ಯದ ಪೂಜಾ ಕೈಂಕರ್ಯಗಳ ಜೊತೆಯಲ್ಲಿ ವಿಶೇಷ ದಿನಗಳಲ್ಲಿನ ವಿಶಿಷ್ಟ ಸೇವೆಗೂ ಕೂಡಾ ಅವಕಾಶ ವನ್ನು ಒದಗಿಸಿಕೊಳ್ಳಲಾಗಿದೆ.

## ಉತ್ತರ ಕನ್ನಡ ಜಿಲ್ಲೆ

# ಸೋಧೆ

ಭಾರತವು ಪುಣ್ಯಭೂಮಿಯಾದಂತೆ, ಕರ್ಮಭೂಮಿಯೂ ಆಗಿದೆ. ಇಲ್ಲಿ ಹುಟ್ಟಿದ ಮಾನವರು ಆಚರಿಸಿದ ಸತ್ಕರ್ಮಗಳ ಫಲವು ಅನಂತವಾಗುತ್ತದೆ. ಇಂದೂ ಕೂಡ ಆಸ್ತಿಕನಾದ ಭಾರತೀಯನು ತನ್ನ ಜೀವನದಲ್ಲಿ ಎಂದಾದರೂ ಒಂದು ಬಾರಿಯಾದರೂ ತೀರ್ಥಾಟನೆ ಮಾಡಬೇಕೆಂದು ಹಾತೊರೆಯುತ್ತಾನೆ. ಇದು ಈ ಪುಣ್ಯಭೂಮಿಯ ಸಂಸ್ಕಾರ ಅಹುದೆಂದು ವಿದ್ವಜ್ಜನರು ಭಾವಿಸುತ್ತಾರೆ.

ಮಹಾತ್ಮರೆಂದೂ ದೇವಾಂಶ ಸಂಭೂತರೆಂದೂ ಪ್ರಸಿದ್ಧರಾದ ಅನೇಕರು ತಾವು ಸ್ವತಃ ತೀರ್ಥಯಾತ್ರೆಗಳನ್ನು ಮಾಡಿ ಇತರರಿಗೆ ಮಾರ್ಗದರ್ಶನ ಮಾಡಿದ್ದಾರೆ. ಇಂತಹವರಲ್ಲಿ ವಾದಿರಾಜರೂ ಒಬ್ಬರು. ಇವರು ಬರೆದ ತೀರ್ಥಪ್ರಬಂಧವು ಸುಪ್ರಸಿದ್ಧ ಕ್ಷೇತ್ರಗಳನ್ನು ವಿವರಿಸಿ ತಿಳಿಸಿಕೊಟ್ಟಿದೆ. ವಾದಿರಾಜರ ತಪೋಭೂಮಿಯಾದ ಸೋದೆಯು ಶಿರಸಿಯಿಂದ ಸುಮಾರು ಮೂವತ್ತಾರು ಕಿಲೋಮೀಟರ್ ದೂರದಲ್ಲಿದ್ದು ಕಡಲ ತೀರದ ಜಿಲ್ಲೆಯಾದ ಉತ್ತರ ಕನ್ನಡಕ್ಕೆ ಸೇರಿದೆ.

ಸ್ವಾದಿ-ಸೋಂದೆ-ಸೋಂದೆಕೆರೆ ಮತ್ತು ಸಂದಾಪುರ ಎಂಬ ಹೆಸರುಗಳನ್ನು ಹೊಂದಿದ ಈ ಪುಣ್ಯಕ್ಷೇತ್ರದಲ್ಲಿ ಒಂದು ಹಳೆಯ ಕೋಟೆ, ಸ್ಮಾರ್ತ-ವೈಷ್ಣವ-ಜೈನ ಮಠಗಳಿವೆ. ಇಲ್ಲಿನ ವೈಷ್ಣವ ಮಠವು ವಾದಿರಾಜಮಠವೆಂದು ಪ್ರಸಿದ್ಧವಾಗಿದೆ.

ವಾದಿರಾಜ ಶ್ರೀಗಳವರು ಭಗವಾನ್ ವೇದವ್ಯಾಸರ ದರ್ಶನಕ್ಕೆ ಬದರಿನಾಥಕ್ಕೆ ಹೋದಾಗ ಅವರಿಗೆ ಭೀಮಸೇನ ದೇವರು ಉಪಾಸನೆ ಮಾಡುತ್ತಿದ್ದ ಲಕ್ಷ್ಮೀನರಸಿಂಹ ವಿಗ್ರಹವು ಕುರುಕ್ಷೇತ್ರದ ಸಮೀಪದಲ್ಲಿ ಭೀಮಕುಂಡದಲ್ಲಿ ಇರುವುದಾಗಿ ತಿಳಿಯಿತು. ಹಾಗೆಯೇ ಅದನ್ನು ತೆಗೆದುಕೊಂಡು ಹೋಗಿ ಪೂಜಿಸಲು ಆಜ್ಞೆಯಾಯಿತು. ಈಗಲೂ ವಾದಿರಾಜ ಮಠದಲ್ಲಿ ಮಂಟಪದ ಮೇಲ್ಭಾಗದಲ್ಲಿ ಇದು ನರಸಿಂಹ ವಿಗ್ರಹವಾಗಿ ವಿಪ್ರೋತ್ತಮರಿಂದ ಪೂಜೆಗೊಳ್ಳುತ್ತಲಿದೆ.

ವಾದಿರಾಜಮಠದ ಆವರಣದಲ್ಲಿ ನರಸಿಂಹ- ಜ್ಞಾನೇಶ್ವರ ಮತ್ತು ಭೂತಪ್ಪ ದೇವಸ್ಥಾನಗಳಿವೆ. ಇಲ್ಲಿ ಪ್ರತಿವರ್ಷ ಮಾರ್ಚ್-ಏಪ್ರಿಲ್ ತಿಂಗಳಿನಲ್ಲಿ ವೈಭವ ರೀತಿಯಲ್ಲಿ ನರಸಿಂಹ ಸ್ವಾಮಿಯವರ ರಥೋತ್ಸವವು ನಡೆಯುತ್ತದೆ. ಈ ಜಾತ್ರೆಯಲ್ಲಿ ಈ ಭಾಗದ ಮುಸಲ್ಮಾನರೂ ಕೂಡಾ ಪಾಲ್ಗೊಂಡು ಹಿಂದೂಗಳೊಂದಿಗೆ ಬೆರೆತು ಶ್ರದ್ಧಾಭಕ್ತಿ ಭಾವನೆಗಳಿಂದ ರಥವನ್ನು ಎಳೆಯುವುದು ನಿಜವಾದ ರೀತಿಯ ಭಾವೈಕ್ಯತೆಗೆ ಅಪ್ಪಟ ನಿದರ್ಶನವೆನ್ನಬಹುದು.

# ಭಟ್ಕಳ

ಉತ್ತರ ಕನ್ನಡ ಜಿಲ್ಲೆಯ ದಕ್ಷಿಣದ ತುದಿಯಲ್ಲಿರುವ ಭಟ್ಕಳವು ಸುಪ್ರಸಿದ್ಧವಾದ ಬಂದರು ತೀರವಾಗಿದೆ. ಈ ಪಟ್ಟಣವು ಪ್ರಮುಖ ವ್ಯಾಪಾರಕೇಂದ್ರವಾಗಿದೆ. ಇಲ್ಲಿನ ವಾಣಿಜ್ಯ ವಹಿವಾಟಿಗೆ ಅಂತರರಾಷ್ಟ್ರೀಯ ಮನ್ನಣೆಯೂ ದೊರಕೊಂಡಿದೆ. ಇದನ್ನು ಪ್ರಾಚೀನ ಕಾಲದಲ್ಲಿ ಸುಸವಾದಿ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ವಿಜಯನಗರದ ಅರಸರ ಕಾಲದಲ್ಲಿ ಪ್ರಮುಖವಾದ ವ್ಯಾಪಾರ ವಹಿವಾಟನ್ನು ಇಲ್ಲಿಂದಲೇ ನಡೆಸಲಾಗುತ್ತಿತ್ತು. ಹದಿನಾಲ್ಕನೆಯ ಶತಮಾನದಿಂದ ಈಚೆಗೆ ಭಟ್ಕಳವು ವಿಜಯನಗರ ಸಾಮಂತರಾಗಿದ್ದ ಹಾಡುವಳ್ಳಿಯ ಸಾಳುವ ದೊರೆಗಳ ಅಧೀನಕ್ಕೆ ಒಳಪಟ್ಟಿತ್ತು.

ಭಟ್ಕಳದ ಸಾಂಸ್ಕೃತಿಕ ಕೇಂದ್ರಗಳಲ್ಲಿ ನರಸಿಂಹ ದೇವಾಲಯವೂ ಸೇರಿದ್ದು, ಇಲ್ಲಿನ ನರಸಿಂಹ ದೇವರನ್ನು ಶ್ರದ್ಧಾವಂತರಾದ ಜನರು ಭಕ್ತಿಯಿಂದ ಆರಾಧಿಸುತ್ತಿದ್ದಾರೆ. ಇಲ್ಲಿರುವ ವಿಗ್ರಹ ನೋಡುಗರನ್ನು ಮತ್ತೊಮ್ಮೆ ಆಕರ್ಷಿಸುವಂತಹುದಾಗಿದೆ.

# ಕಾರವಾರ

ಕಾರವಾರದ ಉತ್ತರಕ್ಕೆ ಕೋಡಿ ಭಾಗದಲ್ಲಿ ಅರಣ್ಯ ಇಲಾಖೆಗೆ ಸೇರಿದ ಕೋಠಿ ಒಂದಿದೆ. ಸಮುದ್ರದಲ್ಲಿ ತೇಲಿ ಬರುವ ಕಟ್ಟಿಗೆಗಳನ್ನು ಅರಣ್ಯ ಇಲಾಖೆಯವರು ರಕ್ಷಿಸುವ ಸ್ಥಳವಿದು. ಇಲ್ಲಿಂದ ಪೂರ್ವಕ್ಕೆ ಕೂರ್ಮಗಢ ಎಂಬ ನಡುಗಡ್ಡೆಯು ಸಮುದ್ರಮಟ್ಟಕ್ಕಿಂತ ನೂರಾ ಎಂಬತ್ತು ಅಡಿ ಎತ್ತರವಿದೆ. ಅಲ್ಲಿ ಒಂದು ಕೋಟೆಯಿದೆ. ಅದರ ಮಧ್ಯದಲ್ಲಿ ನೃಸಿಂಹ ದೇವಸ್ಥಾನವಿದೆ. ಇಲ್ಲಿ ಒಂದು ಸುಂದರವಾದ ಪುಷ್ಕರಣಿಯೂ ಇದೆ.

ನರಸಿಂಹ ದೇವಾಲಯದಲ್ಲಿನ ಮಂಗಳಮಯ ಮೂರ್ತಿಯ ಪ್ರತಿಮೆಯನ್ನು ವ್ಯಾಪಾರಕ್ಕೆ ಬಂದ ಅನ್ಯದೇಶೀಯರು ತಂದು ಪ್ರತಿಷ್ಠಾಪಿಸಿದ್ದೆಂದು ಹೇಳುತ್ತಾರೆ. ಇಲ್ಲಿ ಛತ್ರಪತಿ ಶಿವಾಜಿ ಮಹಾರಾಜರು ಕಡವಾಡದಿಂದ ಕಲ್ಲುಗಳನ್ನು ತರಿಸಿ ಕೋಟೆಯನ್ನು ಕಟ್ಟಿಸಿದರು. ಹೀಗಾಗಿ ಅದಕ್ಕೆ ಶಿದ್ದಗಢ ಎಂಬ ಹೆಸರು ಉಂಟಾಯಿತು. ಕಡವಾಡ ಕಲ್ಲಿನಿಂದ ಕಟ್ಟಿದ ಕಟ್ಟಿದ ಗೋಡೆಯಾಗಿರುವುದರಿಂದ ಅದನ್ನು ಕೂರ್ಮಗಢವೆಂದು ಕರೆಯುವುದು ವಾಡಿಕೆಯಾಗಿದೆ.

ಉತ್ತರ ಕನ್ನಡ ಅರಣ್ಯದ ಗಂಭೀರ ಸೌಂದರ್ಯ, ಕೋಟೆಯ ಮೇಲೆ ನಿಂತಾಗ ಸಮುದ್ರದಿಂದ ಅಪ್ಪಳಿಸುವ ತೆರೆಗಳು ಎಂತಹ ನಾಸ್ತಿಕನನ್ನೂ ಭಕ್ತವತ್ಸಲನಾದ ನರಸಿಂಹನ ಪಾದಕ್ಕೆ ಎರಗಿಸದೇ ಇರಲಾರದು. ನರಸಿಂಹ ದರ್ಶನಕ್ಕೆ ಅಪೇಕ್ಷಿಸಿದರೆ ಅಲ್ಲಿಗೆ ಕರೆದುಕೊಂಡು ಹೋಗುವ ವ್ಯವಸ್ಥೆಯಿದೆ.

# ಗೋಕರ್ಣ

ಉತ್ತರ ಕನ್ನಡ ಜಿಲ್ಲೆಗೆ ಸೇರಿದ್ದು, ಅರಬ್ಬೀ ಸಮುದ್ರದ ದಂಡೆಯಲ್ಲಿನ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು ಲಿಂಗವಿರುವ ಗೋಕರ್ಣವನ್ನು ಮಹಾಬಲ ಕ್ಷೇತ್ರವೆಂದು ಕರೆಯುತ್ತಾರೆ. ಇಲ್ಲೊಂದು ಸುಂದರವಾದ ಪುಷ್ಕರಿಣಿಯಿದೆ. ಇದಕ್ಕೆ ಕೋಟಿತೀರ್ಥವೆಂಬ ಹೆಸರಿದೆ. ಸಮುದ್ರಸ್ನಾನ ಮಾಡಿದ ನಂತರ ಕೋಟಿತೀರ್ಥದಲ್ಲಿ ಸ್ನಾನ ಮಾಡಿದರೆ ಗೋಕರ್ಣ ಯಾತ್ರೆಯನ್ನು ಮಾಡಿದ ಫಲವು ಲಭಿಸುತ್ತದೆ ಎಂಬುದು ಪ್ರತೀತಿ.

ಕೋಟಿತೀರ್ಥವು ಸುಮಾರು ಹತ್ತು ಎಕರೆ ವಿಸ್ತಾರವಾಗಿದೆ. ಈ ತೀರ್ಥದ ಸುತ್ತಲೂ ಹರಿಹರ, ಗೋಪಾಲಕೃಷ್ಣ, ಗಣಪತಿಯ ದೇವಾಲಯಗಲಿವೆ. ಶ್ರೀಯೋಗಾ ನರಸಿಂಹನ ದೇವಸ್ಥಾನವನ್ನು ಈ ಸ್ಥಳದಲ್ಲಿ ಕಾಣಬಹುದು. ಇದನ್ನು ಹೊಯ್ಸಳ ರಾಜರ ಕಡೆಯ ದೊರೆಗಳ ಕಾಲಕ್ಕೆ ಸೇರಿಸಬಹುದು. ಇಲ್ಲಿರುವ ಶ್ರೀನರಸಿಂಹಸ್ವಾಮಿಯ ವಿಗ್ರಹದ ಎತ್ತರವು ಸುಮಾರು ನಾಲ್ಕು ಅಡಿ ಎತ್ತರವಾಗಿದೆ. ಇದಲ್ಲದೆ ಕೋಟಿತೀರ್ಥದ ಪ್ರಾಕಾರದಲ್ಲಿನ ಅಶ್ವತ್ಥಕಟ್ಟೆಯಲ್ಲಿ ಮತ್ತೊಂದು ಶ್ರೀನರಸಿಂಹ ವಿಗ್ರಹವಿದೆ. ಹೊಯ್ಸಳ ಶಿಲ್ಪಲಕ್ಷಣಕ್ಕೆ ಸೇರಿದ ಶ್ರೀನರಸಿಂಹ ವಿಗ್ರಹವೆಂದು ಕೋಟಿತೀರ್ಥದ ನರಸಿಂಹನನ್ನು ಗುರುತಿಸಬಹುದಾದರೂ ಇದು ವಿಜಯನಗರದ ಅರಸರ ಕಾಲಕ್ಕೆ ಸೇರಿದ್ದೆಂದು ಹೇಳುವರು.

## • ಉಡುಪಿ ಜಿಲ್ಲೆ

# ಮರವಂತೆ

ಹೊಸದಾಗಿ ರಚನೆಯಾಗಿರುವ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿಗೆ ಸೇರಿರುವ ಮರವಂತೆಯು ನಿಸರ್ಗ ಸೌಂದರ್ಯದ ಬೀಡಾಗಿದೆ. ಸೂರ್ಯನಗರವೆಂದು ಕರೆಯುವ ಕುಂದಾಪುರಕ್ಕೆ ಹದಿನಾರು ಕಿಲೋಮೀಟರ್ ದೂರದಲ್ಲಿಗೆ. ಭೋರ್ಗರೆವ ಕಡಲು ಒಂದು ಕಡೆಗಿದ್ದರೆ, ಪ್ರಶಾಂತವಾಗಿ ಹರಿಯುವ ಸೌಪರ್ಣಿಕಾ ನದಿಯು ಮತ್ತೊಂದು ಕಡೆಗಿದೆ. ಕನ್ನಡ ನಾಡಿನ ಕರಾವಳಿಯಾದ ಮರವಂತೆಯಲ್ಲಿರುವ ವರಾಹಸ್ವಾಮಿಯ ದೇವಾಲಯವು ಪ್ರಸಿದ್ಧವಾದ ಆರಾಧನಾ ಸ್ಥಳವಾಗಿದೆ. ಇದು ಸುಂದರವಾದ ಪ್ರೇಕ್ಷಣೀಯ ಸ್ಥಳವಾಗಿದೆ. ವರಾಹಸ್ವಾಮಿ ದೇವಾಲಯದ ಸನ್ನಿವೇಶವು ಆಹ್ಲಾದಕರವಾಗಿದೆ.

ಸೌಪರ್ಣಿಕಾ ನಂದಿಯ ದಡದ ಮೇಲೆ ಮೂರು ಗರ್ಭಗೃಹಗಳಿಂದ ಕೂಡಿದ ವರಾಹಸ್ವಾಮಿ ದೇವಾಲಯವಿದೆ. ಈ ದೇವಾಲಯದ ಎದುರು ಭಾಗದಲ್ಲಿ ತೀರ್ಥಮಂಟಪ ಮತ್ತು ಬಲಿಗಲ್ಲುಗಳಿವೆ. ವಿಜಯನಗರದ ಅರಸರ ಕಾಲದಲ್ಲಿ ರಚನೆಯಾಗಿದೆ. ದೇವಾ

ಲಯದ ಇತಿಹಾಸ ಮತ್ತು ಕಥೆಗಳು ಕುತೂಹಲಕಾರಿಯಾಗಿವೆ. ಕದಂಬ ಅರಸರು ಇಲ್ಲಿನ ದೇವಾಲಯಗಳನ್ನು ನಿರ್ಮಿಸಿದಂತೆ ಶಾಸನಗಳಿಂದ ಗೊತ್ತಾಗುತ್ತದೆ. ಕುಂಬಳೆ ಅರಸರ ಕಾಲದಲ್ಲಿ ಈ ಆಲಯವು ತನ್ನ ಔನ್ನತ್ಯದಿಂದ ಮೆರೆದಿದೆ. ಇವರ ಕಾಲವು ಹನ್ನೆರಡು ಅಥವಾ ಹದಿಮೂರನೆಯ ಶತಮಾನವಾಗಿದ್ದು ದೇವಾಲಯವನ್ನು ಅದೇ ಕಾಲಕ್ಕೆ ಸೇರಿಸಬಹುದು.

ವಿಜಯನಗರದ ಅರಸರ ಲಾಂಛನವು ಸಹ ವರಾಹವೇ ಆಗಿದೆ. ಅವರಿಗೆ ವರಾಹನ ಬಗೆಗಿದ್ದ ಗೌರವವು ಆದರಣೀಯವಾದುದು. ಈ ಅರಸರ ಕಾಲಕ್ಕೆ ದೇವಾಲಯವು ತುಂಬಾ ಉಚ್ಛ್ರಾಯ ಸ್ಥಿತಿಗೆ ತಲುಪಿದ್ದಿರಬೇಕು. ಜೈನ ಮತಾವಲಂಬಿಗಳಾದ ಸಾಳುವ ರಾಜರು ಕೂಡಾ ವರಾಹಸ್ವಾಮಿಯನ್ನು ತುಂಬ ಭಕ್ತಿ ಗೌರವಗಳಿಂದ ಕಂಡಿರುವುದು ತಿಳಿದುಬರುತ್ತದೆ. ದೇವರ ಪೂಜಾದಿಗಳಿಗೆ ಈ ರಾಜರೂ ಸಹ ಮಹತ್ವವನ್ನು ನೀಡಿ ಅದಕ್ಕೆ ಧಕ್ಕೆಯಾಗದಂತೆ ನೋಡಿಕೊಂಡವರಾಗಿದ್ದಾರೆ. ಇದು ಅವರ ಧಾರ್ಮಿಕ ಸಹಿಷ್ಣುತೆಯ ಪ್ರತೀಕವಾಗಿಯೂ ನಿಂತಿದೆ.

ಕೆಳದಿಯ ಅರಸರ ಕಾಲದಲ್ಲಿ ಈ ದೇವಾಲಯವು ಪರಿವರ್ತನೆಗೊಂಡಿತು. ಪೋರ್ಚುಗೀಸರ ಆಕ್ರಮಣದಿಂದ ದೇವಾಲಯದ ಆಸ್ತಿಪಾಸ್ತಿಗಳಿಗೆ ಅಡ್ಡಿಯುಂಟಾಗಬಹುದಿತ್ತು. ಆದರೆ ಕೆಳದಿ ರಾಜರು ಇದಕ್ಕೆ ಅವಕಾಶ ಕೊಡಲಿಲ್ಲ. ದೇವಾಲಯದ ಸುತ್ತ ಕಾಲುವೆಯನ್ನು ತೋಡಬೇಕೆಂಬ ಪೋರ್ಚುಗೀಸರ ಪ್ರಯತ್ನವು ಯಶಸ್ವಿಯಾಗಲಿಲ್ಲ. ಶಿವಪ್ಪ ನಾಯಕನು ಈ ದೇವಾಲಯ ಸಂರಕ್ಷಣೆಗಾಗಿ ಪೋರ್ಚುಗೀಸರೊಡನೆ ಹೋರಾಟಕ್ಕೆ ಇಳಿಯಬೇಕಾಗಿ ಬಂತು. ಆತನ ಹೋರಾಟದ ಫಲವಾಗಿ ದೇವಾಲಯದ ಧಾರ್ಮಿಕ ಕಟ್ಟಳೆಗಳಿಗೆ ಯಾವುದೇ ಊನವಾಗದೆ ಯಥಾಸ್ಥಿತಿಯಲ್ಲಿ ಮುಂದುವರೆದುಕೊಂಡು ಬರಲು ಸಾಧ್ಯವಾಗಿದೆ. ಹೀಗಾಗಿಯೇ ಮರವಂತೆಯ ಸುಂದರ ದೇವಾಲಯ ಇಂದಿಗೂ ಉಳಿದುಕೊಂಡು ಬರುವಂತಾಗಿದೆ.

ಕರಾವಳಿಯ ಆಯಕಟ್ಟಿನ ಸ್ಥಳದಲ್ಲಿರುವ ದೇವಾಲಯಕ್ಕೆ ವಿದೇಶೀಯರ ದಾಳಿಯಿಂದಾಗಬಹುದಾದ ಅನಾಹುತವನ್ನು ತಪ್ಪಿಸಿ ಅದನ್ನು ಸಂರಕ್ಷಿಸಿಕೊಂಡು ಬರುವಲ್ಲಿ ಕೆಳದಿಯ ನಾಯಕರ ಪಾತ್ರವು ಅತ್ಯಂತ ಗಣನೀಯವಾಗಿದೆ. ಇಂತಹ ದೇವಾಲಯದ ಒಂದು ಗರ್ಭಗೃಹದಲ್ಲಿ ಶ್ರೀ ನರಸಿಂಹ ಸ್ವಾಮಿಯನ್ನು ಕೂಡ ಪ್ರತಿಷ್ಠಾಪನೆ ಮಾಡಲಾಗಿದೆ.

ವರಾಹಮೂರ್ತಿಯೊಂದಿಗೆ ಪ್ರತಿಷ್ಠೆಗೊಂಡು ಆರಾಧಿಸಿಕೊಂಡು ಬರಲಾಗುತ್ತಿರುವ ಮರವಂತೆಯ ನರಸಿಂಹಸ್ವಾಮಿಯು ಭಕ್ತಜನರ ಅಭಿಲಾಷೆಗಳನ್ನು ನೆರವೇರಿಸುತ್ತ ಬಹುಜನರ ಆರಾಧ್ಯದೈವವಾಗಿದ್ದಾನೆ.

ಮರವಂತೆಗೆ ಬಂದು ಹೋಗುವವರ ಸಲುವಾಗಿ ಉತ್ತಮ ರೀತಿಯ ಸಂಚಾರ ವ್ಯವಸ್ಥೆ ಲಭ್ಯವಿದೆ.

## ಬಾಗಲಕೋಟೆ ಜಿಲ್ಲೆ

# ಬಾದಾಮಿ

ಕರ್ನಾಟಕ ರಾಜ್ಯದ ಪ್ರತಿಷ್ಠಿತ ಪ್ರವಾಸಿಕ್ಷೇತ್ರವಾಗಿರುವುದು ಬಾದಾಮಿ. ಬಾಗಲ ಕೋಟೆಗೆ ಸಮೀಪವಾಗಿರುವ ಈ ಸ್ಥಳವು ಬೆಂಗಳೂರಿನಿಂದ ಸುಮಾರು ಐದುನೂರಾ ಕಿಲೋಮೀಟರ್ ದೂರದಲ್ಲಿದೆ. ವಿಶ್ವವಿಖ್ಯಾತವಾದ ಗುಹಾಂತರ ದೇವಾಲಯಗಳಿಂದ ಬಾದಾಮಿಯು ಕಂಗೊಳಿಸುತ್ತಿದೆ. ಚಾಲುಕ್ಯರ ರಾಜಧಾನಿಯಾಗಿ ಇದು ಮೆರೆದಿದೆ. ಕ್ರಿಸ್ತಶಕ ನಾಲ್ಕನೆ ಶತಮಾನದಿಂದ ಎಂಟನೆ ಶತಮಾನದವರೆಗಿನ ಇದರ ಇತಿಹಾಸದಿಂದ ಬಾದಾಮಿಯ ಭವ್ಯತೆ ನಮಗೆ ಮನವರಿಕೆಯಾಗುತ್ತದೆ.

ಬಾದಾಮಿ ಪಟ್ಟಣದ ಹೊರವಲಯದಲ್ಲಿ ಲಯಣವೆಂದು ಕರೆಯಲಾಗುವ ಬೆಟ್ಟ-ಗುಡ್ಡಗಳ ಪರಿಸರದಲ್ಲಿರುವ ಗುಹೆಗಳು ಪ್ರಮುಖವಾದವು. ಇವನ್ನು ಬೌದ್ಧರ ಕಾಲದಿಂದಲೂ ಜನಪ್ರಿಯಗೊಳಿಸಲು ಶ್ರಮಿಸಲಾಗಿದೆ. ಚಾಲುಕ್ಯರ ಕಾಲದಲ್ಲಿ ಇದಕ್ಕೊಂದು ಸ್ಪಷ್ಟರೂಪ ದೊರೆತಿದೆ. ಇಲ್ಲಿರುವ ನಾಲ್ಕು ಗುಹೆಗಳಲ್ಲಿ ಮೂರನೆಯದಾದ ವೈಷ್ಣವ ಗುಹೆ ದೊಡ್ಡದಾಗಿದೆ. ಮಂಗಳೇಶನು (ಕಾಲ ಸುಮಾರು ೫೭೮) ಈ ಗುಹೆಯನ್ನು ನಿರ್ಮಿಸಿದನೆಂದು ಇಲ್ಲಿಯೇ ಶಾಸನ ಬರಹವು ತಿಳಿಸುತ್ತದೆ.

ಬಾದಾಮಿಯ ವಿಷ್ಣುಗುಹೆಯಲ್ಲಿರುವ ಶಿಲ್ಪಗಳು ಸಹ ಅತ್ಯದ್ಭುತವಾದವು. ಇಲ್ಲಿ ಪರವಾಸುದೇವ, ಭೂವರಾಹ ಮತ್ತು ಹರಿಹರರ ಶಿಲ್ಪಗಳೊಂದಿಗೆ ಕೇವಲ ನರಸಿಂಹನ ಸುಮಾರು ಐದು ಮೀಟರ್ ಎತ್ತರದ ಶಿಲ್ಪವಿದೆ. ಇದನ್ನು ನರಸಿಂಹ ಶಿಲ್ಪಗಳ ಉತ್ಕ್ರಾಂತಿಯಲ್ಲಿ ಅತಿಮುಖ್ಯವಾದುದ್ದೆಂದು ಹೇಳಲಾಗುತ್ತದೆ. ಇಂತಹ ನರಸಿಂಹನ ಬೃಹತ್ ಗಾತ್ರದ ಶಿಲ್ಪಗಳನ್ನು ನಾವಿಂದು ಹಂಪೆ, ಎಲ್ಲೋರದ ಗುಹೆಗಳಲ್ಲಿ ಕಾಣುತ್ತೇವೆ ಯಾದರೂ ಬಾದಾಮಿಯ ಈ ಶಿಲ್ಪದ ಸತ್ತ್ವಯುತವಾದ ಶೈಲಿಯು ಅಮೋಘವಾಗಿದ್ದು ತನ್ನದ್ದೇ ಆದ ಛಾಪು ಮೂಡಿಸುವಂತಿದೆ.

ಕೇವಲ ನರಸಿಂಹನೆಂದು ಕರೆಯಲಾಗುವ ಬಾದಾಮಿಯ ಈ ಶಿಲ್ಪವು ಕುಳಿತ ಭಂಗಿಯಲ್ಲಿರದೆ ನಿಂತಿರುವ ಭಂಗಿಯಲ್ಲಿರುವುದೊಂದು ವಿಶೇಷ. ಬೆಟ್ಟದಿಂದ ಹೊರಬಂದ ಹಾಗೆ ಬಿಡಿಸಲಾಗುವ ಈ ಮಾದರಿಯ ಶಿಲ್ಪಗಳು ಸಾಮಾನ್ಯವಾಗಿ ಸೌಮ್ಯ ಸ್ವರೂಪದ್ದಾಗಿ ರುತ್ತವೆ. ಆಸೀನವಾಗಿದ್ದಾಗ ಯೋಗಿಪಟ್ಟದಲ್ಲಿ ಕುಳಿತಿರುತ್ತವೆ. ಸ್ಥಾನಿಕ ಭಂಗಿಯಲ್ಲಿದ್ದಾಗ ಪದ್ಮಪೀಠದ ಮೇಲೆ ನಿಂತಿರುತ್ತವೆ. ಮೇಲಣ ಕೈಗಳಲ್ಲಿ ಶಂಖ-ಚಕ್ರಗಳಿದ್ದರೆ. ಕೆಳಗಿನ ಕೈಗಳಲ್ಲಿ ಬಲಭಾಗದ್ದು ಅಭಯ ಮುದ್ರೆಯಿಂದ ಕೂಡಿರುತ್ತದೆ. ಎಡಗೈ ಕುಳಿತಾಗ ತೊಡೆಯ ಮೇಲೆ ಊರಿಕೊಂಡಿರುವಂತೆ ಬಿಡಿಸಲಾಗಿರುತ್ತದೆ. ನಿಂತಿರುವಾಗ ಇದೇ

ಎಡಗೈಯನ್ನು ಕಟಿಹಸ್ತವನ್ನಾಗಿ ಬಿಡಿಸಲಾಗಿರುತ್ತದೆ. ಆದರೆ ಬಾದಾಮಿಯ ಪ್ರತಿಮಾ ವಿಧಾನದಲ್ಲಿ ಹಿಂದಿನ ಕೈಗಳೇನೂ ಈ ನಿಯಮಕ್ಕೆ ಅನುಸಾರವಾಗಿ ಕಾಣುವಂತಿದ್ದರೂ ಗಮನಾರ್ಹವಾದದ್ದು. ಕೇವಲ ನರಸಿಂಹ ಶಿಲ್ಪಗಳನ್ನು ಮಾತ್ರವೇ ಗಿರಿಜಾ ನರಸಿಂಹ ಎಂಬ ಮತ್ತೊಂದು ಹೆಸರಿನಿಂದಲೂ ಕರೆಯುತ್ತಾರೆ.

ಬಾದಾಮಿಯ ನರಸಿಂಹನ ಈ ಅಮೋಘವಾದ ಶಿಲ್ಪದಲ್ಲಿ ಆಯುಧಗಳು ತಮ್ಮ ಸಹಜವಾದ ಸ್ಥಿತಿಯಲ್ಲಿರುವಂತೆ ಬಿಡಿಸಲಾಗಿರುವುದಿಲ್ಲ. ಈ ಶಿಲ್ಪದಲ್ಲಿ ಕಾಣುವ ಶಂಖ-ಚಕ್ರ, ಗದಾ-ಪದ್ಮಗಳು ಮನುಷ್ಯ ಆಕೃತಿಯಲ್ಲಿರುತ್ತಾರೆ. ಪ್ರಾಚೀನ ಶಿಲ್ಪಗಳಲ್ಲಿ ಹೀಗಿರುವುದನ್ನು ನಾವು ಗುರುತಿಸಬಹುದಾಗಿದೆ. ಇದನ್ನು ಆಯುಧ ಪುರುಷರೆಂದು ಕರೆಯುತ್ತಾರೆ ತೂಗಾಡುತ್ತಿರುವಂತೆ ಕಾಣಬಹುದಾದ ಈ ಮನುಷ್ಯರೂಪದ ಶಂಖ-ಚಕ್ರಗಳನ್ನು ಮೇಲಕ್ಕೆ ಎತ್ತಿದ್ದ ಹಿಂಭಾಗದ ಎರಡು ಕೈಗಳಲ್ಲಿ ಹಿಡಿದಿರುವಂತೆ ಶಿಲ್ಪಿಯು ಬಿಡಿಸಿರುತ್ತಾನೆ. ಗದೆಯ ಮೇಲೆ ಊರಿನಿಂತಂತೆ ಕಾಣುವ ಮುಂಭಾಗದ ಎಡಗೈ ಕಡೆಗೆ ತಳ್ಳನೆ ನಡುವಿನ ಗದಾದೇವಿಯು ಶೋಭಿಸುತ್ತಿದ್ದಾಳೆ ಬಲಗಡೆ ಮೂರ್ತಿರೂಪತಳೆದ ಪದ್ಮದೇವಿಯಿರುವುದು ಕಾಣುತ್ತದೆ. ಆದರೆ ಎಡಭಾಗದ ಗದೆಯ ಕಲ್ಲಿನ ಭಾಗ ಸ್ವಲ್ಪ ಹಾಳಾಗಿದೆ.

ನರಸಿಂಹ ಶಿಲ್ಪದ ಎತ್ತರವು ಈಗಾಗಲೆ ತಿಳಿಸಿದಂತೆ ಸುಮಾರು ಐದು ಮೀಟರ್ ನಷ್ಟಿದ್ದು ಅಗಲ ಎರಡು ಮೀಟರ್‌ನಷ್ಟಿರಬಹುದು. ಇದು ಆಳವಾಗಿಯೂ ಇದ್ದು ಈ ಸ್ವಾಮಿಯ ಪಾದಗಳೇ ಸುಮಾರು ಎರಡು ಅಡಿ ಉದ್ದ ಹಾಗೂ ಮುಕ್ಕಾಲು ಅಡಿಗಿಂತಲೂ ಹೆಚ್ಚು ಅಗಲವಾಗಿರುತ್ತದೆ. ಎಡಭಾಗಕ್ಕೆ ತನ್ನ ಭಾರವನ್ನು ಹಾಕಿನಿಂತ ಕಾರಣ ಎಡಪಾದವು ಪಕ್ಕಕ್ಕೆ ಚಾಚಿಕೊಂಡಿದೆ. ಶಿಲ್ಪದ ಅಗ್ರಭಾಗದಲ್ಲಿ ಎಂದರೆ ತಲೆಯ ಮೇಲೆ ಬ್ರಹ್ಮದೇವರು-ರುದ್ರದೇವರು ತಮ್ಮ ದೇವಿಯರೊಂದಿಗೆ ತೇಲಿಕೊಂಡು ನಿಂತಿರುವಂತೆ ಕಾಣುತ್ತದೆ. ನರಸಿಂಹನನ್ನು ಹೊಗಳುತ್ತ ಕೀರ್ತಿಸುತ್ತ ಇರುವಂತೆ ಕಂಡು ಬರುವ ಈ ಶಿಲ್ಪಗಳ ಇರುವಿಕೆಯಿಂದ ನರಸಿಂಹನ ಮಹತ್ವವನ್ನು ಮನಗಾಣಬಹುದಾಗಿದೆ.

ನಮ್ಮ ನಾಡಿನ ನರಸಿಂಹ ಶಿಲ್ಪಗಳಲ್ಲಿ ಅದ್ಯಸ್ಥಾನವನ್ನು ಹೊಂದಿರುವ ಅದಿಪುರುಷ ನಂತೆ ಕಾಣುವ ಬಾದಾಮಿಯ ಈ ಶಿಲ್ಪವನ್ನು ಮತ್ತೊಂದು ಪ್ರಸಿದ್ಧ ಗುಹಾಶಿಲ್ಪವಾಗಿರುವ ಎಲ್ಲೋರಕ್ಕೆ ಶಿಲ್ಪ ನಿರ್ಮಾಣಕ್ಕಿಂತ ಪ್ರಾಚೀನವೆಂದು ಹೇಳಬಹುದಾಗಿದೆ. ಇಂತಹ ಸ್ವಾಮಿಯನ್ನು ಸ್ತುತಿಸಿದ ಪ್ರಸಿದ್ಧ ಕವಿಗಳು ದಾರ್ಶನಿಕರು ಎಷ್ಟೋ ಮಂದಿ ಇರಬಹುದು.

ಆದರೆ ಪ್ರಸ್ತುತ ಭಾಗವತ ಪರಂಪರೆಯ ಮಹಿಮಾನ್ವಿತರಾಗಿ ಇದ್ದ ಪ್ರಸನ್ನ ವೆಂಕಟದಾಸರಂತೂ ಈ ಸ್ಥಳದಲ್ಲಿ ಉತ್ತರದ ಮೆಟ್ಟಿಲುಗಳ ಮೇಲೆ ಕುಳಿತು ನರಸಿಂಹ ಸ್ತೋತ್ರದ ಕೆಲವು ರಚನೆಗಳನ್ನು ಹಾಡಿದಂತೆ ತಿಳಿದು ಬರುತ್ತಿರುವುದು ಬಾದಾಮಿ ನರಸಿಂಹನ ಮಕುಟವನ್ನಿಟ್ಟಂತಾಗಿದೆ. ಬಾದಾಮಿಗೆ ಬಸ್ ಮತ್ತು ರೈಲ್‌ಗಳ ಮೂಲಕ ಹೋಗಿಬರಲು ಧಾರಾಳ ವ್ಯವಸ್ಥೆಯಿದೆ.

# ಪಟ್ಟದಕಲ್ಲು

ಬಾಗಲಕೋಟೆ ಜಿಲ್ಲೆಯು ಸುಪ್ರಸಿದ್ಧವಾದ ಐತಿಹಾಸಿಕ ಸ್ಥಳಗಳನ್ನು ನಮ್ಮ ಸಂಸ್ಕೃತಿಗೆ ಕೊಡುಗೆಯಾಗಿ ನೀಡಿದೆ. ವಿಶ್ವವಿಖ್ಯಾತವಾದ ಬಾದಾಮಿ ಗುಹೆಗಳು, ರಾಜರ ಪ್ರತಿಷ್ಠೆಯ ಸ್ಥಳಗಳಾದ ಐಹೊಳೆ, ಪಟ್ಟದಕಲ್ಲುಗಳು, ಶಕ್ತಿದೇವತೆ ಬನಶಂಕರಿಯ ಆವಾಸ ಸ್ಥಾನಗಳು ಇಲ್ಲಿವೆ. ಪಟ್ಟದಕಲ್ಲು ಬಾದಾಮಿಯಿಂದ ಸುಮಾರು ಹದಿನೈದು ಕಿಲೋಮೀಟರ್ ದೂರದಲ್ಲಿದೆ. ದೇವಾಲಯ ಮಾದರಿ - ಶಿಲ್ಪಗಳಿಗೆ ಈ ಸ್ಥಳವು ಅತಿ ಮುಖ್ಯವಾದ ಕಾಣಿಕೆಯನ್ನು ನೀಡಿದೆ.

ನರಸಿಂಹನಿಗೆ ಪ್ರತ್ಯೇಕವಾದ ದೇವಾಲಯವೇನೂ ಪಟ್ಟದಕಲ್ಲಿನಲ್ಲಿ ಈಗ ಇರುವುದಿಲ್ಲ. ಆದರೂ ಇಲ್ಲಿ ಒಂದು ನರಸಿಂಹ ದೇವಾಲಯವಿದ್ದಿರಬೇಕೆಂಬ ಅಭಿಪ್ರಾಯ ಸಂಶೋಧಕರದ್ದಾಗಿದೆ. ಇದು ಸ್ಥೂಲವಾಗಿ ಎಂಟನೇ ಶತಮಾನದಲ್ಲಿದ್ದಿರಬೇಕು. ಆದರೂ ಸಹ 'ನರಸಿಂಹಶಿಲ್ಪ'ದ ವೈಭವ ವಿಶಿಷ್ಟತೆಗಳಿಗೆ ಈ ಸ್ಥಳದಲ್ಲಿರುವ ನರಸಿಂಹನ ಉಬ್ಬು ಶಿಲ್ಪವನ್ನು ಗಮನಿಸಬೇಕು.

ವಿರೂಪಾಕ್ಷ ದೇವಾಲಯದ ದಕ್ಷಿಣ ದಿಕ್ಕಿನ ಮಂಟಪವನ್ನು ಸರ್ವಶ್ರೇಷ್ಠವೆಂದು ಹೇಳಬಹುದು. ಈ ಮಂಟಪದ ಒಳಭಾಗದಲ್ಲಿ ಪ್ರವೇಶದ್ವಾರದ ಎಡಗಡೆಗೆ ಪೂರ್ವಾಭಿಮುಖವಾಗಿ ಒಂದು ಉನ್ನತವಾದ ರೀತಿಯ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ. ಇದನ್ನು ಗಮನಿಸಿದವರಿಗೆ ಎಲ್ಲೋರಾದ ಶಿಲ್ಪವು ನೆನಪಿಗೆ ಬಹಬಹುದು. ಇದನ್ನೇ ಗೌತಮಗಿರಿಯ ಶಿಲ್ಪವನ್ನು ಮಾಡಲು ರೂಪದರ್ಶಿಯಾಗಿಟ್ಟುಕೊಂಡಿರಬಹುದು. ಇದರ ಹಿಂಭಾಗದಲ್ಲಿ ಕಂಬದ ಮೇಲೆ ಹಿರಣ್ಯಕಶಿಪುವನ್ನು ಸೀಳುತ್ತಿರುವ ಚಿತ್ರವಿದೆ.

ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದ ಹೊರಗಡೆ ಕಂಬದ ಮೇಲೂ ಸಹ ಶ್ರೇಷ್ಠಮಾದರಿಯ ನರಸಿಂಹಶಿಲ್ಪವನ್ನು ಬಿಡಿಸಲಾಗಿದೆ. ಇದಲ್ಲದೆ ಪಟ್ಟದಕಲ್ಲಿನಲ್ಲಿ ನರಸಿಂಹಮೂರ್ತಿಯುಳ್ಳ ಶುಕನಾಸಿಯ ಪಟ್ಟಿಕೆಯೊಂದಿದೆ. ಇವೆಲ್ಲವೂ ಪಟ್ಟದಕಲ್ಲಿನ ಇತಿಹಾಸದಲ್ಲಿ ನರಸಿಂಹ ಶಿಲ್ಪಗಳ ವಿಶಿಷ್ಟತೆಯನ್ನೂ ಸ್ವಾಮಿಯ ಆರಾಧನೆಗಿದ್ದಿರಬಹುದಾದ ಮಹತ್ತ್ವವನ್ನು ತಿಳಿಸುತ್ತದೆ.

ಪಟ್ಟದಕಲ್ಲಿಗೆ ಹೋಗಿಬರುವವರ ಸಲುವಾಗಿ ಸಾಕಷ್ಟು ಪ್ರಮಾಣದಲ್ಲಿ ಖಾಸಗಿ ಮತ್ತು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವತಿಯಿಂದ ಬಸ್‌ಗಳ ಸಂಚಾರದ ವ್ಯವಸ್ಥೆಯಿದೆ. ಬೆಂಗಳೂರಿನಿಂದ ವಿಶೇಷ ಪ್ಯಾಕೇಜ್ ರೂಪದಲ್ಲಿ ಪ್ರಯಾಣಿಕರಿಗೆ ಪಟ್ಟದಕಲ್ಲು, ಬಾದಾಮಿ, ಐಹೊಳೆಗಳಿಗೆ ಪ್ರವಾಸದ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತಿದೆ. ಇದು ಒಂದು ರೀತಿಯಲ್ಲಿ ನರಸಿಂಹಸ್ವಾಮಿಯ ಭಕ್ತರಿಗೆ ವರವಾಗಿ ಪರಿಣಮಿಸಿದೆ.

## ಚಿಕ್ಕಮಗಳೂರು ಜಿಲ್ಲೆ

# ಮಚ್ಚೇರಿ

ಚಿಕ್ಕಮಗಳೂರು ಜಿಲ್ಲೆಯ ತಾಲೂಕು ಕೇಂದ್ರವಾಗಿರುವ ಕಡೂರಿಗೆ ನಾಲ್ಕು ಕಿಲೋಮೀಟರ್ ದೂರದಲ್ಲಿರುವ ಗ್ರಾಮ ಮಚ್ಚೇರಿ. ಕಡೂರಿನಿಂದ ಆಗ್ನೇಯ ದಿಕ್ಕಿನಲ್ಲಿ ಇದ್ದು ಸ್ವಾರಸ್ಯಕರ ಗ್ರಾಮವಾಗಿ ಮನಸೆಳೆಯುವಂತಿದೆ. ಪ್ರಾಚೀನತೆಗೆ ಹೆಸರಾದ ಈ ಜನಪದ ಭೂಮಿಯೊಂದಿಗೆ ಮಹಾಭಾರತದ ಘಟನೆಗಳನ್ನು ಹೊಂದಿಸಲಾಗಿದೆ. ಪಾಂಡವರು ಅಜ್ಞಾತವಾಸದ ಸಮಯದಲ್ಲಿ ಆಶ್ರಯ ಹೊಂದಿದ್ದ ವಿರಾಟರಾಯನ ರಾಜಧಾನಿಯಾದ ಮಾತ್ಸ್ಯಪುರಿಯೇ ಇಂದಿನ ಮಚ್ಚೇರಿ ಎಂಬ ನಂಬಿಕೆಯು ಬಲವಾಗಿದೆ.

ಪ್ರಾಕೃತಿಕ ಸಂಪತ್ತಿನಿಂದ ಕೂಡಿ ಹರಿಯುವ ವೇದವತಿ ನದಿಯು ಬಂಡೆಗಳ ಮೇಲೆ ಹರಿಯುತ್ತ ಏಳು ಕಡೆ ಬಂಡೆಯನ್ನು ಕೊರೆದಿದೆ. ಇದನ್ನು ಕುಂಡಿಹೊಳೆಯೆಂದು ಸ್ಥಳೀಯವಾಗಿ ಕರೆಯುತ್ತಾರೆ. ಇದಕ್ಕೆ ಸ್ವಲ್ಪ ದೂರದಲ್ಲೊಂದು ಗುಡ್ಡವಿದ್ದು ಇದಕ್ಕೆ ಕೀಚಕನ ಗುಡ್ಡವೆಂಬ ಹೆಸರಿದೆ. ಈ ಗುಡ್ಡದ ಮೇಲೆ ದೇವಸ್ಥಾನವಿದೆ. ಪ್ರಾಚೀನತೆಗೆ ನಿದರ್ಶನವಾಗಿರುವ ಈ ಸ್ಥಳವು ಮಹತ್ವಪಾದ ಸಂಗತಿಗಳಿಂದ ಕೂಡಿರುವುದಾಗಿದೆ.

ಮಚ್ಚೇರಿಯಲ್ಲಿರುವ ಯೋಗಾ ನರಸಿಂಹಸ್ವಾಮಿ ದೇವಾಲಯವು ದುಸ್ಥಿತಿಯಿಂದ ಕೂಡಿದೆ. ದೇವಾಲಯದ ಹೊರ ಪ್ರಾಕಾರ ಬಿದ್ದುಹೋಗಿದೆ. ಗರ್ಭಗೃಹ, ಸುಕನಾಸಿ, ನವರಂಗ, ಮೂಲಮಂಟಪ ಮತ್ತು ಕೈಸಾಲೆಗಳು ಉಳಿದುಕೊಂಡಿವೆ. ಇದೊಂದು ಪ್ರಾಚೀನ ದೇವಸ್ಥಾನವಾಗಿದೆ. ಗರ್ಭಗೃಹದಲ್ಲಿ ಯೋಗಾನರಸಿಂಹನ ಮೂರ್ತಿಯಿದೆ. ಈ ಆಲಯವು ಮಚ್ಚೇರಿಯ ಧಾರ್ಮಿಕ ಸಂಪತ್ತಿಗೊಂದು ನಿದರ್ಶನವಾಗಿದೆ.

# ಹರಿಹರಪುರ

ಹರಿಹರಪುರವು ಕೊಪ್ಪಕ್ಕೆ ಪಶ್ಚಿಮದಲ್ಲಿ ಹತ್ತು ಕಿಲೋಮೀಟರ್ ದೂರದಲ್ಲಿದೆ. ತುಂಗಾ ನದಿಯ ಎಡದಂಡೆಯ ಮೇಲಿರುವ ಈ ಗ್ರಾಮವು ಪ್ರಾಚೀನವಾದ ಅಗ್ರಹಾರವಾಗಿದ್ದ ಹಾಗೆ ತಿಳಿದುಬರುತ್ತದೆ. ವಿಜಯನಗರದ ಅರಸನಾದ ಇಮ್ಮಡಿ ಹರಿಹರನ ಮತ್ತು ಅರಗದ ಆಡಳಿತಾಧಿಕಾರಿ ಸೀಬಣ್ಣ ಒಡೆಯರ ಶಿಲಾಶಾಸನಗಳು ಇಲ್ಲಿ ದೊರೆಯುತ್ತವೆ.

ಶೃಂಗೇರಿಗೆ ಸಮೀಪವಾಗಿರುವ ಕೊಪ್ಪದಲ್ಲಿ ಅದ್ವೈತ ಸಂಪ್ರದಾಯದ ಮಠವೊಂದಿದೆ. ಅದರಲ್ಲಿ ಶಾರದಾಂಬ ಮತ್ತು ನರಸಿಂಹದೇವರ ದೇವಾಲಯಗಳಿವೆ. ಇಲ್ಲಿರುವ ನರಸಿಂಹಸ್ವಾಮಿಯನ್ನು ಶಂಕರಾಚಾರ್ಯರ ಶಿಷ್ಯರಲ್ಲಿ ಒಬ್ಬರಾಗಿದ್ದ ಸುರೇಶ್ವರಾಚಾರ್ಯರು ಪ್ರತಿಷ್ಠಾಪನೆ

ಮಾಡಿಸಿದ ಹಾಗೆ ತಿಳಿದುಬರುತ್ತದೆ. ಹರಿಹರಪುರದ ಈ ನರಸಿಂಹಸ್ವಾಮಿಗೆ ಪ್ರತಿವರ್ಷವೂ ವೈಶಾಖ ಮಾಸದಲ್ಲಿ ವಿಜೃಂಭಣೆಯಿಂದ ರಥೋತ್ಸವ ಕೈಂಕರ್ಯಗಳನ್ನು ಭಕ್ತಾದಿಗಳು ನೆರವೇರಿಸಿ ಕೊಂಡು ಬರುತ್ತಿದ್ದಾರೆ.

# ಬಗ್ಗವಳ್ಳಿ

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನಲ್ಲಿರುವ ಚಿಕ್ಕಗ್ರಾಮ ಬಗ್ಗವಳ್ಳಿ, ಒಂದು ಕಾಲಕ್ಕೆ ತುಂಬಾ ವೈಭವದಿಂದ ಇದ್ದ ಈ ಸ್ಥಳದಲ್ಲಿ ಪ್ರತಿಷ್ಠಿತ ರಾಜ ಕುಟುಂಬ ಗಳಲ್ಲೊಂದಾದ ಹೊಯ್ಸಳರ ದೊರೆ ನರಸಿಂಹ ಬಲ್ಲಾಳನು ಯೋಗಾನರಸಿಂಹ ದೇವಾಲಯ ವನ್ನು ನಿರ್ಮಾಣ ಮಾಡಿದ. ಹೊಯ್ಸಳ ದೊರೆಗಳು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಇದರ ನಿರ್ಮಾಣ ಕಾರ್ಯವು ನೆರವೇರಿತು. ದೇವಾಲಯಕ್ಕೆ ಬಳಸಿರುವ ಸಾಮಗ್ರಿಯೆಲ್ಲವೂ ವಿಶಿಷ್ಟವೆಂದೇ ಹೇಳಬೇಕು. ಹೊಯ್ಸಳ ಶಿಲ್ಪದ ವಿಚಾರದಲ್ಲಂತೂ ಎರಡು ಮಾತಿಲ್ಲ.

ಸುಮಾರು ಹನ್ನೆರಡನೆ ಶತಮಾನದ ಅಂತ್ಯಭಾಗದಲ್ಲಿ ಇದರ ನಿರ್ಮಾಣದ ಮೊದಲ ಹಂತವು ನಡೆದಿದೆ. ಅದೇ ಕಾಲದಲ್ಲಿ ದೇವಸ್ಥಾನದ ಉದ್ಘಾಟನೆಯಾಗಿರಬೇಕೆಂದು ಭಾವಿಸಬಹುದು. ಮುಂದೆ ಸುಮಾರು ಮುನ್ನೂರು ವರ್ಷಗಳಲ್ಲಿ ದೇವಾಲಯದ ಇತರ ಭಾಗಗಳ ನಿರ್ಮಾಣ ಮತ್ತು ಅಭಿವೃದ್ಧಿಗಳು ನಡೆದಿರುತ್ತವೆ. ಹನ್ನೆರಡನೆ ಶತಮಾನದ ಅಂತ್ಯಕಾಲದಲ್ಲಿ ಇಲ್ಲಿ ನಡೆಯಬೇಕಾದ ಅರ್ಚನೆಗೆ ದತ್ತಿಗಳನ್ನು ಹಾಕಲಾದ ವಿವರಗಳಿವೆ. ಸೂರ್ಯಚಂದ್ರರಿರುವವರೆಗೆ ಅರ್ಚನಾದಿಗಳು ಹಾಗೂ ಪೂಜೆ ನಡೆಯಬೇಕೆಂಬ ವಿಚಾರವು ಕಲ್ಲಿನ ತೊಲೆಯ ಮೇಲಿನ ಶಾಸನದಿಂದ ತಿಳಿಯುತ್ತದೆ.

ದೇವಾಲಯವು ಈಚೆಗೆ ತನ್ನ ವೈಭವವನ್ನು ಕಳೆದುಕೊಂಡು ಕಷ್ಟದಲ್ಲಿದೆ. ಅರ್ಚಕರಿಗೆ ಆಧಾರವಿಲ್ಲದೆ ಭೂಮಿ-ಕಾಣಿಗಳನ್ನು ಒತ್ತೆಯಿಟ್ಟೋ ಇಲ್ಲವೆ ಮಾರಿಕೊಂಡೋ ಹೋಗಿರ ಬಹುದು. ವಿಗ್ರಹಚೋರರ ಕಾರಣದಿಂದ ತನ್ನೆಲ್ಲ ಉತ್ತಮ ಶಿಲ್ಪಸಂಪತ್ತನ್ನು ದೇವಾಲಯವು ಕಳೆದುಕೊಳ್ಳುವಂತಾಗಿದೆ.

ಈ ದೇವಾಲಯದ ಅಭಿವೃದ್ಧಿ ಬಗ್ಗೆ ಪತ್ರಿಕೆಗಳ ಮೂಲಕ ಪ್ರಸಿದ್ಧ ಲೇಖನಗಳು ಪ್ರಕಟಗೊಂಡಿವೆಯಾದರೂ ಸಂಬಂಧಿಸಿದ ಧಾರ್ಮಿಕ ದತ್ತಿ ಇಲಾಖೆಯಾಗಲಿ, ಸರ್ಕಾರವಾಗಲಿ ಸಾರ್ವಜನಿಕರಾಗಲಿ ಗಮನಿಸುವ ಪ್ರಯತ್ನವನ್ನು ಮಾಡಿಲ್ಲವೆಂದು ವಿಷಾದದಿಂದ ಹೇಳಬೇಕಾ ಗುತ್ತದೆ. ಆದರೆ ಊರಿನ ಗಣ್ಯ ವ್ಯಕ್ತಿಗಳೊಬ್ಬರು ಇದನ್ನು ಪ್ರಾಚ್ಯವಸ್ತು ಇಲಾಖೆಗೆ ಒಪ್ಪಿಸುವ ಪ್ರಯತ್ನವನ್ನು ನಡೆಸಿರುವುದಂತೂ ಶ್ಲಾಘನೀಯ ವಿಚಾರವೆಂದು ಭಾವಿಸಬಹು ದಾಗಿರುತ್ತೆ. ಇದಕ್ಕೆ ಸಂಬಂಧಪಟ್ಟವರು ಸ್ಪಂದಿಸಿದಲ್ಲಿ ಅಮೂಲ್ಯವಾದ ಶಿಲಾಸಂಪತ್ತನ್ನು ಒಳಗೊಂಡ ದೇವಾಲಯವೊಂದನ್ನು ನಾವು ಮುಂದಿನ ಪೀಳಿಗೆಗೂ ರಕ್ಷಿಸಿ ಕೊಟ್ಟಂತೆಯೇ ಸರಿ.

# ಬೆಳವಾಡಿ

ಚಿಕ್ಕಮಗಳೂರು ಎಂದ ಕೂಡಲೆ ನೆನಪಿಗೆ ಬರುವುದು ಬೆಳಗಾಗಿ ಎದ್ದಕೂಡಲೆ ನಮಗೆ ಮುದನೀಡುವ ಕಾಫಿ. ಕಾಫಿ ನೀಡಿದವರಿಗೆ ಎಲ್ಲ ಸೌಭಾಗ್ಯವೂ ಸಿಗಲಿ ಎಂದು ಹರಸುವ ಮಟ್ಟಕ್ಕೆ ನಾವು ಹೋಗಬಹುದು. ಇಂತಹ ಈ ಜಿಲ್ಲೆಯಲ್ಲಿ ಬೆಳವಾಡಿಯು ಒಂದು ತಾಲೂಕು ಕೇಂದ್ರ, ಇದು ಹಳೆಯಬೀಡಿಗೆ ಸಮೀಪ. ಮಹಾಭಾರತದಲ್ಲಿ ಈ ಸ್ಥಳವನ್ನು ಏಕಚಕ್ರ ನಗರವೆಂದು ವರ್ಣಿಸಲಾಗಿದೆಯಂತೆ. (ಕೋಲಾರ ಜಿಲ್ಲೆಯ ಕೈವಾರಕ್ಕೂ ಸಹ ನಮ್ಮ ಜಾನಪದರು ಈ ಹೆಸರನ್ನೇ ಕೊಡುತ್ತಾರಲ್ಲವೆ?) ಮಹಾಭಾರತ ವೀರನಾದ (ರನ್ನನ ಗದಾಯುದ್ಧ) ಪಾಂಡವ ಮಧ್ಯಮನಾದ ಭೀಮಸೇನನು ಬಕಾಸುರನನ್ನು ಕೊಂದ ಜಾಗವಿದು ಎಂದು ಹೇಳುತ್ತಾರೆ. ಇಲ್ಲಿಯ ಜನ ಪ್ರತಿವರ್ಷವೂ ಆ ನೆನಪಿನಲ್ಲಿ ಬಂಡಿ ಬನವೆಂಬ ಹಬ್ಬವನ್ನು ಆಚರಿಸುವ ಸಂಪ್ರದಾಯವಿದೆ.

ಬೆಳವಾಡಿಯು ಒಂದು ಕಾಲಕ್ಕೆ ಜೈನ ಆರಾಧನಾ ವಿಶೇಷಗಳಿಂದ ಕೂಡಿದ ಸ್ಥಳವಾಗಿತ್ತು. ಕ್ರಮೇಣ ಈ ಸ್ಥಳವು ವೈಷ್ಣವಾರಾಧನೆಯ ಮಹತ್ವವನ್ನು ಪಡೆದು ಆ ಕಾರಣವಾಗಿ ಇಂದಿಲ್ಲಿ ವೀರನಾರಾಯಣ ದೇವಾಲಯವನ್ನು ಕಾಣಲು ಸಾಧ್ಯವಿದೆ. (ಗದಗಿನಲ್ಲೂ ಸಹ ವೀರನಾರಾಯಣ ಗುಡಿಯಿರುವುದನ್ನು ವಾಚಕಮಹಾಶಯರು ಗಮನಿಸಿದ್ದಾರೆಂದು ನನ್ನ ಭಾವನೆ) ಇಂತಹ ವೀರನಾರಾಯಣ ದೇವಾಲಯವು ಇತರ ಹೊಯ್ಸಳ ಸ್ಮಾರಕಗಳಂತೆ 'ತ್ರಿಕೂಟಾಚಲ'ವಾಗಿ ಕಂಗೊಳಿಸುತ್ತಿದೆ. ಈ ಆಲಯದ ಉತ್ತರದ ದಿಕ್ಕಿನಲ್ಲಿ ಯೋಗಾನರಸಿಂಹನನ್ನು ಪ್ರತಿಷ್ಠೆ ಮಾಡಲಾಗಿದ್ದು ಇದೊಂದು ಪ್ರಶಸ್ತ ಸ್ಥಳವಾಗಿ ಆರಾಧನಾ ಕೇಂದ್ರವಾಗಿ ಕಂಡುಬಂದಿದೆ.

ತ್ರಿಕೂಟಾಚಲಗಳಲ್ಲಿ ದೊಡ್ಡದಾದ ಬೆಳವಾಡಿಯ ಯೋಗಾನರಸಿಂಹ ದೇವಾಲಯವು ತುಂಬ ಸುಂದರವಾಗಿದೆ. ಇಲ್ಲಿನ ಉಪ್ಪರಿಗೆಯನ್ನು ಆನೆಗಳು ಹೊತ್ತುಕೊಂಡಂತಿದೆ. ನೂರಾರು ಆನೆಗಳಿವೆ (ಕಲ್ಲಿನವು) ಒಂದರಂತೆ ಮತ್ತೊಂದು ಕಾಣುವುದಿಲ್ಲ. ಮಧುಶಿಲಾ ನೃಸಿಂಹನೆಂದು ಕರೆಯಲಾಗುವುದು ಯೋಗಾನರಸಿಂಹ ಮೂರ್ತಿಯು ನೋಡುವ ಕಣ್ಣುಗಳಿಗೆ ಮಧುರವಾದ ಅನುಭವವನ್ನು ನೀಡುತ್ತದೆ. ಜೇನುತುಪ್ಪದ ಬಣ್ಣದಿಂದ ಕೂಡಿದ ಶಿಲೆಯಲ್ಲಿ ಇದನ್ನು ಕಡೆದಿರುವ ಕಾರಣ ಈ ಮೇಲಿನ ಹೆಸರು ಸ್ವಾಮಿಗೆ ಬಂದಿರಬಹುದಾಗಿದೆ.

ಸುಮಾರು ಹದಿಮೂರನೇ ಶತಮಾನಕ್ಕೆ ಪ್ರಸಿದ್ಧಿಯನ್ನು ಗಳಿಸಿದ್ದ, ಹೊಯ್ಸಳ ಶೈಲಿಯ ಘನತೆ ಖ್ಯಾತಿವೆತ್ತ ದೊಡ್ಡ ದೇವಾಲಯವಾಗಿ ಬೆಳವಾಡಿಯ ಈ ಆಲಯವು ಶೋಭಿಸುತ್ತಿದೆ. ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಈ ದೇವಸ್ಥಾನವನ್ನು ಶೃಂಗೇರಿಮಠಕ್ಕೆ ದತ್ತಿಯಾಗಿ ನೀಡಿರುತ್ತಾರೆ ಎಂಬುದಕ್ಕೆ ಶಾಸನಾಧಾರಗಳು ಲಭಿಸುತ್ತವೆ.

## ಗುಲಬರ್ಗಾ ಜಿಲ್ಲೆ

# ಸುರಪುರ

ಗುಲಬರ್ಗ ಜಿಲ್ಲೆಯ ಒಂದು ತಾಲೂಕು ಪ್ರದೇಶವಾಗಿರುವ ಇದು ಜಿಲ್ಲಾ ಕೇಂದ್ರಕ್ಕೆ ಸುಮಾರು ತೊಂಬತ್ತಾರು ಕಿಲೋಮೀಟರ್ ದೂರದಲ್ಲಿದೆ. ಅದೊಂದು ಕಾಲಕ್ಕೆ ಸುರಪುರವು ಪ್ರಸಿದ್ಧ ಸಂಸ್ಥಾನವಾಗಿ ಮೆರೆದಿತ್ತು. ರಾಜಾ ವೆಂಕಟಪ್ಪ ನಾಯಕ, ರಾಜಾ ಸಿದ್ದನಾಯಕರು ಇಲ್ಲಿನ ಸುಪ್ರಸಿದ್ಧ ವ್ಯಕ್ತಿಗಳು. ಇಂತಹ ಪ್ರಸಿದ್ಧ ಮನೆತನಕ್ಕೆ ಒಳಪಟ್ಟ ಈ ಸ್ಥಳವೂ ಸಹ ಹೆಸರಿಗೆ ತಕ್ಕ ಹಾಗೆ ಸುರರಪುರವೇ ಆಗಿದೆ.

ಸಾರ್ಥಕವಾದ ಹೆಸರನ್ನು ಹೊಂದಿರುವ ಸುರಪುರದಲ್ಲಿ ಜೀವನದ ಸಾರ್ಥಕತೆಯನ್ನು ಸಂಕೇತಿಸುವ ದೇವಾಲಯಗಳಿಗೆ ಕೊರತೆಯಾಗಿಲ್ಲ. ಇಲ್ಲಿರುವ ದೇವಾಲಯಗಳಿಗೂ ಸಹಾ ಇಲ್ಲಿ ದೇವತೆಗಳು ವಾಸಿಸುತ್ತಿದ್ದಾರೆ ಎಂಬ ಖ್ಯಾತಿಯಿದೆ. ಎಲ್ಲ ದೇವತೆಗಳೂ ಇಲ್ಲಿಯೇ ತಂಗಿದ್ದ ಕಾರಣ ಇದಕ್ಕೆ ಸುರಪುರವೆಂಬ ಹೆಸರಿದೆಯೆಂದು ಹೇಳುತ್ತಾರೆ.

ನೃಸಿಂಹಾಚಾರ್ಯ ಎಂಬ ಕರ್ಮಠ ಬ್ರಾಹ್ಮಣರಿಗೆ ಸುಮಾರು ಎರಡುನೂರು ವರ್ಷಗಳ ಹಿಂದೆ ಸ್ವಪ್ನದಲ್ಲಿ ಬಂದು'ನಾನು ಭೂಗತನಾಗಿರುವೆ. ನನ್ನನ್ನು ತಂದು ಪ್ರತಿಷ್ಠಾಪಿಸಿ' ಎಂದು ಹೇಳಿದ ಹಾಗೆ ಆದಾಗ ಆಚಾರ್ಯರು ಪರಮಾತ್ಮನನ್ನು ಕರೆತರಲು ಹೊರಡುತ್ತಾರೆ. ಭೂಮಿಯನ್ನು ಅಗೆದಾಗ ಅಲ್ಲಿ ಮೊದಲು ಸಾಲಿಗ್ರಾಮಗಳು ಕಂಡುಬರುತ್ತವೆ. ಹಾಗೆಯೇ ಅಗೆಯುತ್ತಿದ್ದಾಗ ಒಂದು ಸರ್ಪವು ಅವರ ಕೈಗೆ ಸುತ್ತಿಕೊಂಡಿತಂತೆ. ಅನಂತರ ನರಸಿಂಹ ಸ್ವಾಮಿಯು ಶಿಲಾರೂಪದಲ್ಲಿ ಹೊರಬಂದನೆಂದು ಹೇಳುತ್ತಾರೆ.

ನರಸಿಂಹಸ್ವಾಮಿಯ ವಿಗ್ರಹವು ಹಿರಣ್ಯಕಶಿಪುವನ್ನು ತೊಡೆಯ ಮೇಲೆ ಹಾಕಿಕೊಂಡು ಸೀಳುತ್ತಿರುವಂತಿದೆ. ಸುಂದರವಾದ ಶಿಲಾರೂಪವಾಗಿದೆ. ಇದನ್ನು ಸೌಮ್ಯನಾಮ ಸಂವತ್ಸರದ ಶ್ರಾವಣ ಶುದ್ಧ ತ್ರಯೋದಶಿಯ ದಿನ ಪ್ರತಿಷ್ಠೆ ಮಾಡಲಾಗಿದೆ. ಅನಂತರ ಸುರಪುರದ ದೊರೆಗಳು ದೇವಾಲಯವನ್ನು ಕಟ್ಟಿಸಿ ಪೂಜಾದಿಗಳು ಸಾಂಗವಾಗಿ ಸಾಗಲು ಸಾಕಷ್ಟು ಭೂಮಿ ಕಾಣಿಗಳನ್ನು ನೀಡಿರುತ್ತಾರೆ.

ನರಸಿಂಹಸ್ವಾಮಿಯ ಉತ್ಸವವು ವೈಶಾಖ ಶುದ್ಧ ಸಪ್ತಮಿಯಿಂದ ತೊಡಗಿ ಬಹುಳ ಪ್ರತಿಪದದವರೆಗೆ ನಡೆಯುತ್ತದೆ. ತಮ್ಮ ಮೂಲ ಪುರುಷರಾದ ಆಚಾರ್ಯರು ಹಾಕಿಕೊಟ್ಟ ಮಾರ್ಗದಲ್ಲಿಯೇ ಇಂದಿನ ಅರ್ಚಕರು ಪೂಜಾ ಕೈಂಕರ್ಯಗಳನ್ನು ಸಂಪ್ರದಾಯ ಬದ್ಧವಾದ ರೀತಿಯಲ್ಲಿ ತುಂಬಾ ವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಮೌನ ಭಾರ್ಗವ ಗೋತ್ರದ ಕುಪ್ಪಾಚಾರ್ಯರೆಂಬ ಬ್ರಾಹ್ಮಣ ವ್ಯಕ್ತಿಯು ಸಂಸ್ಕೃತಿ ಭಾಷೆಯಲ್ಲಿ ಸುರಪುರದ ಶ್ರೀನರಸಿಂಹ ದೇವರ ಚರಿತ್ರೆಯನ್ನು ಬರೆದಿರುವ ಹಾಗೆ ತಿಳಿದು ಬರುತ್ತದೆ.

## ಬಳ್ಳಾರಿ ಜಿಲ್ಲೆ

# ಮಾಗಳ

ತುಂಗಭದ್ರಾ ನದಿಯ ದಂಡೆಯ ಮೇಲಿರುವ ಮಾಗಳವು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿಗೆ ಸೇರಿದೆ. ಊರಿಂದ ಹೊರಗೆ ನದಿಯ ದಂಡೆಯ ಮೇಲೆ ರಂಗಾಪುರವೆಂಬ ಗ್ರಾಮವೊಂದಿದ್ದು ಇದು ಈಗ ಬೇಚರಾಕ್ ಆಗಿದೆ. ಇಲ್ಲಿನ ದೇವಾಲಯ ದಲ್ಲಿ ಉಗ್ರನರಸಿಂಹ ಶಿಲ್ಪವಿದೆ. ಇಲ್ಲಿರುವ ಶಿಲ್ಪವು ಪ್ರಾಚೀನ ಸ್ಮಾರಕವೆಂದು ಹೇಳಬಹುದು. ಸಾಧಾರಣವಾಗಿ ಕಟ್ಟಲಾಗಿರುವ ಈ ಆಲಯಕ್ಕೆ ಹೊಂದಿಕೊಂಡಂತೆ ಪಾಕಶಾಲೆ ಮತ್ತು ಭೋಜನಶಾಲೆಗಳಿವೆ. ಮೂರ್ತಿಶಿಲ್ಪದ ದೃಷ್ಟಿಯಿಂದ ಕುತೂಹಲಕಾರಿಯಾಗಿರುವ ನರಸಿಂಹ ಸ್ವಾಮಿಯು ಮನೋಜ್ಞವಾಗಿ ಮನಸೆಳೆಯುವಂತಿದ್ದಾನೆ. ಈ ಆಲಯವನ್ನೂ ಪ್ರಾಚ್ಯವಸ್ತು ಇಲಾಖೆಯು ತನ್ನ ವ್ಯಾಪ್ತಿಗೆ ಸೇರಿಸಿಕೊಂಡಿದೆ.

ಮಾಂಗೊಳ ಎಂಬುದು ಮಾಗಾಳ, ಮಾಗಳ ಎಂದಾಗಿದೆಯೆಂಬುದು ಸಾಮಾನ್ಯ ವಾದ ಊಹೆ. ತುಂಗಭದ್ರಾ ನದಿದಂಡೆಯ ಮೇಲಿರುವ ಈ ಊರಿಗೆ ವಿಠಲಾಪುರದಿಂದ ತೆಪ್ಪ ಅಥವಾ ಯಂತ್ರಚಾಲಿತ ದೋಣಿಯ ಮೂಲಕ ನದಿಯನ್ನು ದಾಟಿ ಹೋಗಬೇಕು. ತೆಪ್ಪದಿಂದ ಇಳಿದ ಕೂಡಲೇ ಎಡಭಾಗಕ್ಕೆ ಸುಮಾರು ಮುನ್ನೂರು ಮೀಟರ್ ದೂರದಲ್ಲಿ ರಂಗಾಪುರದ ನರಸಿಂಹನನ್ನು ಸಂದರ್ಶಿಸಬಹುದು. ಮಾಗಳದ ನರಸಿಂಹ ಅಥವಾ ರಂಗಾಪುರದ ನರಸಿಂಹನೆಂದು ಕರೆಯಲಾಗುವ ಈ ದೇವಾಲಯವನ್ನು ಬೇಚರಾಕ್ ಗ್ರಾಮದ ಧಾರ್ಮಿಕ ಸಂಪತ್ತು ಎಂದು ಹೇಳಬಹುದು.

ಮಾಗಳದಲ್ಲಿ ಪ್ರತ್ಯೇಕವಾದ ತ್ರಿಕೂಟಾಚಲ ದೇವಸ್ಥಾನವಿದೆ. ಇದು ಸೂರ್ಯ ನಾರಾಯಣ, ನಂದಗೋಪಾಲ, ಶಿವಲಿಂಗಗಳನ್ನು ಹೊಂದಿದೆ. ಆದರೆ ಇದನ್ನು ಸೂರ್ಯ ನಾರಾಯಣಸ್ವಾಮಿ ದೇವಾಲಯವೆಂದೇ ಕರೆಯುತ್ತಿದ್ದಾರೆ. ನರಸಿಂಹನೊಂದಿಗೆ ಸಹ ಮಾಗಳದ ಸಂಬಂಧವಿರುವ ಕಾರಣ ಮಾಗಳದ ನರಸಿಂಹನೆಂದೂ ಗುರುತಿಸಲಾಗುತ್ತಿದೆ. ಕಲ್ಯಾಣದ ಚಾಲುಕ್ಯರ ಕಾಲದಿಂದ ಹೊಯ್ಸಳರ ಕಾಲದವರೆಗೆ, ತದನಂತರ ವಿಜಯನಗರ ಅರಸರ ಕಾಲಕ್ಕೂ ತನ್ನ ಇತಿಹಾಸದ ಬಾಹುಗಳನ್ನು ಚಾಚಿಕೊಂಡು ನಿಂತ ಇಲ್ಲಿನ ಆಲಯ ಮತ್ತು ಸ್ವಾಮಿಗಳು ಆಸಕ್ತಿಯನ್ನು ಕೆರಳಿಸುವಂತಿವೆ.

ಈ ಸ್ಥಳವನ್ನು ತೀರ್ಥಕ್ಷೇತ್ರವೆಂದು ಸಹಾ ಗುರುತಿಸಲು ಸಾಧ್ಯವಾಗುವ ಪರಿಸರ ವಿಲ್ಲಿದೆ. ಇದು ಸನ್ಯಾಸಿಗಳಿಗೆ, ಯೋಗಿಗಳಿಗೆ ಆಶ್ರಯಸ್ಥಾನವಾಗಿದೆ. ಶಿಲಾಯುಗದ ನಿವೇಶನವೂ ಇದು ಆಗಿದ್ದಿರಬಹುದು ಎಂಬುದಕ್ಕೆ ಇಲ್ಲಿನ ನದಿಯ ದಂಡೆಯ ಹೊಲದಲ್ಲಿ ದೊರೆತಿರುವ ಆಯುಧಗಳೇ ಕಾರಣವೆನ್ನಬಹುದು. ಆದರೆ ಇವೆಲ್ಲಕ್ಕಿಂತಲೂ ಮುಖ್ಯ

ವಾದುದ್ದು ಇತಿಹಾಸಕಾಲ. ಈ ಕಾಲದ ಮಹತ್ವವನ್ನು ಸಾರುವ ನಾಲ್ಕಾರು ಶಾಸನಗಳ ಮೂಲಕವಾಗಿ ನಮಗೆ ಇಲ್ಲಿನ ಹಲವೊಂದು ವಿಚಾರಗಳು ಮನನೀಯವಾಗುತ್ತವೆ.

ಚಾಲುಕ್ಯ ವಿಕ್ರಮಾದಿತ್ಯನ (ಆರನೆಯವನು) ಕಾಲಕ್ಕೆ, ಎಂದರೆ ಕ್ರಿ.ಶ. ೧೧೧೬ಕ್ಕೆ ಸೇರುವ ರಂಗಾಪುರದ ಶಾಸನದಲ್ಲಿ ಮಾಗಳದ ಇತಿಹಾಸವಿದೆ. ಬಹುಶಃ ಅಂದಿನ ಕಾಲಕ್ಕೆ ಮಾಗಳ-ರಂಗಾಪುರಗಳು ಜೋಡಿ ಸಂಸ್ಥಾನವಾಗಿದ್ದಿರಬೇಕು. ಕಲೆಗಾರಿಕೆಯ ಉನ್ನತಿಯನ್ನು ಊರಿನ ದೇವಾಲಯವೂ, ಧಾರ್ಮಿಕ ತೇಜೋಶಕ್ತಿಯನ್ನೂ ದಂಡೆಯಲ್ಲಿರುವ ನರಸಿಂಹನ ಆಲಯವೂ ಹೊರಹೊಮ್ಮಿಸುತ್ತಿದ್ದಿರಬೇಕು. ಈ ಶಾಸನದಲ್ಲಿ ಆಳ್ವಿಕೆಗೆ ಸಂಬಂಧಪಡುವ ಪ್ರಮುಖವಾದ ಸಂಗತಿಗಳು ದಾಖಲಾಗಿವೆ. ಚಾಲುಕ್ಯರ ಅಧೀನಕ್ಕೊಳಪಟ್ಟ ನೊಳಂಬವಾಡಿ ೩೨ ಸಾವಿರದ ಕೋಗಳಳಾರದ ಚಿಕ್ಕ ವಿಭಾಗವಾಗಿದ್ದದ್ದು ಮಾಂಗೊಳ ೧೨. ಈ ಊರಿನ ಆಡಳಿತವನ್ನು ಆಗ ಊರೊಡೆಯರು, ಗ್ರಾಮದ ೭೦೦ ಮಹಾಜನರು ನೋಡಿಕೊಳ್ಳುತ್ತಿದ್ದರು.

ಆಳ್ವಿಕೆಯ ವಿಕೇಂದ್ರೀಕರಣಕ್ಕಾಗಿ ಆರನೆಯ ವಿಕ್ರಮಾದಿತ್ಯನು ತನ್ನ ರಾಜ್ಯವನ್ನು ಕೆಲವು ವಿಭಾಗಗಳಾಗಿ ವಿಂಗಡಿಸಿದ್ದು ಇದರ ನಿರ್ವಹಣೆಯನ್ನು ತನ್ನ ರಾಣಿಯರಿಗೆ ವಹಿಸಿಕೊಟ್ಟಿದ್ದನು. ಇವರು ಒಂದೊಂದು ಪ್ರದೇಶದಲ್ಲಿಯೂ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿ ಅಲ್ಲಿನ ದೇವಾಲಯಗಳಿಗೆ, ಬ್ರಾಹ್ಮಣರಿಗೆ ದಾನದತ್ತಿಗಳನ್ನು ನೀಡಿದ ಶಾಸನ ಗಳನ್ನು ನೋಡಬಹುದು. ಇವುಗಳಲ್ಲೊಂದು ರಂಗಾಪುರದ ನರಸಿಂಹ ದೇವಾಲಯದ ದಾಖಲೆಯಾಗಿದೆ. ಇದರ ಕಾಲ ಕ್ರಿ.ಶ. ೧೧೬. ಅಭಿನವ ಸರಸ್ವತಿ, ರೂಪವಿದ್ಯಾಧಾರಿ, ಮಹಾಲಕ್ಷ್ಮಿ, ದೇವರ ವರಪ್ರಸಾದ, ದಾನವಿನೋದ, ಶ್ರೀಮತ್ತ್ರಿಭುವನ ಮಲ್ಲದೇವನ ವಿಶಾಲ ವಕ್ಷಸ್ಥಳ ನಿವಾಸಿನಿಯಾದ ಪದ್ಮಲದೇವಿಯು ಅಗ್ರಹಾರ ಮಾಂಗೊಳವನ್ನು ಆಳುತ್ತಿದ್ದ ಸಮಯದಲ್ಲಿ, ಮಾಂಗೊಳದ ೨೦೦ ಮಹಾಜನರ ಕೋರಿಕೆ ಮೇರೆಗೆ ಅರಸಿಯು ಪುಳಿಯಮ ನಾಯಕನಿಗೆ ಭೂಮಿಯನ್ನು ದಾನ ಮಾಡಿದ್ದಾಳೆ. ಈ ದತ್ತಿಯನ್ನು ಉಗ್ರನರಸಿಂಹನ ಸ್ನಾನ, ನೈವೇದಯ, ಅಂಗರಂಗ ಭೋಗಗಳ ಪವಿತ್ರಕಾರ್ಯಕ್ಕಾಗಿ ನೀಡಲಾಗಿರುತ್ತದೆ.

ಶಾಸನಗಳು ತಿಳಿಸುವ ಹಾಗೆ ಮಾಗಳ ೧೨ ಎಂಬುದು ಮುಖ್ಯವಾದ ೧೨ ಹಳ್ಳಿಗಳನ್ನು ಒಳಗೊಂಡಿದ್ದಿರಬೇಕು. ಇಲ್ಲಿನ ಸುತ್ತಲಿನ ಹಳ್ಳಿಗಳಲ್ಲಿ ದೊರೆಯುವ ಹಳ್ಳಿಗಳೂ ಈ ಊಹೆಯನ್ನು ಸ್ಥಿರಪಡಿಸುತ್ತಿರುವಂತಿದೆ. ರಂಗಾಪುರದ ನರಸಿಂಹನ ಆಲಯವು ಒಂದು ಕಾಲಕ್ಕೆ ತನ್ನ ಕೀರ್ತಿಪತಿಷ್ಠೆಗಳನ್ನು ಹೊಂದಿ ಪ್ರಸಿದ್ಧವಾದುದಾಗಿತ್ತು. ಈ ದೇವಾಲಯವನ್ನು ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೇ ಕಟ್ಟಿದ್ದಿರಬಹುದಾದರೂ ಇಂದು ಅದರ ಹೆಚ್ಚುಗಾರಿಕೆಯು ಬಹುಮಟ್ಟಿಗೆ ಇಲ್ಲವಾಗಿದೆ. ಇಲ್ಲಿನ ಶಿಖರ ಮತ್ತು ದ್ವಾರಗೋಪುರಗಳು ಗಾಲೆಗಚ್ಚಿನಿಂದ ಮಾಡಲ್ಪಟ್ಟಿದ್ದು ಬಹುಶಃ ವಿಜಯನಗರ ಅಥವಾ ಅನಂತರದ ಕಾಲಕ್ಕೆ ಸೇರಬಹುದು.



ವಿದಾರಣ ನರಸಿಂಹ, ಜಾಲಂದ್ರ ಬೇಲೂರು



ದ್ವಿಭುಜ ವಿದಾರಣ ಉಗ್ರನರಸಿಂಹ, ವಸ್ತುಸಂಗ್ರಹಾಲಯ, ಶಿವಮೊಗ್ಗ

ದೇವಾಲಯದ ಗರ್ಭಗುಡಿಯಲ್ಲಿರುವ ಉಗ್ರನರಸಿಂಹನ ವಿಗ್ರಹವು ಎಂತಹವರಲ್ಲೂ ಒಂದು ಕ್ಷಣ ತಲ್ಲಣವನ್ನುಂಟು ಮಾಡುವಂತಿರುವುದಾಗಿದೆ. ಸ್ವಾಮಿಯು ತನ್ನ ತೊಡೆಯ ಮೇಲೆ ಹಿರಣ್ಯಕಶ್ಯಪನನ್ನು ಸೀಳುತ್ತಿರುವ ವೈಖರಿ, ವಿದಾರಣರೂಪಗಳು ಮೈ ನವಿರೇಳಿಸುವಂತಿವೆ. ಇಲ್ಲಿನ ಅಂತರಾಳದಲ್ಲಿ ಒಂದು ಮೂಲೆಯಲ್ಲಿ ಸೂರ್ಯನಾರಾಯಣನ ವಿಗ್ರಹವನ್ನಿಟ್ಟಿದ್ದಾರೆ. ನವರಂಗದಲ್ಲಿ ಪ್ರಹ್ಲಾದ, ಲಕ್ಷ್ಮಿ, ಗಣಪತಿ, ಕಾಲಭೈರವರ ವಿಗ್ರಹಗಳು ಇವೆ. ಹೊರಗಡೆ ಅಶ್ವತ್ಥಕಟ್ಟೆಯ ಮೇಲಿರುವ ಮಹಿಷಮರ್ದಿನಿ ವಿಗ್ರಹವು ಆಕರ್ಷಕವಾದ ಭಂಗಿಯಲ್ಲಿದೆ. ಈ ಮೂರ್ತಿಗಳೆಲ್ಲವೂ ತಮ್ಮ ಮೂಲನೆಲೆಯನ್ನು ಕಳೆದುಕೊಂಡು ಇಂದಿನ ಸ್ಥಿತಿಗೆ ತಲುಪಿರುವುದು ಕಾಲದ ವಿಪರ್ಯಾಸವೆಂದೇ ಹೇಳಬಹುದಾಗಿದೆ.

ವಿಜಯನಗರದ ಅರಸರ ಕಾಲದ ಬಿಷ್ಮಪ್ಪಯ್ಯನೆಂಬುವನು ರಂಗಾಪುರದಲ್ಲಿ ವಾಸವಾಗಿದ್ದನೆಂಬ ವಿಚಾರವನ್ನುಳಿದರೆ ಮತ್ತಾವ ಮಾಹಿತಿ ಸಂಬಂಧಿಸಿದಂತೆ ತಿಳಿಯುತ್ತಿಲ್ಲ. ಶಾಸ್ತ್ರ ಸಾಹಿತ್ಯಕ್ಕೆ ಸಂಬಂಧಿಸಿದಂತೆ, ಹೊಳಲಿನ ವ್ಯಾಕರಣತೀರ್ಥ ಪಂಡಿತ ಚಂದ್ರಶೇಖರ ಶಾಸ್ತ್ರಿಯವರು ಇಲ್ಲಿನ ವಾಸಿಗಳೆಂಬ ವಿಚಾರ ಗಮನಾರ್ಹ. ಕಲೆ-ಸಾಹಿತ್ಯ-ಸಂಸ್ಕೃತಿಗಳ ಸಂಗಮಸ್ಥಾನವಾಗಿರುವ ಮಾಗಳ ರಂಗಾಪುರದ ನರಸಿಂಹನು ಭಕ್ತಿಸಾಮ್ರಾಜ್ಯದ ಅಧಿಪತಿಯಾಗಿ, ತನ್ನ ನೆಲೆಗೆ ಆಗಮಿಸುವವರಿಗೆ ಮೋಕ್ಷಪ್ರದವಾದ ಮಾರ್ಗವನ್ನು ಕರುಣಿಸುತ್ತಿದ್ದಾನೆ.

# ಹಂಪೆ

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿರುವ ಹಂಪೆಯು ತುಂಗಭದ್ರ ನದಿಯ ದಡದ ಮೇಲಿದೆ. ಹೊಸಪೇಟೆಗೆ ಆರು ಮೈಲಿ ದೂರದಲ್ಲಿದೆ. ಇದು ಪಂಪಾಕ್ಷೇತ್ರವೆಂದು ಪ್ರಸಿದ್ಧವಾಗಿದೆ. ರಾಮಾಯಣದ ವಾಲಿ-ಸುಗ್ರೀವ, ಹನುಮಂತಾದಿಗಳು ಇಲ್ಲಿಯವರು. ಈಗ ಕಾಣುತ್ತಿರುವ ವಿಜಯನಗರದ ಅವಶೇಷವು ಒಂಭತ್ತು ಚದರ ಮೈಲಿಯ ಸುತ್ತಳತೆಯಲ್ಲಿದೆ. ಹಿಂದಿನ ರಾಜಧಾನಿಯು ಮೂವತ್ತು ಮೈಲಿಗಳಷ್ಟಿತ್ತೆಂದು ಪ್ರವಾಸಿಗಳು ವಿವರಿಸಿದ್ದಾರೆ. ರಾಜಧಾನಿಯ ವೈಭವವನ್ನು ವಿದೇಶಿಯರು ಮುಕ್ತಕಂಠದಿಂದ ಹೊಗಳಿದ್ದಾರೆ.

ಹಂಪೆಯ ಬಹುಪುರಾತನವಾದ್ದೆಂದು ರಾಮಾಯಣದಲ್ಲಿಯೂ ಉಕ್ತವಾಗಿದೆ. ಶಾಸನ ಐತಿಹ್ಯಗಳೂ ಈ ಅಂಶವನ್ನು ಸ್ಪಷ್ಟೀಕರಿಸುತ್ತದೆ. ರಾಮಾಯಣದಲ್ಲಿ ವರ್ಣಿತವಾಗಿರುವ ಮಾತಂಗ, ಮಾಲ್ಯವಂತ, ಋಷ್ಯಮೂಕ, ಅಂಜನಾಪರ್ವತಗಳು ಇಲ್ಲಿಯೇ ಇರುತ್ತವೆ. ತುಂಗಭದ್ರೆಯ ದಡದಲ್ಲಿರುವ ಆನೆಗೊಂದಿಯೇ ರಾಮಾಯಣದ ಕಿಷ್ಕಿಂಧೆ. ಹರಿಹರ ಕೃಷ್ಣದೇವರಾಯರು ಹಂಪೆಯ ಅನೇಕ ಪ್ರಸಿದ್ಧ ಸ್ಮಾರಕಗಳ ನಿರ್ಮಾಣ ಮತ್ತು ವಿಸ್ತರಣೆಗೆ ಕಾರಣಕರ್ತರಾಗಿದ್ದಾರೆ.

ಕೃಷ್ಣದೇವರಾಯರ ಕಾಲದ ಅಪೂರ್ವ ನಿರ್ಮಿತಿಯೆಂದು ಇಲ್ಲಿನ ವಿಜಯವಿಠಲ ಸ್ವಾಮಿ ದೇವಾಲಯವನ್ನು ಗಮನಿಸಬೇಕಾಗಿದೆ. ಇದು ಅವರ ಕಾಲದಲ್ಲಿ ಆರಂಭವಾಗಿ ಅಚ್ಯುತರಾಯರ ಕಾಲದವರಿಗೆ ಮುಂದುವರೆದಿದೆ. ಆದರೂ ಅಪೂರ್ಣವಾಗಿಯೇ ಉಳಿಯಿತು. ವಿಜಯನಗರ ಶೈಲಿಯಲ್ಲಿ ನಿರ್ಮಿತವಾದದು. ದಕ್ಷಿಣದಲ್ಲಿ ಕೃಷ್ಣಸ್ವಾಮಿ ದೇವಸ್ಥಾನವಿದೆ. ಇದನ್ನು ಕೃಷ್ಣದೇವರಾಯನು ಉದಯಗಿರಿಯಲ್ಲಿದ್ದ ಕೃಷ್ಣನ ವಿಗ್ರಹದ ಪ್ರತಿಷ್ಠಾಪನೆಗಾಗಿ ಕಟ್ಟಿಸಿದ್ದರೆಂದು ತಿಳಿಯುತ್ತದೆ.

ಕೃಷ್ಣಗುಡಿ ದಾಟಿಹೋದರೆ ಏಕಶಿಲೆಯಲ್ಲಿ ಕೆತ್ತಿರುವ ಸುಮಾರು ಇಪ್ಪತ್ತೆರಡು ಅಡಿ ಎತ್ತರವಿರುವ ಉಗ್ರನರಸಿಂಹನ ವಿಗ್ರಹವಿರುತ್ತದೆ. ಇದನ್ನು ಈಗ ಲಕ್ಷ್ಮಿ ನರಸಿಂಹನ ವಿಗ್ರಹವಿರಬಹುದೆಂದು ವರ್ಣಿಸಿದ್ದಾರೆ. ಇದು ಯೋಗಪಟ್ಟದಲ್ಲಿಯೂ ಇದೆ. ಅದ್ದರಿಂದ ಇದು ಯೋಗಾರೂಢನಾದ ಉಗ್ರನರಸಿಂಹನ ಲಕ್ಷ್ಮೀನರಸಿಂಹನ ಮಂಗಳಮೂರ್ತಿಯೆಂದು ಹೇಳಬಹುದೇನೋ. ಇದರ ಭವ್ಯತೆ ಮತ್ತು ಔನ್ನತ್ಯ ಹಿರಿದಾದ್ದು. ಶ್ರೀಕೃಷ್ಣದೇವರಾಯರು ಈ ಸ್ವಾಮಿಗೆ ದತ್ತಿಗಳನ್ನು ನೀಡಿದ್ದಾರೆ.

ಬಾದಾಮಿಯ ಚಾಲುಕ್ಯರಿಂದ ತೊಡಗಿ ವಿಜಯನಗರ ಅರಸರವರೆಗಿನ ಸಾಮ್ರಾಜ್ಯ ಶಾಹಿ ಅಧಿಕಾರದಲ್ಲಿ ನಮ್ಮ ಧರ್ಮ ಸಂಸ್ಕೃತಿಗಳೂ ಬೆಳೆದಿದ್ದು ಅವುಗಳಲ್ಲಿ ದೇವಾಲಯದ ಪಾತ್ರವು ಹಿರಿದಾದದ್ದೆ ಎಂದೆನ್ನಬಹುದು. ದೇವಾಲಯದಲ್ಲಿರಬೇಕಾದ ಮೂರ್ತಿಗಳ ಬಗ್ಗೆ ನಿರ್ದಿಷ್ಟವಾದದ್ದೆಂದು ಶಾಸ್ತ್ರ ಬೆಳೆದಿರಬೇಕು. ಇವರಿಬ್ಬರ ಕಾಲಗತಿಯನ್ನು ಎರಡು ತುದಿಗಳೆಂದು ಭಾವಿಸಿದಲ್ಲಿ ಕಾಲಗತ್ತಿಗೆ ಅನುಗುಣವಾಗಿ ನರಸಿಂಹಶಿಲ್ಪದಲ್ಲಿ ಮಹತ್ತರವಾದ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಇದೊಂದು ವಿಶೇಷ ಅಧ್ಯಯನ ಅಧ್ಯಾಯಗಳೂ ಆಗಬಲ್ಲದು.

# ಹಡಗಲಿ

ಹಡಗಲಿ ಅಥವಾ ಹೂವಿನ ಹಡಗಲಿ ಎಂಬುದು ಬಳ್ಳಾರಿ ಜಿಲ್ಲೆಯಲ್ಲಿರುವ ತಾಲೂಕು ಕೇಂದ್ರವಾಗಿದೆ. ಬೆಂಗಳೂರಿಗೆ ಸುಮಾರು ಮೂರುನೂರಾ ಐವತ್ತು ಕಿಲೋಮೀಟರ್ ದೂರದಲ್ಲಿದೆ. ಇದೊಂದು ಸುಂದರ ನೈಸರ್ಗಿಕ ತಾಣವಾಗಿದೆ. ಶಾಸನಗಳು ಈ ಸ್ಥಳವನ್ನು 'ಪೂವಿನ ಹಡಂಗಿಲು' ಎಂದು ಹೆಸರಿಸಿದೆ. ಇಲ್ಲಿಂದ ವಿಜಯನಗರಕ್ಕೆ ಎಂದರೆ ಆಗಿನ ಹಂಪೆಗೆ ತುಂಗಭದ್ರಾ ನದಿಯ ಮಾರ್ಗವಾಗಿ ಹೂವನ್ನು ಸರಬರಾಜು ಮಾಡುತ್ತಿದ್ದರಂತೆ. ಇಂದಿಗೂ ಸಹ ಕರ್ನಾಟಕದಲ್ಲಿಯ ಅತ್ಯಧಿಕ ಕಾಕಡಾ ಹೂವಿನ ವ್ಯಾಪಾರ ವಹಿವಾಟು ಹಡಗಲಿಯಲ್ಲಿ ನಡೆಯುತ್ತಿದೆ.

ಹಡಗಲಿಯ ಕೋಟೆಯ ಭಾಗವನ್ನು ಹದಿನಾರನೇ ಶತಮಾನದ ಅಂತ್ಯದಲ್ಲಿ ಕೆಡವಿದಾಗ ಅಲ್ಲಿ ಎರಡು ದೇವಾಲಯಗಳು ಕಂಡುಬಂದವೆಂದು ಹೇಳುತ್ತಾರೆ. ಅವುಗಳಲ್ಲಿ

ಒಂದು ದೇವಾಲಯವು ಕೃಷ್ಣಶಿಲೆಯಲ್ಲಿ ಕಡೆದ ಮನೋಹರವಾದ ಯೋಗಾನರಸಿಂಹನ ಶಿಲ್ಪವನ್ನು ಹೊಂದಿತ್ತು. ಚಾಳುಕ್ಯ ಶೈಲಿಯ ಈ ಎರಡು ದೇವಾಲಯಗಳು ಸಹ ಐತಿಹಾಸಿಕ ಮಹತ್ವದಿಂದ ಕೂಡಿದ್ದು ಆ ಶೈಲಿಯ ಮುಖಲಕ್ಷಣವಾದ ಜಾಲಂದ್ರಗಳ ಕಿಟಕಿಗಳನ್ನು ಹೊಂದಿವೆ. ಹಡಗಲಿ ಒಂದು ಪ್ರಮುಖ ನರಸಿಂಹ ಕ್ಷೇತ್ರವಾಗಿಯೂ ಸಹ ಪ್ರಸಿದ್ಧವಾಗಿದೆ.

# ಸೊಂಡೂರು

ಬಳ್ಳಾರಿ ಜಿಲ್ಲೆ ಕರ್ನಾಟಕದಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದಿದೆ. ವಿಶ್ವ ವಿಖ್ಯಾತವಾದ ಹಂಪೆಯಿರುವುದು ಈ ಜಿಲ್ಲೆಯಲ್ಲಿಯೇ ಎಂಬುದು ಗಮನಾರ್ಹ. ಕಡುಬೇಸಿಗೆಯನ್ನು ಬಳ್ಳಾರಿಯ ಜನ ಅನುಭವಿಸುತ್ತಿದ್ದಾರೆ. ಈ ಜಿಲ್ಲೆಯ ಕೈಗಾರಿಕಾ ಪ್ರದೇಶವಾಗಿರುವುದು ಸೊಂಡೂರು. ಸೊಂಡೂರು ಮತ್ತು ಯಶವಂತನಗರಗಳ ಮಧ್ಯೆ ದಟ್ಟನಾದ ಅರಣ್ಯವಿದೆ. ಸೃಷ್ಟಿಯ ಸೊಬಗನ್ನು ಕಾಣಬೇಕಾದವರು ಈ ಪ್ರದೇಶಕ್ಕೆ ಬರಬೇಕು.

ಯಶವಂತನಗರದಿಂದ ಸೊಂಡೂರಿಗೆ ಬರುವ ಮಾರ್ಗದಲ್ಲಿ ಮೋಟಾರ್ ರಸ್ತೆಯಿಂದ ಬಲಕ್ಕೆ ಕಾಡುದಾರಿಯಲ್ಲಿ ಸುಮಾರು ಒಂದೂವರೆ ಮೈಲಿ ದೂರದಲ್ಲಿ ಎರಡು ಗುಡ್ಡಗಳ ಮಧ್ಯೆ ಒಂದು ಹಳ್ಳವಿರುತ್ತದೆ. ಇದು ರಭಸವಾಗಿ ಹರಿಯುತ್ತ ಬಂಡೆಗಲ್ಲುಗಳನ್ನು ತೂರಿಕೊಂಡು ಸಾಗುತ್ತದೆ. ಇದರ ಹರಿವಿನಿಂದ ಅಲ್ಲೊಂದು ಮಹಾದ್ವಾರವೇ ನಿರ್ಮಾಣವಾದಂತಿದೆ. ಅಲ್ಲಿನ ದೃಶ್ಯವೂ ಅಷ್ಟೇ ಭಯಂಕರವಾದದ್ದು.

ಶ್ರೀ ನರಸಿಂಹ ದೇವಾಲಯವು ಈ ಹಳ್ಳದ ಎಡಪಾರ್ಶ್ವದಲ್ಲಿ ಸ್ವಲ್ಪ ಎತ್ತರವಾದ ಜಾಗದಲ್ಲಿದೆ. ಇದೊಂದು ಗುಹೆಯ ರೀತಿಲ್ಲಿದೆ. ಈ ಗುಹೆಯಲ್ಲಿ ಸುಮಾರು ಒಂದೂವರೆ ಅಡಿ ಎತ್ತರದ ನರಸಿಂಹನ ಕೇವಲ ಮುಖವಾಡವಿದೆ. ಸ್ವಯಂಭು ವಿಗ್ರಹದಂತೆ ಇದು ಕಂಡುಬರುತ್ತದೆ. ಉಗ್ರನಾಗಿರುವ ಈ ಸ್ವಾಮಿಯ ದರ್ಶನವು ಸಹ ಅನೇಕರಿಗೆ ದುಸ್ತರವಾದುದು. ಈ ಕಾರಣದಿಂದ ಮೂರ್ತಿಯ ಪಕ್ಕದಲ್ಲಿ ಶ್ರೀಲಕ್ಷ್ಮೀನರಸಿಂಹನನ್ನು ಸ್ಥಾಪಿಸಲಾಗಿದೆ. ಮುಂಭಾಗದಲ್ಲಿ ದೇವಸ್ಥಾನವನ್ನು ಕಟ್ಟಲಾಗಿದೆ. ನರಸಿಂಹನ ಇಂತಹ ಉಗ್ರರೂಪವನ್ನು ಸೌಮ್ಯವಾದ ರೀತಿಯಲ್ಲಿ ಕಾಣಬೇಕೆಂಬ ಹಂಬಲಕ್ಕನುಗುಣವಾಗಿ ಇಲ್ಲಿನ ಈ ಕಾರ್ಯವು ಪ್ರಶಂಸನೀಯವಾದದ್ದು.

ಸೊಂಡೂರು ಮಹಾರಾಜರ ಚರಿತ್ರೆ ನಮ್ಮ ಇತಿಹಾಸದಲ್ಲೊಂದು ಅಧ್ಯಾಯವಾಗಿರುವುದಾಗಿ ನಾವೆಲ್ಲರೂ ಅರಿತಿರುವ ವಿಚಾರವೇ ಆಗಿದೆ. ಅವರ ಈ ದೈವಶ್ರದ್ಧೆಯಿಂದ ಧಾರ್ಮಿಕ ಮನೋಭಾವದಿಂದ ಇಲ್ಲೊಂದು ದೇವಸ್ಥಾನವು ನಿರ್ಮಾಣವಾಗಿದೆಯೆನ್ನಬಹುದು. ಆದರೆ ಸೊಂಡೂರು ಅರಸು ಮನೆತನದವರಿಗೆ ನರಸಿಂಹಸ್ವಾಮಿಯೇನೂ ಕುಲದೈವವಲ್ಲ.

ಅದರೂ ಸಹ ದೇವಸ್ಥಾನದ ಸೇವಾಕಾರ್ಯಗಳು ಅವರ ಮನೆತನದವರಿಂದಲೇ ನಡೆಯುತ್ತಿರುವುದು ನರಸಿಂಹ ದೇವರ ಸಾರ್ವಜನಿಕತೆಯನ್ನು ವ್ಯಕ್ತಪಡಿಸುವಂತಿದೆ.

ಶ್ರೀ ನರಸಿಂಹ ಸ್ವಾಮಿಯ ಪೂಜಾಕೈಂಕರ್ಯಗಳನ್ನು ನಡೆಸುತ್ತಿರುವವರು ರಾಮಾನುಜ ಪಂಥಕ್ಕೆ ಸೇರಿದವರು. ಈ ಊರಿನಲ್ಲಿನ ಬಣಜಿಗ ಜನಾಂಗದವರಿಗೆ ಈ ಸ್ವಾಮಿಯ ಅರಾಧ್ಯದೈವವಾಗಿದ್ದಾನೆ. ಆ ಜನಾಂಗದ ಒಬ್ಬ ವ್ಯಕ್ತಿಯು ಒಂದು ವಾರದ ಕಾಲ ದೇವಾಲಯದಲ್ಲಿದ್ದು ನಂತರ ಫಾಲ್ಗುಣ ಹುಣ್ಣಿಮೆಯೆಂದು ಹೊರಗೆ ಬರುವನಂತೆ. ಆ ಸಮಯದಲ್ಲಿ ಈತನಲ್ಲಿ ನರಸಿಂಹನ ಅವೇಶ ಬಂದಿರುತ್ತದೆಂದು ಹೇಳುತ್ತಾರೆ. ನರಸಿಂಹ ದೇವಾಲಯದ ಹೊರಗೆ ಬಂದ ನಂತರ ಅವನಿಗೆ ಕ್ಷೌರ ಮಾಡಿಸಿ ಆ ಸ್ಥಳಕ್ಕೆ ಪುಣ್ಯಸ್ನಾನಕ್ಕೆ ಕರೆದುಕೊಂಡು ಹೋಗುವರಂತೆ. ಅತನಿಗೆ ಪುಣ್ಯ ಸ್ನಾನವನ್ನು ಮಾಡಿಸಿಗ ನಂತರ ನರಸಿಂಹ ಆವೇಶಯುಕ್ತನಾದ ಆ ವ್ಯಕ್ತಿ ಒಂದು ಗಿಡಕ್ಕೆ ಒಂದು ಕಟ್ಟಿಗೆಯಿಂದ ನೂಕಿ, ಆ ಗಿಡವನ್ನೇ ಬುಡಮೇಲು ಮಾಡುವನಂತೆ. ಆಗ ಅವನಲ್ಲಿನ ಆವೇಶವೆಲ್ಲ ಕಡಮೆಯಾಗುವುದಂತೆ. ಇದಾದ ನಂತರ ದೇವಾಲಯದಿಂದ ರಥೋತ್ಸವವನ್ನು ಹೊರಡಿಸಲಾಗುತ್ತದೆ. ಈ ರೀತಿಯಲ್ಲಿ ಸೊಂಡೂರು ನರಸಿಂಹ ದೇವರ ರಥೋತ್ಸವವು ಒಂದು ಐತಿಹ್ಯದಿಂದ ಕೂಡಿ ವಿಜೃಂಭಣೆಯಿಂದ ಫಾಲ್ಗುಣ ಶುದ್ದ ಪೂರ್ಣಿಮೆಯಂದು ನೆರವೇರಿಸುತ್ತಲಿದೆ.

ಸೊಂಡೂರು ಮಹಾರಾಜರಿಗೆ ಈ ರಥೋತ್ಸವದ ಸಂದರ್ಭದಲ್ಲಿ ಅಗ್ರಸ್ಥಾನವಿರುತ್ತದೆ. ಅವರು ರಥದ ಮುಂಭಾಗದಲ್ಲಿರುತ್ತಾರೆ. ನರಸಿಂಹ ದೇವರ ಆವೇಶ ಬಂದ ವ್ಯಕ್ತಿಯು ರಥದ ಹಿಂಭಾಗದಲ್ಲಿ ಇರುತ್ತಾನೆ. ಬದಿಗೆಯ ನಂತರ ರಥೋತ್ಸವದ ಕಾರ್ಯಕ್ರಮಗಳು ಮುಗಿಯುತ್ತವೆ. ಹೀಗೆ ಸ್ವಾರಸ್ಯವಾದೊಂದು ಜಾನಪದ ಹಿನ್ನೆಲೆ ಮತ್ತು ಅಚರಣೆಗಳಿಂದ ಕೂಡಿ ಪ್ರಸಿದ್ಧವಾಗಿರುವ ಈ ಕ್ಷೇತ್ರಕ್ಕೆ ಅತ್ಯಂತ ಮಹತ್ವವಿದೆ.

## ಬಳ್ಳಾರಿ

ಬಳ್ಳಾರಿ ನಗರದ ಮಧ್ಯದಲ್ಲಿ ಅಕ್ಕಸಾಲಿಗರ ಓಣಿಯಲ್ಲೊಂದು ದಿವ್ಯವಾದ ನರಸಿಂಹ ದೇವಾಲಯವಿರುತ್ತದೆ. ಲಕ್ಷ್ಮೀ ನರಸಿಂಹನ ಪೂಜಾದಿಗಳಿಗೆ ಮೀಸಲಾಗಿರುವ ಈ ಅಲಯವು ಸಣ್ಣದಾಗಿದ್ದು ಇಲ್ಲಿರುವ ಸ್ವಾಮಿಯು ಓರುವಾಯಿ ಲಕ್ಷ್ಮೀದೇವಿಯೆಂಬ ಸಾಧ್ವಿಯ ಭಕ್ತಿಗೆ ಮೆಚ್ಚಿ ಲಕ್ಷ್ಮೀಸಮೇತನಾಗಿ ಪ್ರತ್ಯಕ್ಷನಾದ ದೈವವೆಂದು ಹೇಳುವರು. ಸುಮಾರು ಎರಡೂವರೆ ಅಡಿ ಎತ್ತರವಿರುವ ಮೂರ್ತಿಯ ತೊಡೆಯ ಮೇಲೆ ಲಕ್ಷ್ಮಿಯೇನೂ ಇಲ್ಲ.

ಇಲ್ಲಿ ಒಂದು ಸಾವಿರದ ಎಂಟು ಶ್ರೀ ಸತ್ಯಧ್ಯಾನತೀರ್ಥರ ಮೃತ್ತಿಕಾ ಬೃಂದಾವನವಿದೆ. ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನವೂ ಇಲ್ಲಿರುತ್ತದೆ. ಸುಮಾರು ಒಂದುನೂರು ವರ್ಷಗಳ ಹಿಂದೆ ವಡ್ಡಗಿರಿ ವೆಂಕಟಚಾರ್ಯ ಎಂಬುವವರು ಇಲ್ಲಿನ ಸ್ವಾಮಿಯ ಪ್ರತಿ

ಷ್ಠಾಪನಾ ಕಾರ್ಯವನ್ನು ವಿಧಿವತ್ತಾಗಿ ನೆರವೇರಿಸಿದ್ದಾರೆ. ಅವರು ವಾಯುದೇವರ ಅಂಶ ಪುರುಷರೆಂದು ನಂಬಿಕೊಂಡು ಬಂದಿರುತ್ತಾರೆ. ಆಶ್ಚರ್ಯವೆಂದರೆ ಅವರಿಗೆ ಚಿಕ್ಕಬಾಲವಿತ್ತೆಂದು ಅತ್ಯಂತ ಸೋಜಿಗದ ವಿಚಾರ ಪ್ರಚಲಿತವಾಗಿದೆ.

ಶ್ರೀ ನರಸಿಂಹಸ್ವಾಮಿ ಪ್ರತಿಷ್ಠಾಪನೆಯ ಸಾಂಗವಾಗಿ ನೆರವೇರಿಸಿದ ನಂತರ ದೇವರ ಮೇಲೆ ಹಾಕಿದ ಹೂವು ಸುಟ್ಟಂತೆ ಆಗುತ್ತಿತ್ತಂತೆ. ಒರುವಾಯಿ ಲಕ್ಷ್ಮೀದೇವಮ್ಮನು ದೇವರಲ್ಲಿ ಪ್ರಾರ್ಥಿಸಿಕೊಂಡಾಗ 'ನನ್ನ ಸನ್ನಿಧಾನ ಬಂದಿದೆ. ತಿಳಿಸಲು ಹಾಗೆ ಆಗಿದೆ' ಎಂದು ಹೇಳಿದ ಹಾಗಾಯಿತಂತೆ. ಹೀಗೆ ಇಲ್ಲಿನ ದೇವರು ಪ್ರತ್ಯಕ್ಷ ಪ್ರಮಾಣಗಳ ಮೂಲಕ ಪ್ರಸಿದ್ಧವಾಗಿರುತ್ತದೆ. ಪಂಡಿತರಾದ ಆಚಾರ್ಯರಿಂದ ಇಲ್ಲಿ ಪೂಜಾದಿಗಳು ನಡೆಯುತ್ತಿದೆ. ವೈಶಾಖ ಮಾಸದಲ್ಲಿ ಶ್ರೀನರಸಿಂಹ ಜಯಂತಿಯ ದಿನದಂದು ಇಲ್ಲಿ ವಿಶೇಷ ಉತ್ಸವಾದಿಗಳು ನೆರವೇರುತ್ತವೆ. ಅಂದು ಸುತ್ತಲಿನ ಜಿಲ್ಲೆಗಳಿಂದಲೂ ಸಹಸ್ರ ಸಂಖ್ಯೆಯಲ್ಲಿ ಭಕ್ತಾದಿಗಳು ಬಂದುಸೇರುತ್ತಾರೆ.

## ಹಾಸನ ಜಿಲ್ಲೆ

# ಶಾಂತಿ ಗ್ರಾಮ

ಹಾಸನ ತಾಲೂಕಿನಲ್ಲಿರುವ 'ಶಾಂತಿಗ್ರಾಮ'ವು ಹೋಬಳಿ ಕೇಂದ್ರವಾಗಿದೆ. ಹಾಸನ ನಗರದಿಂದ ಪೂರ್ವಕ್ಕೆ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ. ಸುಮಾರು ಹನ್ನೆರಡು ಕಿಲೋಮೀಟರ್ ದೂರದಲ್ಲಿದೆ. ಶಾಸನಗಳ ಆಧಾರದಿಂದ ತಿಳಿದು ಬರುವ ಹಾಗೆ ಈ ಸ್ಥಳವನ್ನು ಹೊಯ್ಸಳ ಅರಸಿಯಾದ ಶಾಂತಲೆ ಕಟ್ಟಿಸಿರುತ್ತಾಳೆ. ಹೊಯ್ಸಳ ಸಾಮ್ರಾಜ್ಯದ ಎತ್ತರ ಬಿತ್ತರಗಳನ್ನು ಮುಗಿಲಿಗೆ ಮುಟ್ಟಿಸಿದ ವಿಷ್ಣುವರ್ಧನನ ಕಾಲದಲ್ಲಿ ಕಲೆ ಸಂಸ್ಕೃತಿಗಳು ಜನಾದರಣೀಯವಾಗಿ ಅರಳಿದವು. ಈತನ ಪಟ್ಟಮಹಾದೇವಿ ಶಾಂತಲೆ ಬೇಲೂರು ಹಳೆಯಬೀಡುಗಳ ಸಾಂಸ್ಕೃತಿಕ ರೂವಾರಿಯಂತಿದ್ದಾಳೆ. ಶಾಂತಲೆಯ ಹೆಸರಿನಲ್ಲಿ ಕಟ್ಟಲಾದ ಶಾಂತಿಗ್ರಾಮವು ಒಂದು ಅಗ್ರಹಾರವಾಗಿ ಪ್ರಸಿದ್ಧವಾದದ್ದು. ರಾಣಿಯೊಬ್ಬಳ ಕೀರ್ತಿ ಪ್ರತಿಷ್ಠೆಗಳನ್ನು ಎತ್ತಿಹಿಡಿಯುವಂತಿರುವಂತಹ ಶಾಂತಿಗ್ರಾಮದಲ್ಲಿ ಪ್ರಸಿದ್ಧವಾದ ದೇವಾಲಯಗಳಿರುವುದರ ಜೊತೆಗೆ ಜೈನಬಸದಿಗಳೂ ಇದ್ದು ಧರ್ಮಸಮನ್ವಯವನ್ನು ಸಾರುವಂತಾಗಿದೆ.

ಶಾಂತಿಗ್ರಾಮದಲ್ಲಿರುವ ಯೋಗಾನರಸಿಂಹ (ಇದನ್ನು ದರದ ಯೋಗಾನರಸಿಂಹನೆಂದು ಕರೆದಿದ್ದಾರೆ.) ದೇವಾಲಯವನ್ನು ವಿಷ್ಣು ದೇವಾಲಯಗಳ ಗುಂಪಿಗೆ ಸೇರಿಸಬಹುದು. ಇಲ್ಲಿನ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಕಂಡವರಿಗೆ ಹೊಯ್ಸಳರ ಕಲಾ ಶ್ರೀಮಂತಿಕೆಯು ಸಹ ಮನದಟ್ಟಾಗಬಲ್ಲದು. ಸೂಕ್ಷ್ಮವಾದ ಕುಸುರಿ ಕೆಲಸದಿಂದ ಕೂಡಿದ ಗರ್ಭಗೃಹ ಮತ್ತು ಸುಕನಾಸಿಗಳಲ್ಲಿ ಭುವನೇಶ್ವರಿಯ ಸುಂದರ

ಅಲಂಕಾರವಿದೆ. ಈ ದೇವಾಲಯದ ಹೊರಗೋಡೆಗಳು ವಿಶೇಷ ಕೆತ್ತನೆಗಳಿಂದ ಕೂಡಿ ಶ್ರೀಮಂತವಾಗಿವೆ. ಮುಖಮಂಟಪವು ಗಮನಾರ್ಹವಾದ್ದೆಂದು ಹೇಳಬಹುದು.

ಲಕ್ಷ್ಮೀನರಸಿಂಹನ ಉಬ್ಬುಶಿಲ್ಪವನ್ನು ಮುಖಮಂಟಪದ ಮೇಲಿನ ಚಾವಣಿಯಲ್ಲಿ ಅದ್ಭುತವಾದ ಕೈಚಳಕದಿಂದ ಕೆತ್ತಿರುವುದು ಕಂಡು ಬರುತ್ತದೆ. ಇದರ ಸುತ್ತಲೂ ಉಳಿದ ಎಂಟು ನರಸಿಂಹಶಿಲ್ಪಗಳನ್ನು ಕೆತ್ತಿರುತ್ತಾರೆ. ಇದೊಂದು, ಇಡೀ ದೇವಾಲಯದ ಆಕರ್ಷಕ ಭಾಗವಾಗಿರುವುದರ ಜೊತೆಗೆ ಶಿಲ್ಪಕ್ಕೊಂದು ಚೇತನವನ್ನು ನೀಡುವಂತೆ ಕಂಡು ಬರುತ್ತದೆ.

ಇತ್ತೀಚೆಗೆ ದೇವಾಲಯದ ಅಭಿವೃದ್ಧಿಕಾರ್ಯಗಳನ್ನು ಕೈಗೆತ್ತಿಕೊಂಡು ವಿಶಾಲವಾದ ಪ್ರಕಾರ ಗೋಪುರ, ಆಲಯದ ಪ್ರಮುಖ ಭಾಗದ ಜೀರ್ಣೋದ್ಧಾರ ಕೆಲಸವನ್ನು ಮಾಡಿದ್ದಾರೆ. ಈ ಮೊದಲು ದೇವಾಲಯಕ್ಕೆ ಪ್ರವೇಶಿಸಲು ದುಸ್ಥರವಾಗಿದ್ದ ಪರಿಸ್ಥಿತಿ ದೂರವಾಗಿದೆ. ಭಗವಂತನ ಪೂಜಾದಿ, ವಿಶೇಷ ಉತ್ಸವಗಳಿಗೆ ಅನುಕೂಲವಾದ ವಾತಾವರಣ ಉಂಟಾಗಿದೆ.

# ಗೊರೂರು

ಹಾಸನ ಜಿಲ್ಲೆಯ ತಾಲೂಕು ಕೇಂದ್ರಗಳಲ್ಲೊಂದಾದ ಅರಕಲಗೂಡಿನಿಂದ ಎಂಟು ಕಿ.ಮೀ. ಉತ್ತರದಲ್ಲಿ ಮತ್ತು ಹಾಸನದಿಂದ ಇಪ್ಪತ್ತೆಂಟು ಕಿ.ಮೀ. ದಕ್ಷಿಣದಲ್ಲಿ ಹೇಮಾವತಿ ದಂಡೆಯ ಮೇಲಿರುವ ಗ್ರಾಮ ಗೊರೂರು. ಈ ಊರನ್ನು ಶಾಸನಗಳಲ್ಲಿ ಗೊರವೂರು ಎಂದು ಕರೆದಿದೆ. ಶತರುದ್ರಿಯಪುರ ಎಂಬ ಮತ್ತೊಂದು ಹೆಸರನ್ನು ಸಹ ಇದು ಹೊಂದಿದೆ. ಹೊಯ್ಸಳರ ಒಂದು ಶಾಸನದಿಂದ ವಿಜಯಾದಿತ್ಯ ಹೆಗಡೆ ಇಲ್ಲಿನ ತ್ರಿಕೂಟ ಲಿಂಗವನ್ನು ಸ್ಥಾಪಿಸಿ ಊರಿಗೆ ವಿಜಯಾದಿತ್ಯಪುರವೆಂಬ ಹೆಸರಿಟ್ಟಂತೆ ತಿಳಿದು ಬರುತ್ತದೆ.

ಗೊರೂರಿನಲ್ಲಿ ಕ್ರಿ.ಶ. ೧೫೪೬ಕ್ಕೆ ಸೇರಿದ ಯೋಗಾ ನರಸಿಂಹ ದೇವಾಲಯವು ಪ್ರಸಿದ್ಧವಾದದ್ದು. ಹೇಮಾವತಿ ನದಿಯ ದಂಡೆಯ ಮೇಲೆ ಈ ಆಲಯವನ್ನು ಕಟ್ಟಿದ್ದಾರೆ. ನದಿಯ ಪಾತ್ರವು ವಿಶಾಲವಾಗಿದ್ದು ದೇವಾಲಯಕ್ಕೆ ಸಮೀಪವಾಗಿದೆ. ಇಳಿಯಲು ಮೆಟ್ಟಲುಗಳನ್ನು ರಚಿಸಿದ್ದಾರೆ ಗುಡಿಯ ಮುಂಭಾಗದಲ್ಲಿ ವಿಶಾಲವಾದ ಮರಗಳನ್ನು ಬೆಳಸಲಾಗಿದೆ. ಇಲ್ಲಿನ ಪರಿಸರಕ್ಕೆ ಇದರಿಂದ ಶೋಭೆ ಉಂಟಾಗಿದೆ.

ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳಿಂದ ಕೂಡಿರುವ ದೇವಾಲಯವು ಸುತ್ತಲೂ ಪ್ರಾಕಾರ ಹೊಂದಿದೆ. ಗೊರೂರಿನಲ್ಲಿರುವ ಮತ್ತೊಂದು ದೇಗುಲ ವಾಸುದೇವ ದೇವಾಲಯವನ್ನು ನಿರ್ಮಿಸಿದ ಕಾಲದಲ್ಲಿಯೇ ಇದನ್ನು ಸಹ ಕಟ್ಟಿರಬೇಕು. ಗೋಪುರ ಮಂಟಪಗಳಿಂದ ಕೂಡಿರುವ ಇಡೀ ಆಲಯವು ಸುಂದರವಾದ ರಚನೆಯಾಗಿದೆ. ಹೊಯ್ಸಳ ಶೈಲಿಯಲ್ಲಿ ಮನೋಹರವಾಗಿ ಕೆತ್ತಲಾಗಿರುವ ಯೋಗಾ ನರಸಿಂಹಸ್ವಾಮಿಯು ಆರಾಧಿಸುವವರ ಅಭೀಷ್ಟಗಳನ್ನು ನೆರವೇರಿಸುತ್ತ ಪ್ರಸನ್ನ ವದನನಾಗಿದ್ದಾನೆ.

# ಬೇಲೂರು

ಇದು ಹಾಸನ ಜಿಲ್ಲೆಯ ತಾಲೂಕು ಕೇಂದ್ರ, ಹಾಸನಕ್ಕೆ ವಾಯುವ್ಯದಲ್ಲಿ ಇಪ್ಪತ್ತನಾಲ್ಕು ಮೈಲಿಗಳ ಅಂತರದಲ್ಲಿದೆ. ಇದು ಬಹುಕಾಲ ಹೊಯ್ಸಳರ ರಾಜಧಾನಿಯಾಗಿತ್ತು, ಇಲ್ಲಿ ವಿಷ್ಣುವರ್ಧನನು ಹನ್ನೆರಡನೆಯ ಶತಮಾನದಲ್ಲಿ ರಾಜ್ಯಭಾರ ಮಾಡಿದ. ಇವನು ಮೊದಲು ಜೈನನಾಗಿದ್ದು ನಂತರ ವೈಷ್ಣವನಾದ. ಅದರ ಜ್ಞಾಪಕಾರ್ಥವಾಗಿ ಚನ್ನ ಕೇಶವ ದೇವಾಲಯವನ್ನು ನಿರ್ಮಾಣ ಮಾಡಿಸಿರುತ್ತಾನೆ.

ಬೇಲೂರಿಗೆ ಅಭಿನವಕ್ಷೋಣಿ ವೈಕುಂಠವೆಂದೂ, ತ್ರಿಲೋಕ ಮಹಾಸ್ಥಾನವೆಂದೂ, ದಕ್ಷಿಣ ವಾರಣಾಸಿಯೆಂದೂ ಪುರಾಣದಲ್ಲಿ ಉಕ್ತವಾಗಿದೆ. ಹಾಗೆಯೇ ಈ ಊರಿಗೆ ವೇಲಾಪುರಿ, ವೇಲೂರು, ಬೆಳಮಾರು ಎಂಬ ಹೆಸರುಗಳೂ ಇವೆ. ಚೆನ್ನಕೇಶವ ದೇವಾಲಯವನ್ನು ಸುಮಾರು ಒಂದು ಸಾವಿರದ ಎಂಟುನೂರು ಚದರಅಡಿಗಳ ಜಾಗದಲ್ಲಿ ನಿರ್ಮಿಸಲಾಗಿದೆ.

ಚೆನ್ನಕೇಶವ ದೇವಾಲಯವು ಪೂರ್ವಾಭಿಮುಖವಾಗಿ ನಾಲ್ಕು ಅಡಿ ಎತ್ತರದ ನಕ್ಷತ್ರಾಕಾರದ ಜಗಲಿಯ ಮೇಲೆ ಅದೇ ಆಕಾರದಲ್ಲಿ ಕಟ್ಟಿದೆ. ಇದಕ್ಕೆ ಎರಡು ಮಹಾದ್ವಾರಗಳಿವೆ. ಉತ್ತರದ್ವಾರದಲ್ಲಿ ದ್ರಾವಿಡ ರೀತಿಯ ಎತ್ತರವಾದ ಗೋಪುರವಿದೆ. ಎರಡನೆಯ ಮಹಾದ್ವಾರಕ್ಕೆ ಆನೆಯ ಬಾಗಿಲು ಎಂದು ಹೆಸರು. ಈ ಗುಡಿಯಲ್ಲಿ ಗರ್ಭಗೃಹ, ಸುಕನಾಸಿ, ನವರಂಗಗಳೆಂಬ ಭಾಗಗಳಿವೆ.

ನವರಂಗದ ಹೊರಗೋಡೆಗಳಲ್ಲಿ ಸುಕನಾಸಿಯವರೆಗೆ ಎಂಟು ಸಾಲು ಚಿತ್ರಪಟ್ಟಿಕೆಗಳಿವೆ. ಮೊದಲನೆಯ ಸಾಲಿನಲ್ಲಿ ಆನೆಗಳು, ಸಿಂಹಲಲಾಟಗಳಿರುವ ಮಣಿತೋರಣ ಮತ್ತು ಇತರ ಕೆತ್ತನೆಗಳಿವೆ. ಇಲ್ಲಿನ ಕಟಾಂಜನದ ಮೇಲೆ ಜಾಲಂಧ್ರಗಳಿವೆ. ಇವುಗಳ ಶಿಲ್ಪ ಅತ್ಯುಜ್ವಲವಾಗಿದೆ. ಒಂದರಂತೆ ಮತ್ತೊಂದು ಇರುವುದಿಲ್ಲ. ಹತ್ತನೆಯ ಜಾಲಂಧ್ರದಲ್ಲಿ ಪ್ರಹ್ಲಾದನ ಚಿತ್ರಹಿಂಸೆ, ಹಿರಣ್ಯಕಶಿಪು ವಧೆ- ಇವುಗಳ ಚಿತ್ರಣವಿದೆ. ಪೂರ್ವದ್ವಾರದ ಎಡಭಾಗದ ಜಾಲಂಧ್ರದಲ್ಲಿ ಒಂದನೆಯ ನರಸಿಂಹನ ದರ್ಬಾರಿನ ಚಿತ್ರ, ಯೋಗಾನರಸಿಂಹ, ಗರುಡ, ಹನುಮಂತ ಇವು ಕೆತ್ತಲ್ಪಟ್ಟಿವೆ.

ಸುಕನಾಸಿಯ ಉಭಯ ಪಾರ್ಶ್ವಗಳಲ್ಲಿ ಬಹು ಸುಂದರವಾದ ದ್ವಾರಪಾಲಕರಿದ್ದಾರೆ. ನವರಂಗದ ಕಂಬಗಳು ಬಹುರಮಣೀಯವಾಗಿ ಕೆತ್ತಲ್ಪಟ್ಟಿವೆ. ಮಧ್ಯದ ನಾಲ್ಕು ಕಂಬಗಳನ್ನು ಬಿಟ್ಟು ಉಳಿದವು ಒಂದರಂತೆ ಮತ್ತೊಂದಿಲ್ಲ. ಇವುಗಳಲ್ಲಿ ಎರಡು ಕಂಬಗಳು ಪ್ರಸಿದ್ಧವಾದವು. ಅವುಗಳಲ್ಲಿ ಒಂದು 'ನರಸಿಂಹ ಸ್ತಂಭ.'

ನರಸಿಂಹ ಸ್ತಂಭವು ಮೊದಲು ತಿರುಗುತ್ತಿತ್ತೆಂದು ಹೇಳುತ್ತಾರೆ. ಇದರಲ್ಲಿ ಮೊದಲಿಂದ ಕೊನೆಯವರೆಗೆ ಸಣ್ಣ ಚಿತ್ರಗಳು, ಬೊಂಬೆಗಳು ಕೆತ್ತಲ್ಪಟ್ಟಿವೆ. ಕಡಲೆ

ಬಸವಣ್ಣನೆಂದು ಹೇಳುವ ಸೂಕ್ಷ್ಮಕೆತ್ತನೆ ಶಿಲ್ಪ ಈ ಕಂಬದಲ್ಲಿದೆ. ಮತ್ತೊಂದು ಕಂಬವಾದ ಮೋಹಿನೀ ಸ್ಥಂಭವು ಪರಮೋತ್ಕೃಷ್ಟವೆಂದು ಪರಿಗಣಿಸಲಾಗಿದೆ. ಇದರಲ್ಲಿ ಸಹ ದಶಾವತಾರಗಳ ಕೆತ್ತನೆಯನ್ನು ಗಮನಿಸಬಹುದು.

ನವರಂಗದ ನಾಲ್ಕು ಕಂಬಗಳ ಮೇಲೆ ಹತ್ತು ಅಡಿ ವ್ಯಾಸ-ಆರು ಅಡಿ ಆಳವೂ ಇರುವ ಭುವನೇಶ್ವರಿಯಿದೆ. ಇದರಲ್ಲಿ ಹಂತಹಂತವಾಗಿ ಒಂದರ ಮೇಲೊಂದರಂತೆ ವಿಶೇಷ ಅಲಂಕರಣಗಳಿಂದ ಕೂಡಿದ ಶಿಲಾ ಪಟ್ಟಿಕೆಗಳೂ, ಒಂದೊಂದರಲ್ಲಿಯೂ ಮೊಗ್ಗುಗಳೂ ದೇವತಾ ವಿಗ್ರಹಗಳೂ ಇದ್ದು ಇವುಗಳ ನಡುವೆ ಮೊಗ್ಗಿನಾಕಾರದಲ್ಲಿ ಜೋತು ಬಿದ್ದಿರುವ ಒಂದು ಭಾರೀ ಶಿಲಾಪದ್ಮದ ಮುಖದಲ್ಲಿ ನರಸಿಂಹನು ಹಿರಣ್ಯಕಶಿಪುವಿನ ಕರುಳಿನ ಎಳೆಗಳು ಕಾಣುವಂತೆ ಹೊಟ್ಟೆಯನ್ನು ಬಗೆಯುತ್ತಿರುವುದನ್ನು ಚಿತ್ರಿಸಿರುವುದು ಬಹು ಆಶ್ಚರ್ಯಕರವಾಗಿದೆ.

ಹೊಯ್ಸಳರ ಇತಿಹಾಸದಲ್ಲಿ ಬೇಲೂರಿನ ಸ್ಥಾನ ಹಿರಿದಾದದ್ದು. ಅವರ ಕಲಾ ಕುಸುಮವು ಅರಳಿದ್ದು ಇಲ್ಲಿ. ಅದರ ಅತ್ಯಂತ ಪರಾಕಾಷ್ಠೆ ತಲುಪಿದ್ದು ಈ ಸ್ಥಳದಲ್ಲಿ. ಅವರ ಶಿಲ್ಪಕಲಾ ವೈಭವವು ಈ ಕೇಂದ್ರಭಾಗದಿಂದ ನಾಡಿನ ಮೂಲೆ ಮೂಲೆಗಳಿಗೆ ಹರಡಿತು. ಜ್ವಾಜ್ವಲ್ಯಮಾನವಾಗಿ ಬೆಳಗಿತು. ಅವರ ಕಾಲದ ನರಸಿಂಹ ಶಿಲ್ಪಗಳಿಗೂ ಕೊರತೆಯಿಲ್ಲ ಹಾಗೆ ನೋಡಿದರೆ ನರಸಿಂಹ ಎಂಬ ಹೆಸರಿನ ಸರ್ವತೋಮುಖ ಪ್ರಚಾರಕ್ಕೆ ಅವರೂ ಮತ್ತು ಅವರುಗಳು ಇಟ್ಟುಕೊಂಡ ಹೆಸರುಗಳೇ ಸಾಕ್ಷಿಯೆಂದು ಹೇಳಬೇಕು. ವೇಲಾಪುರಿಯ 'ವೈಭವ'ದಲ್ಲಿ ನಮ್ಮ ನರಸಿಂಹಸ್ವಾಮಿ ಮೆರೆದಿದ್ದಾನೆಂಬ ಬಗ್ಗೆ ಯಾವ ಸಂಶಯವೂ ಇಲ್ಲ.

## ಜಾವಗಲ್

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನಲ್ಲಿರುವ ಜಾವಗಲ್ ದೊಡ್ಡದಾದ ಹಳ್ಳಿಯಂತಿದೆ. ಈ ಊರು ಹಾಸನದಿಂದ ಮೂವತ್ತೈದು ಕಿ.ಮೀ. ಮತ್ತು ಹಳೆಯಬೀಡಿಗೆ ಹದಿನಾಲ್ಕು ಕಿ.ಮೀ. ದೂರದಲ್ಲಿದೆ. ಇತಿಹಾಸ ಪ್ರಸಿದ್ಧವಾಗಿರುವ ಜಾವಗಲ್‌ನಲ್ಲಿ ಲಕ್ಷ್ಮೀನರಸಿಂಹ ದೇವಾಲಯವು ಪ್ರಖ್ಯಾತವಾಗಿದೆ. ಹಾಗೆಯೇ ಇಲ್ಲಿ ಗಂಗಾಧರೇಶ್ವರ ಮತ್ತು ವೀರಭದ್ರರ ಹಳೆಯ ಕಾಲದ ದೇವಾಲಯಗಳು ಇರುತ್ತವೆ.

ಹೊಯ್ಸಳ ರೀತಿಗೆ ಅನುಗುಣವಾಗಿರುವ ಲಕ್ಷ್ಮೀನರಸಿಂಹ ದೇವಾಲಯವು ತ್ರಿಕೂಟಾಚಲವಾಗಿದೆ. ಇದನ್ನು ಹದಿಮೂರನೆ ಶತಮಾನದ ಮಧ್ಯಭಾಗದಲ್ಲಿ ನಿರ್ಮಿಸಿರುತ್ತಾರೆ. ಬಳಪದ ಕಲ್ಲಿನಲ್ಲಿ ಕಟ್ಟಲಾಗಿರುವ ದೇವಾಲಯವು ನಕ್ಷತ್ರಾಕಾರದ ಜಗತಿಯನ್ನು ಹೊಂದಿದೆ. ಮೂರು ಗರ್ಭಗೃಹಗಳು ಮತ್ತು ಮುಖ ಮಂಟಪಗಳನ್ನು ಒಳಗೊಂಡಿದೆ. ದೇವಾಲಯದ

ಒಂದು ಶಿಖರ ಮಾತ್ರ ಉಳಿದಿದೆ. ಆಲಯದ ಹೊರ ಭಾಗದ ಗೋಡೆಯ ತಳಭಾಗವನ್ನು ಶಿಲಾಪಟ್ಟಿಕೆಗಳಿಂದ ಅಲಂಕೃತಗೊಳಿಸಲಾಗಿದೆ. ಅದರ ಮೇಲ್ಭಾಗದಲ್ಲಿ ದೇವಶಿಲ್ಪಗಳು. ಅದಕ್ಕೂ ಮೇಲೆ ಮಕರ ತೋರಣಾದಿ ವಿಮಾನಗಳಿವೆ. ಪೌರಾಣಿಕ ಕಥೆಗಳನ್ನು ಬಿತ್ತರಿಸು ವಂತಿರುವ ಶಿಲಾ ಪಟ್ಟಿಕೆಗಳು ಗಮನಾರ್ಹವಾಗಿದೆ. ವಿಶ್ವಾಮಿತ್ರನ ಯಾಗದಿಂದ ಹಿಡಿದು ರಾಮಪಟ್ಟಾಭಿಷೇಕದವರೆಗೆ ರಾಮಾಯಣದ ಪ್ರಮುಖ ಘಟನೆಗಳನ್ನು ಶಿಲ್ಪಿಯು ಇಲ್ಲಿ ಕೆತ್ತಿರುತ್ತಾನೆ. ದೂರದರ್ಶಕದ ಸಹಾಯದಿಂದೆಂಬಂತೆ ಹನುಮಂತನು ಲಂಕೆಯನ್ನು ನೋಡು ತ್ತಿರುವಂತೆ ಕಡೆದಿರುವ ಶಿಲ್ಪವು ಕುತೂಹಲವನ್ನು ಕೆರಳಿಸುತ್ತಿದೆ.

ಮೂರು ಅಂತಸ್ತುಗಳಿಂದ ಕೂಡಿದ ನಕ್ಷತ್ರಾಕಾರದ ಶಿಖರ, ಸಣ್ಣ ಗೋಪುರಗಳನ್ನು ಈ ಆಲಯವು ಹೊಂದಿದೆ. ಮಹಾದ್ವಾರದ ಮೇಲಿನ ಗೋಪುರ ಉಳಿದಿಲ್ಲ. ಈ ಭಾಗವು ವಿಜಯನಗರ ಅರಸರ ಕಾಲದಲ್ಲಿ ಕಟ್ಟಿದ್ದು ಮುಖ ಮಂಟಪದಲ್ಲಿ ಹಳೆಯ ಕಲ್ಲಿನ ಜಗತಿಗಳು, ದುಂಡಾದ ಕಂಬಗಳು ಇವೆ. ಪಾಳೆಯಗಾರರ ಕಾಲಕ್ಕೆ ಸೇರಿದ ಮತ್ತೊಂದು ಮಂಟಪವು ಇಲ್ಲಿದೆ.

ದಕ್ಷಿಣ ಗರ್ಭಗುಡಿಯಲ್ಲಿ ವೇಣುಗೋಪಾಲ- ಉತ್ತರಗರ್ಭ ಗೃಹದಲ್ಲಿ ನರಸಿಂಹ, ಪಶ್ಚಿಮದಲ್ಲಿ ಶ್ರೀಧರ ವಿಗ್ರಹಗಳಿವೆ. ಮುಖ್ಯ ಗರ್ಭಗುಡಿಯ ದ್ವಾರದ ಜಾಲಂಧ್ರದ ಮೇಲ್ಭಾವಣಿಯಲ್ಲಿ ಒಂಬತ್ತು ಪದ್ಮಗಳಿವೆ. ಲಕ್ಷ್ಮೀನರಸಿಂಹ ಸ್ವಾಮಿಯನ್ನು ಮೂಲ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠೆ ಮಾಡಿಲ್ಲವಾದರೂ, ದೇವಾಲಯವನ್ನು ಈ ಹೆಸರಿನಿಂದಲೇ ಕರೆಯುತ್ತಿದ್ದಾರೆ. ಇಲ್ಲಿನ ಮೂರ್ತಿಯನ್ನು ವಿಷ್ಣುವರ್ಧನನು ಹರಿಹರೇಶ್ವರ ಬೆಟ್ಟದಿಂದ ತರಿಸಿ ಸ್ಥಾಪನೆ ಮಾಡಿದ ವಿಚಾರವು ತಿಳಿದು ಬರುತ್ತಿದೆ.

## ನುಗ್ಗೆಹಳ್ಳಿ

ಹಾಸನ ಜಿಲ್ಲೆಯಲ್ಲಿರುವ ನುಗ್ಗೆಹಳ್ಳಿಯು ಚೆನ್ನರಾಯಪಟ್ಟಣಕ್ಕೆ ಇಪ್ಪತ್ತು ಕಿ.ಮಿ. ದೂರದಲ್ಲಿದೆ. ಇದು ಹೋಬಳಿ ಕೇಂದ್ರವು ಆಗಿದೆ. ಇಲ್ಲಿ ಅನೇಕ ಪ್ರಸಿದ್ಧವಾದ ದೇವಾಲಯ ಗಳಿವೆ. ಇದೊಂದು ಅಗ್ರಹಾರವಾಗಿ ಪ್ರಸಿದ್ಧವಾಗಿತ್ತು. ಹೊಯ್ಸಳರ ದಂಡನಾಯಕನಾದ ಬೊಮ್ಮಣ್ಣನೆಂಬುವನು ಇದರ ಪ್ರಖ್ಯಾತಿಗೆ ಕಾರಣನಾಗಿದ್ದಾನೆ. ಈತ ಪಾಳೆಯಗಾರನೂ ಆಗಿದ್ದ ಸಂಗತಿ ಇತಿಹಾಸದಲ್ಲಿ ಸುವ್ಯಕ್ತವಾಗಿದೆ.

ಈತ ಕ್ರಿ.ಶ. ೧೨೪೬ರಲ್ಲಿ ಊರಿನ ಮಧ್ಯಭಾಗದಲ್ಲಿ ಒಂದು ವಿಷ್ಣುದೇವಾಲಯವನ್ನು ಊರಿಗೆ ಈಶಾನ್ಯ ದಿಕ್ಕಿನಲ್ಲಿ ಒಂದು ಶಿವ ದೇವಾಲಯವನ್ನು ಕಟ್ಟಿಸಿದ. ಈತನ ಅಕ್ಕ ನಾದ ಲಕ್ಕವ್ವ ಮತ್ತು ಕಮ್ಮಿತದ ಬಸವಣ್ಣನೆಂಬ ವ್ಯಕ್ತಿಗಳು ಇಲ್ಲಿ ಛತ್ರಗಳನ್ನು ನಿರ್ಮಿಸಿ ಅದಕ್ಕೆ ದತ್ತಿಗಳನ್ನು ನೀಡಿರುತ್ತಾರೆ. ಇವೆಲ್ಲವೂ ಇಲ್ಲಿನ ಶಾಸನಗಳಿಂದ

ತಿಳಿದು ಬರುವ ಸಂಗತಿಗಳಾಗಿವೆ. ವಿಜಯನಗರ ಅರಸರ ಕಾಲದಲ್ಲಿ ಒಂದು ನಾಡಿನ ರಾಜಧಾನಿಯಾಗಿ ನುಗ್ಗೆಹಳ್ಳಿಯು ಪ್ರಸಿದ್ಧಿಗಳಿಸಿತ್ತು. ಇಂತಹ ಸ್ಥಳದಲ್ಲಿ ಕಟ್ಟಿಗೆ ಗುಂಡಪ್ಪನೆಂಬ ಪುಣ್ಯ ಪುರುಷನಿಂದ ಇಲ್ಲಿನ ದೇವಾಲಯಗಳ ಜೀರ್ಣೋದ್ಧಾರ ಕಾರ್ಯಗಳು ನಡೆದವು.

ನುಗ್ಗೆಹಳ್ಳಿಯ ಮಧ್ಯಭಾಗದಲ್ಲಿರುವ ವಿಷ್ಣುದೇವಾಲಯವಾಗಿ ಪ್ರಸಿದ್ಧವಾಗಿರುವ ನರಸಿಂಹ ಸ್ವಾಮಿ ದೇವಾಲಯವು ತ್ರಿಕೂಟಾಚಲವಾಗಿದೆ. ಮೂರು ಗರ್ಭಗೃಹಗಳಿರುವ ಈ ದೇವಮಂದಿರದಲ್ಲಿ ಮಧ್ಯದಲ್ಲಿ ಕೇಶವ ಒಂದು ಬದಿಗೆ ಲಕ್ಷ್ಮೀನರಸಿಂಹ, ಮತ್ತೊಂದು ಗೋಪಾಲರ ಮೂರ್ತಿಗಳಿವೆ. ಮಧ್ಯದ ಗರ್ಭಗೃಹಕ್ಕೆ ಮಾತ್ರ ಶಿಖರವಿದೆ. ಇಡೀ ದೇವಾಲಯವು ಹೊಯ್ಸಳರ ಕಾಲದ ಉನ್ನತ ರಚನೆಯಾಗಿದ್ದು ಅದ್ಭುತ ಕಲಾ ಸಂಪತ್ತುಗಳನ್ನು ಹೊರಚೆಲ್ಲುತ್ತಿದೆ.

ಜಗತಿಯ ಮೇಲೆ ಬಳಪದ ಕಲ್ಲಿನಿಂದ ಕಟ್ಟಲಾಗಿರುವ ದೇವಾಲಯದ ಹೊರ ಗೋಡೆಗಳ ತಳಭಾಗದಲ್ಲಿ ಆನೆ ಕುದುರೆ ಹಂಸ ಮೊದಲಾದ ಪ್ರಾಣಿ ಪಕ್ಷಿಗಳ ಪಟ್ಟಿಕೆಗಳಿವೆ. ಮತ್ತೊಂದು ಶಿಲಾಪಟ್ಟಿಕೆಯೂ ಇಡೀ ಭಾಗವತವನ್ನು ಪ್ರಮುಖ ದೃಶ್ಯಾವಳಿಗಳಿಂದ ನಿರೂಪಿಸುವ ಶಿಲ್ಪಕಲೆಯಿಂದ ಕೂಡಿ ವೈಶಿಷ್ಟ್ಯ ಪೂರ್ಣವಾಗಿದೆ. ಮತ್ತಾವುದೇ ಶ್ರೇಷ್ಠವಾದ ಹೊಯ್ಸಳ ದೇವಾಲಯಗಳ ರಚನೆಯನ್ನು ಹೋಲುವ ಈ ದೇವಾಲಯದ ನವರಂಗದ ಭಾಗವು ಸುಂದರವಾಗಿದೆ. ಇಲ್ಲಿನ ದ್ವಾರಬಂಧದ ಮೇಲೆ ವೀಣೆಯನ್ನು ನುಡಿಸುತ್ತಿರುವ ಸರಸ್ವತಿಯ ಶಿಲ್ಪವಿದೆ. ಚಾವಣಿಗಳಲ್ಲಿರುವ ಭುವನೇಶ್ವರಿಗಳು ಕಲಾತ್ಮಕವಾಗಿವೆ. ಒಂದೊಂದು ಸಹ ಒಂದೊಂದು ಬಗೆಯಾಗಿ ವೈವಿಧ್ಯತೆಯನ್ನು ಮೆರೆಯುತ್ತಿವೆ.

ದೇವಾಲಯದ ಅನೇಕ ಮೂರ್ತಿಗಳು ಪ್ರಸಿದ್ಧಶಿಲ್ಪಿಗಳಾದ ಮಲ್ಲಿತಮ್ಮ ಮತ್ತು ನಂದಿಯ ಬೈಚೋಜರ ಕೈಚಳಕದಿಂದ ಆಕರ್ಷಕವಾಗಿ ಕೆತ್ತಲ್ಪಟ್ಟಿವೆ. ದೇವಾಲಯದ ಉತ್ತರಭಾಗದ ಕಲಾ ನೈಪುಣ್ಯಕ್ಕೆ ಕಾರಣನಾದವನು ಮಲ್ಲಿತಮ್ಮನಾದರೆ ದಕ್ಷಿಣದ ಕಲಾ ಸೊಬಗಿಗೆ ನಂದಿಯ ಬೈಚೋಜನು ಕಾರಣಕರ್ತನಾಗಿದ್ದಾನೆ. ಈತನಿಗೆ ಗಿರಿವಜ್ರದಂಡ, ಬಂಧಪ್ರಸಾದಿ, ಪುಸ್ತಕ ಶೂಲ ಮುಂತಾದ ಬಿರುದುಗಳಿದ್ದವು.

ಪಾಳೆಯಗಾರರ ಕಲಾಸೇವೆಯ ಕಾರಣವಾಗಿ ದೇವಾಲಯಕ್ಕೆ ವಿಶಾಲ ಆವರಣವು ದೊರೆತಂತಾಗಿದೆ. ಪಾತಾಳಂಕಣ ಮತ್ತು ಹಜಾರಗಳನ್ನು ಇವರ ಕಾಲದಲ್ಲಿ ಕಟ್ಟಿರಬಹುದೆಂದು ಊಹಿಸಬಹುದು. ಇಂತಹ ಸಾಮೂಹಿಕ ಕಾರ್ಯೋತ್ಸಾಹಗಳಿಂದ ಕಲೆಗೆ ನೀಡಲಾದ ಉತ್ತೇಜನದಿಂದ ಇಡೀ ದೇವಾಲಯದ ಅಂದ ಚಂದಗಳು, ವೈಭವವು ತಮ್ಮ ಶಿಖರವೇರಲು ಸಾಧ್ಯವಾಗಿದೆ. ಲಕ್ಷ್ಮೀನರಸಿಂಹ ದೇವಾಲಯಗಳ ಸಮೂಹಕ್ಕೆ ನುಗ್ಗೆಹಳ್ಳಿಯ ದೇವಾಲಯವು ವಿಶಿಷ್ಟವಾದ ಕೊಡುಗೆಯಾಗಿ ಉಳಿದಿದೆ.

ನುಗ್ಗೆಹಳ್ಳಿ ಕ್ಷೇತ್ರಕ್ಕೆ ಹೋಗಿಬರುವುದಕ್ಕೆ ವಾಹನಗಳ ಸೌಲಭ್ಯ ಧಾರಾಳವಾಗಿ ದೊರೆಯುತ್ತದೆ.

# ಹೊಳೆನರಸೀಪುರ

ಹಾಸನ ಜಿಲ್ಲೆಯಲ್ಲಿರುವ ಹೊಳೆನರಸೀಪುರವು ತಾಲೂಕು ಕೇಂದ್ರವಾಗಿ ಪ್ರಸಿದ್ಧವಾಗಿದೆ. ಅಧ್ಯಾತ್ಮ, ಸಾಹಿತ್ಯ ದರ್ಶನಗಳಿಗೆ ಹೆಸರುವಾಸಿಯಾದ ಈ ಪಟ್ಟಣವು ಹೇಮಾವತಿ ನದಿಗೆ ದಕ್ಷಿಣ ದಿಕ್ಕಿನಲ್ಲಿದೆ. ಸಂಸ್ಕೃತಿ-ಧರ್ಮಗಳಿಗೂ ತನ್ನ ಕಾಣಿಕೆಯನ್ನು ನೀಡುವಂತಿರುವ ಕೋಟೆ ಕೊತ್ತಲಗಳು ಗುಡಿಗೋಪುರಗಳಿಂದ ಕಂಗೊಳಿಸುತ್ತಿರುವ ಹೊಳೆನರಸೀಪುರದಲ್ಲಿ ಪ್ರಸಿದ್ಧವಾದ ಲಕ್ಷ್ಮೀನರಸಿಂಹ ದೇವಾಲಯವಿದೆ.

ಪುರಾಣ ಇತಿಹಾಸಗಳ ಸ್ಮರಣೆಯ ನೆಲೆಯಂತೆ ಇರುವ ಇಲ್ಲಿನ ದೇವಾಲಯಕ್ಕೆ ಸುಮಾರು ಐದುನೂರು ವರ್ಷಗಳ ಪ್ರಾಚೀನತೆಯಿರುತ್ತದೆ. ಹೊಯ್ಸಳ ರಾಜರಿಂದ ನಾಯಕರ ಕಾಲದವರೆಗಿನ ತನ್ನ ಹಿರಿಮೆ, ಗರಿಮೆಗಳಿಂದ ಬೆಳೆಸಿಕೊಂಡಿದೆ. ಇದು ಇಂದಿನ ನಾಗರಿಕ ಜನರ ಹೆಮ್ಮೆಯ ಪುಣ್ಯಾರಾಮವಾಗಿ ಕಂಗೊಳಿಸುತ್ತಿದೆ.

ನರಸಿಂಹನ ದಿವ್ಯಕ್ಷೇತ್ರವಾದ ಹೊಳೆನರಸೀಪುರದ ಕೋಟೆಯನ್ನು ಕ್ರಿ.ಶ. ೧೧೬೮ರಲ್ಲಿ ನರಸಿಂಹ ನಾಯಕನೆಂಬ ವ್ಯಕ್ತಿಯು ಕಟ್ಟಿಸಿದಂತೆ ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಹೊಯ್ಸಳರ ಆಳ್ವಿಕೆಯ ವೈಭವದ ಕಾಲದಲ್ಲಿ ನಿರ್ಮಿಸಲಾದ ಈ ಊರನ್ನು ಅವನ ನಂತರ ಅವರ ವಂಶದವರೇ ಆದ ಮೈಸೂರಿನಒಡೆಯರು ತಮ್ಮ ವಶಕ್ಕೆ ಕ್ರಿ.ಶ. ೧೬೬೭ ರಲ್ಲಿ ತೆಗೆದುಕೊಂಡ ವಿಚಾರವು ತಿಳಿದು ಬರುತ್ತದೆ. ಇದಕ್ಕೂ ಮುನ್ನ ಕ್ರಿ.ಶ. ೧೬೦೦ರಲ್ಲಿ ಲಕ್ಷ್ಮಪ್ಪನಾಯಕನೆಂಬುವನ ಅಧೀನದಲ್ಲಿದ್ದ ಹೊಳೆನರಸೀಪುರದ ಆಡಳಿತ ವ್ಯಾಪ್ತಿಯಲ್ಲಿ ಚನ್ನರಾಯಪಟ್ಟಣವು ಸೇರ್ಪಡೆಯಾಗಿತ್ತು. ಹೀಗೆ ಇತಿಹಾಸದ ಪರಂಪರೆಗೆ ಸೇರಿದ ಈ ಪಟ್ಟಣವು ಸಾಕಷ್ಟು ಪ್ರಖ್ಯಾತಿಯನ್ನು ಗಳಿಸಿದೆ.

ಪುರಾಣ ಪರಂಪರೆಯಲ್ಲಿ ದಾಖಲಾಗಿರುವಂತೆ ಈ ಊರಿನ ಮಹಿಮೆಯನ್ನು ಭೃಗು ಮಹರ್ಷಿಗಳ ಆದೇಶದ ಮೇರೆಗೆ ನಾರದ ಮಹರ್ಷಿಗಳು ತಿಳಿಸಿದರೆಂದು ಗೊತ್ತಾಗುತ್ತದೆ. "ವಾಮಾಂಕ ವಿಲಸತ್ ಪದ್ಮ ಶಂಖ ಚಕ್ರಧರ ಪ್ರಭೋ, ಭಕ್ತಾಭಯ ಪ್ರಧಾನತ್ವಂ ನೃಸಿಂಹ ಪುನೀಹಿಮಾಮ್" ಎಂಬಂತೆ ನರಸಿಂಹನ ಮಹಿಮೆಯನ್ನು ವರ್ಣಿಸಲಾಗಿದೆ. ಇಂತಹ ಸ್ವಾಮಿಯು ನೆಲೆಸಿರುವ ಕ್ಷೇತ್ರದ ಮಹಿಮೆಯನ್ನು ಕುರಿತ ವರ್ಣನೆಯಲ್ಲಿ ಭೌಗೋಳಿಕ ವಿವರವು ಅಡಕವಾದಂತಿದೆ.

ಪಾಪ ನಿವಾರಿಣಿಯಾದ ನೃಸಿಂಹಪುರವೆಂಬ ಪಟ್ಟಣವು ಹೇಮಾವತಿ ನದಿಯ ದಕ್ಷಿಣದಲ್ಲಿದೆ. ಈ ಪಟ್ಟಣದ ಮಧ್ಯಭಾಗದಲ್ಲಿ ಸೂರ್ಯನಿಗೆ ಸಮವಾದ ಪ್ರಕಾಶತೆಯಿಂದ ಧರ್ಮಶೃಂಗ ವಿಮಾನವು ಹೊಳೆಯುತ್ತಿದೆ. ಇಲ್ಲಿ ಮಹತೋಮಹಿಮನಾದ ನೃಸಿಂಹ ಸ್ವಾಮಿಯು ಪ್ರಸನ್ನ ಲಕ್ಷ್ಮಿಯಿಂದೊಡಗೂಡಿ ವರಪ್ರದನಾಗಿದ್ದಾನೆ. ಹೊಳೆ ಎಂಬ ಮಾತಿಗೆ ಇಲ್ಲಿ ಎರಡು ಅರ್ಥಗಳಿವೆ. ಒಂದು ಪ್ರಕಾಶಿಸುವುದು ಎಂದಾದರೆ ಮತ್ತೊಂದು ನೀರಿನ

ಆಸರೆಯನ್ನು ನಿರ್ದೇಶಿಸುತ್ತದೆ. ವಸಿಷ್ಠ ಮಹರ್ಷಿಗಳ ತಪಸ್ಸಿನ ಫಲವಾಗಿ ಗೋಚರವಾದ ಈ ನರಸಿಂಹ ಕ್ಷೇತ್ರದಲ್ಲಿರುವ ಹೇಮಾವತಿ ನದಿಯ ಮಧ್ಯದಲ್ಲಿ ನೃಸಿಂಹ ಕೊಳವಿದೆ. ಫಾಲ್ಗುಣ ಮಾಸದ ಹುಣ್ಣಿಮೆಯಂದು ತೀರ್ಥೋದ್ಭವ ಸಮಯದಲ್ಲಿ ಮಹಿಮಾವಂತರಾದ ಮುನಿಗಳು ಉತ್ತರ ದಿಕ್ಕಿಗೆ ಮುಖ ಮಾಡಿ ಕುಳಿತು ತಪಸ್ಸು ಮಾಡಿದ್ದರಿಂದ ಅವರ ಎದುರಿನಲ್ಲಿ ದಕ್ಷಿಣಾಭಿಮುಖವಾಗಿ ಸ್ವಾಮಿಯು ಉದ್ಭವಿಸಿದನೆಂದು ಹೇಳುತ್ತಾರೆ.

ನರಸಿಂಹ ದೇವಾಲಯವು ತ್ರಿಕೂಟಾಚಲವಾಗಿದೆ. ಹೀಗಾಗಿ ಹೊಯ್ಸಳ ಕಲೆ ವಾಸ್ತುಶಿಲ್ಪದ ಪ್ರಧಾನ ಅಂಶಗಳೆಲ್ಲವೂ ಈ ಆಲಯದಲ್ಲಿ ಅರಳಿ ನಿಂತಿವೆ. ಇದನ್ನು ಸುಮಾರು ಹದಿನಾಲ್ಕನೇ ಶತಮಾನದಲ್ಲಿ ಕಟ್ಟಲಾಗಿದೆ. ಗರ್ಭಗೃಹದ ಆನಂತರದ ಭಾಗಗಳು ಎಂದರೆ ನವರಂಗ, ದ್ವಾರಪಾಲಕರ ವಿಗ್ರಹ ಇತ್ಯಾದಿಗಳನ್ನು ವಿಜಯನಗರ ಅರಸರ ಕಾಲದ ರಚನೆಗಳೆಂದು ತಿಳಿಯಲು ಅವಕಾಶವಿದೆ. ಈ ದೇವಾಲಯದ ಗೋಪುರಗಳನ್ನು ನಾಯಕರ ಕಾಲದಲ್ಲಿ ಕಟ್ಟಲಾಗಿದೆಯೆಂದು ಹೇಳುತ್ತಾರೆ.

ನರಸಿಂಹ ಸ್ವಾಮಿಯು ಲಕ್ಷ್ಮೀದೇವಿಯೊಂದಿಗೆ ವಿರಾಜಮಾನರಾಗಿದ್ದಾರೆ. ಎದುರಿನಲ್ಲಿ ಗೋಪಾಲಕೃಷ್ಣಸ್ವಾಮಿ ಮತ್ತು ಬಲಭಾಗದಲ್ಲಿ ಲಕ್ಷ್ಮೀನಾರಾಯಣ ದೇವಾಲಯಗಳಿವೆ. ವೈಖಾನಸಾಗಮೋಕ್ತವಾಗಿ ಪೂಜಾದಿಗಳನ್ನು ನೆರವೇರಿಸಿಕೊಂಡು ಬರಲಾಗುತ್ತಿದೆ. ಶ್ರೀವೈಷ್ಣವ ದೇವಾಲಯಗಳಲ್ಲಿ ಕಂಡುಬರುವಂತೆ ವಿಶ್ವಕ್ಸೇನ, ಆಂಜನೇಯ, ಗರುಡರ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿದ್ದಾರೆ. ಜೊತೆಯಲ್ಲಿ ಆಳ್ವಾರರ ವಿಗ್ರಹಗಳು ಇವೆ.

ಇಂತಹ ವೈಷ್ಣವ ಭಕ್ತಿ-ಆರಾಧನೆಗಳನ್ನು ಪ್ರತಿಪಾದಿಸುತ್ತಿರುವ ಈ ದೇವಾಲಯದ ಹೊರಭಾಗದಲ್ಲಿ ಗಣಪತಿ, ಕುಮಾರಸ್ವಾಮಿ, ವೀರಭದ್ರ, ವೆಂಕಟರಮಣರ ಪುಟ್ಟ ಆಲಯಗಳು ಸೇರಿಕೊಂಡಿವೆ. ಇಲ್ಲಿರುವ ನಾಲ್ಕಾರು ಶಾಸನಗಳು ಈ ದೇವಾಲಯಕ್ಕೆ ಸಂಬಂಧಿಸಿದ ಇತಿಹಾಸವನ್ನು ತಿಳಿಸಿ ಕೊಡುತ್ತ ಈ ಕ್ಷೇತ್ರದ ಚಾರಿತ್ರಿಕ ಮಹತ್ವವನ್ನು ಅಧಿಕಗೊಳಿಸಿದೆ. ಇಲ್ಲಿಗೆ ಸಮೀಪದ ಅರಕಲಗೂಡಿನಲ್ಲಿಯೂ ನರಸಿಂಹ ದೇವಾಲಯವೊಂದಿದೆ.

# ರಾಮನಾಥಪುರ

ಹಾಸನ ಜಿಲ್ಲೆಯಲ್ಲಿರುವ ರಾಮನಾಥಪುರವು ದಕ್ಷಿಣ ಕಾಶಿಯೆಂದೂ ಪ್ರಸಿದ್ಧವಾಗಿದೆ. ಪವಿತ್ರ ನದಿಯಾದ ಕಾವೇರಿ ದಡದಲ್ಲಿರುವ ಈ ಸ್ಥಳವು ಅರಕಲಗೂಡಿನಿಂದ ಹತ್ತೊಂಬತ್ತು ಕಿ.ಮೀ. ದೂರದಲ್ಲಿದೆ. ಪ್ರಕೃತಿಯ ಚೆಲುವಿಗೆ ಕಳಸವಿಟ್ಟಂತಿರುವ ಅನೇಕ ದೇವಾಲಯಗಳು ಇಲ್ಲಿ ಶೋಭಿಸುತ್ತವೆ. ಅಗಸ್ತ್ಯೇಶ್ವರ, ಆಂಜನೇಯ, ಪ್ರಸನ್ನ ರಾಮೇಶ್ವರ ದೇವಾಲಯಗಳ ಜೊತೆಯಲ್ಲಿ ಲಕ್ಷ್ಮೀನರಸಿಂಹ ದೇವಾಲಯ ಇಲ್ಲಿದೆ. ಇದರಿಂದ ಈ ಕ್ಷೇತ್ರಕ್ಕೆ ಪವಿತ್ರವಾದ ವಾತಾವರಣವು ನಿರ್ಮಾಣವಾದಂತಾಗಿದೆ. ಪಟ್ಟಾಭಿರಾಮಚಂದ್ರ ದೇವಾಲಯಕ್ಕೆ ಎದುರಾಗಿ

ಇರುವ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯದಲ್ಲಿರುವ ಮೂರ್ತಿಯನ್ನು ಮೈಸೂರಿನ ಒಡೆಯರಾಗಿದ್ದ ಚಿಕ್ಕ ದೇವರಾಜ ಒಡೆಯರ ಕಾಲದಲ್ಲಿ ನಿರ್ಮಿಸಿ ಪ್ರತಿಷ್ಠೆ ಮಾಡಲಾಯಿತು ಎಂಬುದಾಗಿ ತಿಳಿದು ಬರುತ್ತದೆ. ರಾಮನಾಥಪುರ ಕ್ಷೇತ್ರವನ್ನು ಅರಸಿ ಬರುವ ಭಕ್ತಾದಿಗಳ ಸಲುವಾಗಿ ಸುಗಮ ಸಂಚಾರದ ವ್ಯವಸ್ಥೆಯಿರುತ್ತದೆ.

# ಮೊಸಳೆ

ಹಾಸನ ತಾಲೂಕಿನಲ್ಲಿರುವ ಈ ಗ್ರಾಮವು ತಾಲೂಕು ಕೇಂದ್ರಕ್ಕೆ ಹದಿಮೂರು ಕಿ.ಮೀ. ದೂರದಲ್ಲಿದೆ. ಸದರಿ ಗ್ರಾಮದಲ್ಲಿರುವ ನ್ಯಾಗೇಶ್ವರ ಮತ್ತುಚನ್ನಕೇಶವ ದೇವಾಲಯಗಳಿಂದ ಪ್ರಸಿದ್ಧವಾಗಿದೆ. ಅವಳಿ ದೇವಾಲಯಗಳಾದ ಇದನ್ನು ಬಳಪದ ಕಲ್ಲಿನಲ್ಲಿ ಅತ್ಯಂತ ಮನೋಜ್ಞವಾದ ರೀತಿಯಲ್ಲಿನ ಕುಸುರಿ ವಿನ್ಯಾಸದಿಂದ ನಿರ್ಮಿಸಿದ್ದಾರೆ. ದೇವಸ್ಥಾನದ ಭುವನೇಶ್ವರಿಗಳು ಕೂಡಾ ಸುಂದರ ರೇಖಾವಿನ್ಯಾಸವನ್ನು ಹೊಂದಿದ್ದು ನೋಡುಗರ ಮನಸೂರೆಗೊಳ್ಳುವಂತಿವೆ.

ಚನ್ನಕೇಶವಸ್ವಾಮಿ ದೇವಾಲಯದಲ್ಲಿರುವ ಹಲವಾರು ಅಲಂಕೃತ ಪಟ್ಟಿಕೆಗಳು ಗಮನ ಸೆಳೆಯುವಂತಿದೆ ಇವುಗಳ ಮೇಲೆ ಕೇಶವ, ಗರುಡ, ಅನಿರುದ್ಧ, ಅಚ್ಯುತ, ಲಕ್ಷ್ಮಿ ಜನಾರ್ದನ ಮತ್ತು ವೇಣುಗೋಪಾಲರ ಸುಂದರ ಶಿಲ್ಪಗಳಿವೆ. ವಿಷ್ಣುವಿನ ವಿವಿಧರೂಪಗಳನ್ನು ಶಿಖರದ ಭಾಗದಲ್ಲಿ ತೀರಾ ಸೂಕ್ಷ್ಮವಾದ ಕಲೆಗಾರಿಕೆಯಲ್ಲಿ ಬಿಡಿಸಿರುವುದು ರೂವಾರಿಯ ಪ್ರಭುತ್ವಕ್ಕೆ ಕೈಗನ್ನಡಿಯಾಗಿದೆ.

ನವರಂಗದ ಬಾಗಿಲುವಾಡವನ್ನು ಲಕ್ಷ್ಮಿಸರಸ್ವತಿಯರ ಶಿಲ್ಪಗಳಿಂದ ಅಲಂಕೃತಗೊಂಡಿದೆ. ಒಂಭತ್ತು ಭುವನೇಶ್ವರಿಗಳನ್ನು ಇಲ್ಲಿ ಕಾಣಬಹುದು. ಸುಕನಾಸಿಯ ಭುವನೇಶ್ವರಿಯಲ್ಲಿನ ಉಗ್ರನರಸಿಂಹನ ಶಿಲ್ಪ ಮುಖ್ಯವಾದದ್ದು. ಈ ದೇವಾಲಯ ವೈಶಿಷ್ಟವೇನೆಂದರೆ ಹಿಂಭಾಗದ ತೋರಣದಲ್ಲಿ ದಶಾವತಾರದ ಶಿಲ್ಪಗಳಿರುವುದು. ಜಗನ್ನಿಯಾಮಕನು ತಾಳಿದ ಹತ್ತು ಬಗೆಯ ಅವತಾರಗಳನ್ನು ಇಲ್ಲಿ ಅತ್ಯಂತ ಸುಂದರವಾದ ರೀತಿಯಲ್ಲಿ ಕೆತ್ತಿರುವುದು ಬೆರಗುಗೊಳಿಸದೇ ಇರಲಾರದು.

ಮೊಸಳೆಯ ದೇವಾಲಯವನ್ನು ವಿಶೇಷವಾಗಿ ಅರಸಿಕೊಂಡು ಹೋಗುವ ಭಕ್ತರ ಸಂಖ್ಯೆ ಹೆಚ್ಚಿನದಲ್ಲವಾದರೂ ಪ್ರತಿವರ್ಷ ನಡೆಯುವ ವಿಶೇಷ ಪೂಜಾ ಕಾರ್ಯಕ್ರಮಗಳ ಸಂದರ್ಭದಲ್ಲಿ ಜಿಲ್ಲೆಯ ಹಲವಾರು ಸ್ಥಳಗಳಿಂದ ಧಾರ್ಮಿಕ ಶ್ರದ್ದೆಯುಳ್ಳವರು ಬಂದು ಹೋಗುವುದು ವಾಡಿಕೆ. ಮೊಸಳೆಯನ್ನು ತಲುಪುವುದರ ಸಲುವಾಗಿ ಸಂಚಾರ ಸಮಸ್ಯೆ ಅನುಭವಿಸುವ ಸ್ಥಿತಿಯೇನೂ ಇಲ್ಲ.

# ತಮಿಳುನಾಡಿನ ನೃಸಿಂಹಾಲಯಗಳು

## ನಾಮಕ್ಕಲ್

ಶ್ರೀಶೈಲಮಲೆ, ನಾಮಗಿರಿ, ನಾಮಕ್ಕಲ್ ಎಂಬ ಭೌಗೋಳಿಕ ವಿಶೇಷಣಗಳಿಂದ ಕೂಡಿ ಬೇರೆಬೇರೆ ಹೆಸರುಗಳನ್ನು ಹೊಂದಿ ಪುರಾಣಸ್ಥಳವಾಗಿ ಪ್ರಸಿದ್ಧಿ ಹೊಂದಿದ ನಗರವು ತಮಿಳುನಾಡಿನ ಸೇಲಂ ಜಿಲ್ಲೆಗೆ ಸೇರಿದೆ. ಸುಮಾರು ಹತ್ತುಮೈಲಿ ವ್ಯಾಪ್ತಿಯ ಬೆಟ್ಟಗಳಿಂದ ಆವೃತವಾದ ಊರಿನ ಮಧ್ಯ ಭಾಗದಲ್ಲಿ ಒಂದು ಗುಟ್ಟವಿದೆ. ಈ ಗುಟ್ಟೆ ಅಥವಾ 'ಕಲ್'ನಿಂದಾಗಿ, ಊರಿನ ಪ್ರಧಾನ ದೇವತೆ ನಾಮಗಿರಿ ತಾಯಾರ್ ನೆಲಸಿರುವ ಕಾರಣದಿಂದ ಇದಕ್ಕೆ 'ನಾಮಕ್ಕಲ್' ಎಂಬ ಹೆಸರು ಪ್ರಾಪ್ತವಾಗಿದೆ. ಎರಡು ರೂಪಗಳು ಬೆರೆತು ಇಲ್ಲವೆ ಒಂದರೊಡನೊಂದು ಹೊಂದಿಕೊಂಡು ಈ ಸ್ಥಳನಾಮವು ಸಿದ್ಧವಾಗಿರ ಬೇಕೆಂದೂ ಆಲೋಚಿಸಬಹುದು.

ನಗರದ ಮಧ್ಯಭಾಗದಲ್ಲಿರುವ ಗುಟ್ಟವು ದೊಡ್ಡ ಊರನ್ನು 'ಪೇಟೆ' 'ಕೋಟೆ' ಎಂದು ಎರಡಾಗಿ ವಿಭಜಿಸಿದೆ. ಬೆಟ್ಟದ ಮೇಲ್ಭಾಗದ ಪ್ರದೇಶವನ್ನು ಕೋಟೆಯೆಂದು ಕರೆ ಯುತ್ತಾರೆ. ನಾಮಕ್ಕಲ್‌ನ ಪ್ರಖ್ಯಾತ ಆಂಜನೇಯ ದೇವಸ್ಥಾನವನ್ನು ಕೋಟೆಯ ಪ್ರದೇಶ ದಲ್ಲಿ ದರ್ಶಿಸಬಹುದಾಗಿದೆ. ಈ ಮೂರ್ತಿಯು ಮೂರಾಳು ಎತ್ತರವಾಗಿದ್ದು ಬಯಲುಪ್ರದೇಶ ದಲ್ಲಿ ಮಳೆ, ಗಾಳಿ, ಬಿಸಿಲುಗಳನ್ನು ತಡೆದುಕೊಂಡು ನಿಂತಿದ್ದಾನೆ. ನರಸಿಂಹ ದೇವರನ್ನು ವೀಕ್ಷಿಸುತ್ತಿರುವಂತೆ ಕಾಣುವ ಮೂರ್ತಿಯು ಗಂಭೀರ ಭಾವದಿಂದ ಕೈಮುಗಿದು ಕೊಂಡು ಸ್ಥಾನಕ ಭಂಗಿಯಲ್ಲಿದ್ದಾನೆ. ಇಲ್ಲಿಂದ ನೇರವಾಗಿ ಸುಮಾರು ನೂರು ಮೀಟರ್ ದೂರದಲ್ಲಿ ಸಾಲಿಗ್ರಾಮ ಬೆಟ್ಟದ ಗುಹೆಯಲ್ಲಿ ನರಸಿಂಹಸ್ವಾಮಿಯ ಸನ್ನಿಧಿಯಿದೆ.

## ಗುಹಾಲಯ

ನರಸಿಂಹ ದೇವಾಲಯವು ಪಟ್ಟಣದ ನಾಯಕಮಣಿಯಂತಿರುವ ಏಕಶಿಲೆಯಿಂದಾದ ಬೃಹದ್‌ಗುಡ್ಡದಲ್ಲಿ ಗುಹಾದೇವಾಲಯದಂತೆ ಶೋಭಿಸುತ್ತ ಪಶ್ಚಿಮಾಭಿಮುಖವಾಗಿ ನಿಂತಿದೆ. ಆಲಯದ ಹೊರಭಾಗದಲ್ಲಿ ಎಂದರೆ, ಮೊದಲನೆ ಪ್ರಾಕಾರದಲ್ಲಿ ವರಪ್ರಸಾದವನ್ನು ಕರುಣಿಸುವಂತೆ ಕಂಗೊಳಿಸುತ್ತಿರುವ ನಾಮಗಿರಿ ತಾಯಾರ್ ಅಮ್ಮನವರ ಸನ್ನಿಧಿಯಿದೆ. ಈಕೆ ಪೂರ್ವಾಭಿಮುಖವಾಗಿದ್ದಾಳೆ. ನಗರದ ಶಕ್ತಿಯುತವಾದ ದೇವಿಯಾಗಿ ಈಕೆಯನ್ನು ಆರಾಧಿಸುತ್ತಿದ್ದಾರೆ. ನಾಮಕ್ಕಲ್ ನಗರಕ್ಕೆ ಕಾವೇರಿ ಸೌಕರ್ಯವು ಲಭಿಸುವುದಕ್ಕೆ ಮುಂಚಿತವಾಗಿ

ಇಲ್ಲಿನ ಕಮಲಾಲಯದ ನೀರನ್ನು ಬಳಸಲಾಗುತ್ತಿತ್ತೆಂದು ಹೇಳುತ್ತಾರೆ. ನಾಮಗಿರಿ ಅಮ್ಮನವರು ಈ ಕಲ್ಯಾಣಿಯಲ್ಲಿ ಅವತರಿಸಿ ನರಸಿಂಹದೇವರನ್ನು ಕುರಿತು ತಪಸ್ಸು ಮಾಡಿ ಅನುಗ್ರಹ ಪಡೆಯುತ್ತಾರೆ. ಆದ ಕಾರಣದಿಂದ ಈ ಕಲ್ಯಾಣಿಗೆ ಕಮಲಾಲಯಂ ಎಂಬ ಹೆಸರು ಬಂದಿದೆ. ಇದಲ್ಲದೆ ಈ ಮಾತೆಯ ದರ್ಶನವನ್ನು ಮೊದಲು ಮಾಡಬೇಕೆಂಬ ಕಟ್ಟಳೆಯೂ ಇಲ್ಲಿದೆ. ಹೀಗಾಗಿ ಈಕೆಗೆ ಅಗ್ರಪೂಜೆ ಸಲ್ಲುತ್ತಿದೆ.

ಗುಡ್ಡದ ಹೊರಾವರಣದಲ್ಲಿರುವ ಮತ್ತೊಂದು ಆಲಯದಲ್ಲಿ ರಂಗನಾಥ ಸ್ವಾಮಿಯ ಸನ್ನಿಧಿಯಿದೆ. ಬೆಟ್ಟದ ಗುಹೆಯಲ್ಲಿ ನಿರ್ಮಾಣವಾಗಿರುವ ಗುಡಿಯಲ್ಲಿ ಅತಿಉಗ್ರವಾದ ಸರ್ಪದ ಮೇಲೆ ರಂಗನಾಥಸ್ವಾಮಿಯು ಪವಡಿಸಿರುತ್ತಾನೆ. ವಿಶೇಷ ಪ್ರತಿಮಾಲಕ್ಷಣದಿಂದ ಕೂಡಿದ ಮೂರ್ತಿಯು ನೋಡುವವರ ಮನಸೆಳೆಯುವಂತಿದೆ. ಗುಹಾಪ್ರದೇಶದ ಎರಡು ಪಾರ್ಶ್ವಗಳಲ್ಲಿ ಶಂಕರನಾರಾಯಣ ಮತ್ತು ವಾಮನ ಮೂರ್ತಿಗಳನ್ನು ಅದ್ಭುತವಾದ ರೀತಿಯಲ್ಲಿ ಕೆತ್ತನೆ ಮಾಡಿರುತ್ತಾರೆ. ರಂಗನಾಯಕಿ ಅಮ್ಮನವರ ದೇವಾಲಯವು ಹೊರಾವರಣದಲ್ಲಿದೆ. ನಾಮಕ್ಕಲ್ ನರಸಿಂಹಸ್ವಾಮಿಯ ಕೀರ್ತಿಪ್ರತಿಷ್ಠೆಗಳಿಗೆ ಪೂರಕವಾದ ರೀತಿಯಲ್ಲಿ ಇವುಗಳನ್ನು ಗಮನಿಸಬಹುದಾಗಿದೆ.

ನರಸಿಂಹ ದೇವಾಲಯವೇ ಈ ವಿಶಾಲ ಗುಟ್ಟದ ಕೇಂದ್ರ ಬಿಂದುವಾಗಿ ಕಂಗೊಳಿಸುತ್ತಿರುವುದು. ಇದನ್ನು ಬೆಟ್ಟದ ಮೇಲ್ಭಾಗದಲ್ಲಿನ ಗುಹೆಯಲ್ಲಿ ನಿರ್ಮಿಸಿದ್ದಾರೆ. ಎತ್ತರವಾದ ಜಗಲಿಯ ಮೇಲೆ ಸ್ವಾಮಿಯನ್ನು ಪ್ರತಿಷ್ಠೆ ಮಾಡಿರುತ್ತಾರೆ. ನರಸಿಂಹ ದೇವನು ಪಶ್ಚಿಮಾಭಿಮುಖನಾಗಿ ವೀರಾಸನದಲ್ಲಿ- ಬಲಗಾಲನ್ನು ನೆಲದ ಮೇಲೂರಿ ಎಡಗಾಲನ್ನು ಮಡಚಿ-ಕುಳಿತಿರುತ್ತಾನೆ. ಎಡಭಾಗದ ಕಿವಿಯ ಸಮೀಪ ಸನಕ ಮುನಿಯನ್ನೂ, ಬಲಭಾಗದ ಕಿವಿಯ ಹತ್ತಿರ ಸನಂದ ಮುನಿಯನ್ನೂ ನಿಂತಿರುವಂತೆ ಬಿಡಿಸಲಾಗಿರುತ್ತದೆ. ಈ ರೀತಿಯ ನರಸಿಂಹ ಪ್ರತಿಮೆ ಅಪರೂಪವಾದದ್ದೆಂದು ಹೇಳಬಹುದು. ಇವರು ನಿಂತಿರುವ ಭಂಗಿಯನ್ನು ನೋಡಿದರೆ ಭಗವಂತನ ಕಿವಿಯಲ್ಲಿ ಪ್ರಪಂಚದ ನಡವಳಿಕೆಗಳನ್ನು ಉಸುರುತ್ತಿರುವಂತೆ ತೋರುತ್ತದೆ. ಇವರಿಬ್ಬರೂ ಬ್ರಹ್ಮಮಾನಸ ಪುತ್ರರೆಂಬುದು ಈ ಸಂದರ್ಭದಲ್ಲಿ ನೆನಪಿನ ಸಂಗತಿಯಾಗಿದೆ.

## ತ್ರಿಮೂರ್ತಿಗಳ ಸಂಗಮ

ನರಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿದ ಸಂದರ್ಭದಲ್ಲಿ ಆತನ ಉಗ್ರಕೋಪವು ಶಮನವಾಗದೆ ವ್ಯಗ್ರವಾದ ಭಾವನೆಯಿಂದ ಕುಳಿತಿರುವ ಹಾಗೆ ಇಲ್ಲಿನ ಮೂರ್ತಿಯು ಕಂಡು ಬರುತ್ತಿದ್ದಾನೆ. ಸಾಕ್ಷಾತ್ ಸೂರ್ಯನಾರಾಯಣನೂ, ಮತ್ತೊಂದು ಪಕ್ಕದಲ್ಲಿ ಚಂದ್ರನೂ ಈ ಸ್ವಾಮಿಗೆ ಗಾಳಿಬೀಸುತ್ತಿರುವಂತೆ ಕಂಡುಬರುತ್ತದೆ. ಎಡಭಾಗದಲ್ಲಿ ಮಹೇಶ್ವರನೂ, ಬಲಭಾಗದಲ್ಲಿ ಬ್ರಹ್ಮದೇವನು ಸನ್ನಿಹಿತವಾಗಿದ್ದು ಸ್ವಾಮಿಯು ತನ್ನ ರೋಷವನ್ನು ನಿವಾರಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತಿದ್ದಾರೆ.

ನರಸಿಂಹನು ಸಾಕ್ಷಾತ್ ವಿಷ್ಣುವಿನ ಅವತಾರವೇ ಆದಕಾರಣ ಈ ಸ್ಥಳವನ್ನು ತ್ರಿಮೂರ್ತಿಗಳು ಸನ್ನಿಹಿತರಾಗಿರುವ ಸ್ಥಳವೆಂದು ಹೇಳುತ್ತಾರೆ. ನರಸಿಂಹನು ಮಹಾಲಕ್ಷ್ಮಿಯ ತಪಸ್ಸಿನ ಪ್ರಭಾವದಿಂದ ಪ್ರಸನ್ನವದನನಾಗಿ ಭಕ್ತರ ಅಭೀಷ್ಟಗಳನ್ನು ಹೋಗಲಾಡಿಸುವ ಸಲುವಾಗಿ ಲಕ್ಷ್ಮೀನರಸಿಂಹನಾಗಿ ಇಲ್ಲಿ ನೆಲೆಸಿರುವನೆಂದು ಹೇಳಬಹುದಾಗಿದೆ.

ಅಭಯ ಸ್ವರೂಪನಾದ ನರಸಿಂಹನ ಬಲಗಡೆಯ ಹಸ್ತದ ಮಧ್ಯಭಾಗದಲ್ಲಿ ಕೆಂಪಾದ ಕಲೆಯಿದೆ. ಇದನ್ನು ಹಿರಣ್ಯಾಕ್ಷನನ್ನು ಸಂಹಾರಮಾಡಿದ ರಕ್ತದ ಕಲೆಯೆಂದು ನಂಬಿಕೊಂಡು ಬರಲಾಗುತ್ತಿದೆ. ನಖಗಳು ಸಹ ಹರಿತವಾಗಿರುವಂತೆ ಕಾಣುತ್ತವೆ. ಮೊದಲಿಗೆ ಅರ್ಧಮಂಟಪ ವಾಗಿದ್ದ ಗರ್ಭಗುಡಿಯನ್ನು ಕಾಲಾನಂತರದಲ್ಲಿ ಮಾರ್ಪಾಡು ಮಾಡಿರ ಬಹುದು. ಈ ಗುಹಾಂತರ ದೇವಾಲಯವನ್ನು ಏಳನೇ ಶತಮಾನದಲ್ಲಿ ಕೊಂಗನಾಡ ಅಧಿಪತಿಯಾದ ಗುಣಶೀಲನ್ ಎಂಬುವನು ಕಟ್ಟಿಸಿದಂತೆ ಇತಿಹಾಸದ ಆಧಾರಗಳು ತಿಳಿ ಸುತ್ತಿವೆ. ಇಲ್ಲಿನ ಇತರ ವಿವರಗಳನ್ನು ಸಹ ಗಮನಿಸುವುದು ಸೂಕ್ತವಾದ ವಿಚಾರವಾಗಿದೆ.

## ವಿದಾರಣ ನರಸಿಂಹ

ಅರ್ಧಮಂಟಪದಂತೆ ಕಾಣುವ ಈ ಗುಹಾದೇವಾಲಯದ ಗರ್ಭಗುಡಿಯಲ್ಲಿ ಪ್ರಧಾನದೇವತೆಯ ಎರಡು ಬದಿಗಳಲ್ಲಿ ವೈಕುಂಠನಾಥ, ಹಿರಣ್ಯಸಂಹಾರಕ ಸ್ಥಾನಕ ನರಸಿಂಹ, ವಾಮನ-ವರಾಹರ ಕೆತ್ತನೆಗಳಿವೆ. ಅದ್ಭುತ ಶಿಲಾಫಲಕಗಳ ಹಾಗೆ ಎದ್ದು ಕಾಣುವ ಇದನ್ನು ಸುಂದರವಾಗಿ ಕೆತ್ತಲಾಗಿದೆ. ಈ ಎಲ್ಲ ಶಿಲ್ಪಗಳನ್ನು ಸಂರಕ್ಷಿಸಿಡಲಾಗಿದೆ.

ಲಕ್ಷ್ಮೀನರಸಿಂಹ ದೇವನ ಬಲಭಾಗದ ಗೋಡೆಯಲ್ಲಿರುವ, ಕಂಭವನ್ನು ಸೀಳಿಕೊಂಡು ಆವೇಶ ಭರಿತನಾಗಿ ಪ್ರತ್ಯಕ್ಷನಾದಂತೆ ಕಾಣುವ, ಹಿರಣ್ಯಕಶಿಪುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಎರಡು ಕೈಗಳಿಂದ ಅವನ ಎದೆಯನ್ನು ಸೀಳುವ ಕಾರ್ಯದಲ್ಲಿ ಪ್ರವೃತ್ತನಾಗಿರುವ ಉಗ್ರನರಸಿಂಹನ ಮೂರ್ತಿಶಿಲ್ಪವು ತೀವ್ರವಾದ ಕ್ರೂರಸ್ವಭಾವವನ್ನು ಪ್ರದರ್ಶಿಸುವಂತಿದೆ. ಷಡ್ಭುಜನಾದ ಸ್ವಾಮಿಯ ಉಳಿದ ನಾಲ್ಕು ಕೈಗಳಲ್ಲಿ ಪ್ರಮುಖವಾದ ಆಯುಧಗಳು ಹೊಳೆಯುತ್ತಿದೆ. ಇಂತಹ ಕ್ರೂರವಾದ ವರ್ತನೆಗೆ ಕಾರಣವೇನೆಂದು ಊಹಿಸುವುದಾದರೆ ದಾಸರವಾಣಿಯಲ್ಲಿ ಹೇಳಿರುವ ಹಾಗೆ ಆ ಉದರದಲ್ಲಿ ತನ್ನ ಭಕ್ತಮಣಿಯಂತಹ ರತ್ನಗಳು ಎಷ್ಟು ಹುದುಗಿವೆಯೋ ಎಂಬುದನ್ನು ಪರೀಕ್ಷಿಸುವುದೇ ಆಗಿದೆ.

ನರಸಿಂಹಸ್ವಾಮಿಯ ಪಕ್ಕದಲ್ಲಿ ಪ್ರಹ್ಲಾದನು ಭಗವಂತನಿಗೆ ಕೈಜೋಡಿಸಿ ಸ್ವಲ್ಪವೂ ಅಂಜದ ಹಾಗೆ ನಿಂತ ರೀತಿಯು ಆತನ ಉತ್ತಮಿಕೆಯ ಪ್ರಕಟನವೆಂದು ಹೇಳಬಹುದು. ಪಲ್ಲವ ಶಿಲ್ಪಗಳಿಗೆ ಉನ್ನತ ಮಾದರಿಯಾಗಿರುವ ಈ ಶಿಲ್ಪವು ಎಲ್ಲರ ಗಮನವನ್ನು ಸೆಳೆಯುವಂತಿದೆ. ನಾಮಕ್ಕಲ್‌ನ 'ನರಸಿಂಹಶಿಲ್ಪ'ವು 'ನರಸಿಂಹಶಿಲ್ಪವಿಕಾಸ'ದ ಅಧ್ಯಯನಕ್ಕೆ ಉನ್ನತ ನಿದರ್ಶನವಾಗಿದೆಯೆಂದು ಹೇಳಲಡ್ಡಿಯಿಲ್ಲ.



ಯೋಗಾನರಸಿಂಹ ಸ್ವಾಮಿ, ನುಗ್ಗೇಹಳ್ಳಿ.



ಯೋಗಾ ನರಸಿಂಹ, ಗೊರೂರು



ನರಸಿಂಹಸ್ವಾಮಿ, ತೊರವೆ



ನರಸಿಂಹ ಸ್ವಾಮಿ ಮುಖವಾಡ, ಕನಕಗಿರಿ



ಲೇಖಕ, ಪ್ರಕಾಶಕ, ಛಾಯಾಗ್ರಾಹಕ, ನುಗ್ಗೇಹಳ್ಳಿ ದೇವಸ್ಥಾನ

# ಶೋಲಿಂಗೂರು

ಶೋಲಿಂಗೂರನ್ನು 'ಘಟಿಕಾಚಲ' ವೆಂಬ ಹೆಸರಿನಿಂದಲೂ ಕರೆಯುತ್ತಾರೆ. ಇಲ್ಲಿ ಲಕ್ಷ್ಮೀನರಸಿಂಹಸ್ವಾಮಿಯ ದೇವಾಲಯವಿದ್ದು ತುಂಬ ಪವಿತ್ರವಾದ ಸ್ಥಳವಾಗಿದೆ. ತಮಿಳು ನಾಡಿಗೆ ಸೇರಿರುವ ಈ ಪುಣ್ಯಕ್ಷೇತ್ರವು ಚೋಳ-ಪಲ್ಲವರ ಕಾಲದಿಂದ ಪ್ರಸಿದ್ಧವಾಗಿದೆ. ವೆಲ್ಲೂರು ಜಿಲ್ಲೆಯ ವಲಜಾ ತಾಲೂಕಿಗೆ ಸೇರಿದ ಶೋಲಿಂಗೂರಿಗೆ ಚಿತ್ತೂರು-ತೀರ್ಥವಿ ಹೆದ್ದಾರಿ ಮೂಲಕ ಸೇರಬಹುದು. ಅರಕೋಣಂ ರೈಲು ನಿಲ್ದಾಣಕ್ಕೆ ಇದು ಸಮೀಪವಾಗಿದೆ.

ಚೋಳನರಸಿಂಹಪುರಮ್ ಎಂಬುದಾಗಿ ಶೋಲಿಂಗೂರನ್ನು ಕರೆಯುತ್ತಾರೆ. ಲಕ್ಷ್ಮೀ ನರಸಿಂಹದೇವಾಲಯವು ದೊಡ್ಡಬೆಟ್ಟದ ಮೇಲಿರುತ್ತದೆ. ಸುಮಾರು ಎಂಟು ನೂರು ಮೆಟ್ಟಿಲುಗಳನ್ನೇರಿ ದರ್ಶನಕ್ಕೆ ಹೋಗಬೇಕು. ಇಲ್ಲಿರುವ ಯೋಗಾನರಸಿಂಹನನ್ನು ಭಕ್ತೋಚಿತ ಪರಮಲ್ ಎಂದು ಕರೆಯುತ್ತಾರೆ. ಈ ದೇವಾಲಯವು ಚೋಳರ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಭಾರತದ ಇಪ್ಪತ್ತೆರಡು ತೀರ್ಥಕ್ಷೇತ್ರಗಳಲ್ಲಿ ಘಟಿಕಾಚಲವೂ ಸೇರಿದೆ.

## ಯೋಗಮೂರ್ತಿ

ಇಲ್ಲಿನ ವೈಶಿಷ್ಟ್ಯವೇನೆಂದರೆ ಈ ಸ್ಥಳದ ಬೆಟ್ಟವು ಬಂಗಾರದಂತೆ ಹೊಳೆಯುವು ದಾಗಿದೆ. ಆದ್ದರಿಂದ ಇದನ್ನು 'ಅರ್ಕಶಿಲಾ ಪರ್ವತ'ವೆಂದು ಕರೆದಿದ್ದಾರೆ. ಸಪ್ತರ್ಷಿಗಳ, ವಾಯುದೇವರ ಪ್ರಾರ್ಥನೆಯ ಮೇರೆಗೆ ಯೋಗಾ ನರಸಿಂಹ ಸ್ವಾಮಿಯು ವೈಶಾಖ ಮಾಸದ ಹುಣ್ಣಿಮೆ ಸ್ವಾತಿ ನಕ್ಷತ್ರದಲ್ಲಿ ಶುಕ್ರವಾರದ ದಿವಸ ಸೂರ್ಯಾಸ್ತ ಸಮಯಕ್ಕೆ ತನ್ನ ಭಕ್ತರಿಗೆ ದರ್ಶನ ನೀಡುವನೆಂಬ ಪ್ರತೀತಿಯಿದೆ.

ಕರಿಕಾಲ ಚೋಳನು ತನ್ನ ರಾಜ್ಯವನ್ನು ವಿಸ್ತರಿಸಿ ನಲವತ್ತೆಂಟು ಭಾಗಗಳನ್ನಾಗಿ ಮಾಡಿ ಪ್ರತಿಯೊಂದರಲ್ಲೂ ಯೋಗಾ ನರಸಿಂಹನನ್ನು ಪ್ರತಿಷ್ಠೆ ಮಾಡಿ ಘಟಿಕಾಚಲಗಳನ್ನು ನಿರ್ಮಿಸುತ್ತಾನೆ. ಪಲ್ಲವರ ಕಾಲದಲ್ಲಿ ಈ ಘಟಿಕಾಚಲದ ಸನಿಹದಲ್ಲಿ ಒಂದು ವಿಶ್ವವಿದ್ಯಾ ನಿಲಯವು ಸ್ಥಾಪನೆಯಾಗಿತ್ತು, ಇದೂ ಅಲ್ಲದೆ ಪಲ್ಲವರ ಕಾಲದಲ್ಲಿ ಯೋಗಾನರಸಿಂಹ ಮೂರ್ತಿಯೊಂದಿಗೆ ಶಿವನನ್ನು ಸೇರಿಸಿ ಶಿವಕೇಶವ ಮಂದಿರವನ್ನು ನಿರ್ಮಿಸಿದ ಕಾರಣ ಈ ಕ್ಷೇತ್ರಕ್ಕೆ 'ಚೋಳಲಿಂಗಪುರ'ವೆಂಬ ಹೆಸರು ಬಂದಿರಬಹುದೆಂದು ಕಾಲ್ಪನಿಕ ಸಂಗತಿ ಮಾದೀತು.

ಭಕ್ತರ ಅಭೀಷ್ಟಗಳನ್ನು ಪೂರೈಸುತ್ತ ಇಂದಿಗೂ ಸಹ ಯೋಗಾನರಸಿಂಹ ಸ್ವಾಮಿಯು ಶೋಲಿಂಗೂರು ಬೆಟ್ಟದಲ್ಲಿ ನೆಲೆಸಿರುತ್ತಾನೆ. ಇಲ್ಲಿಗೆ ಸಮೀಪದ ಬೆಟ್ಟದಲ್ಲಿನ ಆಂಜನೇಯನ ಕಯ್ಯಲ್ಲಿ ಪ್ರಯೋಗಚಕ್ರವಿರುವುದು ಕಂಡುಬರುತ್ತದೆ. ಇದೊಂದು ಅಪರೂಪದ ಶಿಲ್ಪವೆಂದು ಹೇಳಬಹುದು. ಈ ಮೂರ್ತಿಯ ಕಾರಣದಿಂದ ಘಟಿಕಾಚಲದ ಮಹತ್ವವು ಹೆಚ್ಚಾಗಿರುವು ದರಲ್ಲಿ ಅತಿಶಯವಿಲ್ಲ.

# ಶ್ರೀರಂಗಂ

ಚೋಳನಾಡು ತಿರುಪತಿಗಳಲ್ಲಿ ಪ್ರಧಾನವಾದ ನಲವತ್ತು ಕ್ಷೇತ್ರಗಳಿಗೆ ಸೇರಿದೆ ಶ್ರೀರಂಗ. ಇಲ್ಲಿನ ದೇವಸ್ಥಾನಕ್ಕೆ ಕೋಯಿಲ್ ಎಂಬ ನಾಮಧೇಯವಿದೆ. ಸಪ್ತಪ್ರಾಕಾರಗಳಿಂದ ಕೂಡಿದೆ. ದೇವಸ್ಥಾನ ಇಡೀ ಊರಾಗಿದೆ. ಈ ದೇವಾಲಯವು ಟ್ರಿಚಿ-ವಿಲ್ಲಿಪುರಂ ಕಾರ್ಡ್ ಲೈನಿನಲ್ಲಿ ದಕ್ಷಿಣ ರೈಲ್ವೆ ಮೀಟರ್‌ಗೇಜ್ ಶ್ರೀರಂಗದ ನಿಲ್ದಾಣದಿಂದ ಅರ್ಧಮೈಲಿ ದೂರದಲ್ಲಿದೆ. ಎಲ್ಲವಿಧವಾದ ವಾಹನ ಸೌಕರ್ಯಗಳೂ ಇವೆ. ಊರು ಕಾವೇರಿಯ ಎರಡು ಶಾಖೆಗಳಾದ ಕೊಲ್ಲಿಡಂ-ಕಾವೇರಿ ಎಂಬ ಎರಡು ನದಿಗಳ ಮಧ್ಯದ ದ್ವೀಪವಾಗಿದೆ. ದೊಡ್ಡ ನಗರವೂ, ಯಾತ್ರಾಸ್ಥಳ ಕೇಂದ್ರವೂ ಆಗಿರುವುದರಿಂದ ಛತ್ರ, ಹೋಟಲ್ ಮತ್ತು ಇತರ ವಸತಿ ಸೌಕರ್ಯಗಳಿವೆ. ಇಲ್ಲಿಂದ ಟ್ರಿಚ್ಚಿ ರೈಲ್ವೆಸ್ಟೇಷನ್ನಿಗೆ ಬಸ್ಸುಗಳು ಓಡಾಡುತ್ತವೆ. ಇಲ್ಲಿಗೂ ಟ್ರಿಚಿಗೂ ಮಧ್ಯೆ ಕಾವೇರಿ ನದಿಯ ಮೇಲೆ ದೊಡ್ಡ ಸೇತುವೆಯಿದೆ.

ಶ್ರೀರಂಗವು ಸ್ವಯಂವ್ಯಕ್ತ ಕ್ಷೇತ್ರ, ಶ್ರೀವೈಷ್ಣವರಿಗೆ ಪರಮಪೂಜ್ಯವಾದ ಸ್ಥಳ. ನೂರೆಂಟು ತಿರುಪತಿಗಳಲ್ಲಿ ಮೊದಲನೆಯದು. ಇಲ್ಲಿನ ಪ್ರಧಾನ ದೈವ ಶ್ರೀರಂಗನಾಥನಾದರೂ ಇತರ ಪ್ರಮುಖ ದೇವರಿಗೆ ಪ್ರತ್ಯೇಕ ಸನ್ನಿಧಿಯಿದೆ. ನರಸಿಂಹಸ್ವಾಮಿಗೂ ಸಹ ಪ್ರತ್ಯೇಕ ಸನ್ನಿಧಿಯಿದೆ. ಇಲ್ಲಿನ ದೇವರು ವಿಶಿಷ್ಟವಾಗಿದ್ದು ಆರಾಧಿಸಿದವರ ಆರಾಧ್ಯದೈವವಾಗಿದ್ದಾನೆ.

ಶ್ರೀರಂಗದಲ್ಲಿ ಪಾಂಚರಾತ್ರಾಗಮಾನುಸಾರ ಪೂಜೆ ನಡೆಯುತ್ತದೆ. ಈ ಸಂಪ್ರದಾಯವು ಭಗವತ್‌ಭಾಷ್ಯಕಾರರಿಂದ ಪ್ರಾರಂಭವಾಯಿತೆಂದು ಹೇಳುತ್ತಾರೆ. ಇಲ್ಲಿ ಎಲ್ಲ ಆಳ್ವಾರುಗಳಿಗೆ ಪ್ರತ್ಯೇಕ ಸನ್ನಿಧಿಯಿದೆ. ದೇಶಿಕರ 'ಪಾದುಕಾ ಸಹಸ್ರ'ವು ಇಲ್ಲಿಯ ಅಮ್ಮನವರ ಸನ್ನಿಧಿಯಲ್ಲಿ ಪ್ರಕಟವಾಯಿತು. ಅವರು ವಿಶಿಷ್ಟಾದ್ವೈತಕ್ಕೆ ಸಲ್ಲಿಸಿದ ವಿವಿಧ ಸೇವೆಗಳ ಸಂತೋಷಕ್ಕಾಗಿ ಶ್ರೀರಂಗನಾಥನು 'ಕವಿತಾರ್ಕಿಕ ಸಿಂಹ' ಎಂದು ಪ್ರಶಸ್ತಿಯನ್ನು ಅನುಗ್ರಹಿಸಿರುತ್ತಾನೆ. ಭೂವೈಕುಂಠವಾದ ಶೇಷಶಾಯಿಯಾದ ಶ್ರೀರಂಗನಾಥನ ಆವಾಸಸ್ಥಾನವಾಗಿರುವ ಶ್ರೀರಂಗದಲ್ಲಿಯೇ ಪ್ರಣವಾಕಾರದ ವಿಮಾನದಡಿಯಲ್ಲಿ ಶ್ರೀ ವೈಷ್ಣವರ ಎಲ್ಲ ಧಾರ್ಮಿಕ, ಸಾಹಿತ್ಯ ಅಧ್ಯಾತ್ಮಿಕ ಸಂಪ್ರದಾಯ ಆರಂಭವಾಯಿತೆಂದು ನಂಬಿಕೊಂಡು ಬಂದಿದ್ದಾರೆ.

ಶ್ರೀರಂಗದ ದೇವಸ್ಥಾನವನ್ನು ಪೆರಿಯಕೋಯಿಲ್, ಭೂಲೋಕವೈಕುಂಠ, ತಿರುವರಂಗ ತ್ತಿರುಪತಿ, ಭೋಗಮಂಟಪಂ ಎಂಬ ಬೇರೆಬೇರೆ ಹೆಸರುಗಳಿಂದ ಕರೆಯುತ್ತಾರೆ. ಇಲ್ಲಿನ ಏಳು ಪ್ರಕಾರಗಳಲ್ಲಿ ನಾಲ್ಕು ದೇವಾಲಯದ ಭಾಗ, ಉಳಿದ ಮೂರರಲ್ಲಿ ಜನರು ವಾಸ ಮಾಡುತ್ತಾರೆ. ಶ್ರೀರಂಗದ ದೇವರ 'ನಡೆ' ತುಂಬ ವಿಶಿಷ್ಟವೆಂದು ಶ್ರೀವೈಷ್ಣವರು ಭಾವಿಸುತ್ತಾರೆ. ಹೀಗೆ ಶ್ರೀರಂಗದ ಮಹಿಮೆ ಕೊಂಡಾಡದವರಿಲ್ಲ. ಅಲ್ಲಿರುವ ನರಸಿಂಹಸ್ವಾಮಿಯನ್ನು ದರ್ಶಿಸದ ಭಕ್ತರಿಲ್ಲ. ಷೋಡಶ ಕೈಗಳಿಂದ ಮನೋಹರವಾಗಿ ಕಂಗೊಳಿಸುವ ಮೂರ್ತಿಯಲ್ಲಿ ವ್ಯಗ್ರತೆ-ಉಗ್ರತೆಗಳಿರುವುದಾದರೂ ಭಗವಂತನ ಭಕ್ತಿ ಪ್ರಸಾದಿಯ ಗುಣದಿಂದಾಗಿ ಆತನನ್ನು ಕಂಡವರಿಗೆ ಭಯಭೀತಿಗಳಿಗಿಂತಲೂ ಭಕ್ತಿ-ಅನುರಾಗಗಳುಂಟಾಗುವುದರಲ್ಲಿ ಅತಿಶಯವೇನಿಲ್ಲ.

# ವೇಳುಕ್ಕೈ-ಕಾಂಚೀಪುರಮ್

ತಮಿಳುನಾಡಿನ ದಿವ್ಯದೇಶಗಳಲ್ಲಿ ಒಂದಾಗಿರುವ ಕಾಂಚೀಪುರದಲ್ಲಿನ ದೀಪಪ್ರಕಾಶ ದೇವಾಲಯಕ್ಕೆ ಸಮೀಪದಲ್ಲಿ 'ಅಳಗಿಯ ಸಿಂಗರ' ದೇವಾಲಯವಿದೆ. ಇದು ಪುರಾತನ ದೇವಾಲಯವಾಗಿದೆ. ಇದಕ್ಕೆ ರಾಜಗೋಪುರವೂ ಇಲ್ಲ. ಈ ಆಲಯದಲ್ಲಿ ಮೂರು ಸನ್ನಿಧಿಗಳಿವೆ. ಒಂದು ಪರಮಾತ್ಮನದು. ಮತ್ತೊಂದು ಕಾಯಾರ್ ಅಮೃತವಲ್ಲಿಯ ಸನ್ನಿಧಿ. ಬೇರೊಂದು ಗರುಡರಿಗೆ ಸೇರಿದ್ದು.

ವೇಳುಕ್ಕೈ ಎಂದರೆ ಭಗವಂತನು ಎಲ್ಲಿ ಸಂತೋಷ, ಸಂತೃಪ್ತಿಗಳಿಂದ ನೆಲೆಸಿರುವನೋ ಅದಕ್ಕಿರುವ ಹೆಸರೆಂದು ಹೇಳಬಹುದು. 'ವೇಳ್ ಇರುಕ್ಕೈ' ಎಂಬುದು ಕ್ರಮೇಣ 'ವೇಳುಕ್ಕೈ' ಎಂದಾಗಿದೆ. ಇಲ್ಲಿನ ವಿಷ್ಣು ಸ್ವರೂಪಿಯಾದ ಭಗವಂತನನ್ನು ಮುಕುಂದ ನಾಯಕನೆಂದು ಕರೆಯುವರು. ಆದರೆ ಇಲ್ಲಿರುವುದು ನರಸಿಂಹಸ್ವಾಮಿ.

ಭೃಗು ಮಹರ್ಷಿಗಳಿಗೆ ಸ್ಥಾನಿಕ ರೂಪದಲ್ಲಿ ಇಲ್ಲಿ ಪ್ರತ್ಯಕ್ಷನಾದ ಸ್ವಾಮಿಯು ಈಗ ಆಸೀನ ರೂಪದಲ್ಲಿದ್ದಾನೆ. ಯೋಗಾರೂಪ ಧರಿಸಿ ಇತರರಿಗೆ ಯೋಗಮಾರ್ಗವನ್ನು ಉಪದೇಶಿಸುವಂತಿದ್ದು ಪಶ್ಚಿಮಾಭಿಮುಖನಾಗಿರುತ್ತಾನೆ. ಮುಂಭಾಗದಲ್ಲಿ ಯೋಗಾನರಸಿಂಹ ನನ್ನು ಮತ್ತು ಹಿಂಭಾಗದಲ್ಲಿ ಸುದರ್ಶನ ರೂಪವನ್ನು ಕಾಣುವುದು ಇಲ್ಲಿನ ವೈಶಿಷ್ಟ್ಯವೆಂದು ಹೇಳುವರು.

ಪೆರಿಯಾಳರ್‌ರವರು, ತಿರುಮಂಗೈ ಆಳ್ವಾರರು, ವೇದಾಂತ ದೇಶಿಕರು ವೇಳುಕ್ಕೈನಲ್ಲಿ ಇರುವ ನರಸಿಂಹಸ್ವಾಮಿಯನ್ನು ಸ್ತುತಿಸಿದ್ದಾರೆ. ಶಿವ, ವಿಷ್ಣುಗಳ ರೂಪ ಆರಾಧನೆಗಳ ಸಂಗಮದಂತೆ ಕಂಡುಬರುತ್ತಿರುವ, ಧಾರ್ಮಿಕ ತೇಜಸ್ಸಿನಿಂದ ಕಂಗೊಳಿಸುತ್ತಿರುವ ವೇಗವತಿಯ ದಡದಲ್ಲಿರುವ ಕಂಚಿಕ್ಷೇತ್ರವು ನರಸಿಂಹ ಆರಾಧನೆಗೂ ಪ್ರಖ್ಯಾತವಾಗಿರುವುದನ್ನು ಈ ಮೂಲಕವಾಗಿ ನಾವು ತಿಳಿಯಬಹುದು.

# ಅಣಮಲೈ

ತಮಿಳುನಾಡಿನಲ್ಲಿ ಅಷ್ಟೇಕೆ ದಕ್ಷಿಣ ಭಾರತದಲ್ಲಿಯೇ ಪ್ರಸಿದ್ಧವಾಗಿರುವ ಮಧುರೆಗೆ ಸಮೀಪದಲ್ಲಿ ಎಂದರೆ ಸುಮಾರು ಹದಿನೈದು ಕಿಲೋಮೀಟರ್ ದೂರದಲ್ಲಿ ಒಂದು ಬೆಟ್ಟವಿದೆ. ಇದು ತನ್ನ ಮುಂಡವನ್ನು ಹಿಗ್ಗಿಸಿಕೊಂಡು ಕುಳಿತ ಆನೆಯ ಆಕಾರವನ್ನು ಹೋಲುತ್ತದೆ. ತಿರುವಿಳೈಯಾಡ್ಲೈ ಪುರಾಣದ ಕತೆಯಂತೆ ಮಧುರೆಯನ್ನು ನಾಶಪಡಿಸಲು ಬಂದ ಆನೆಯೊಂದನ್ನು ಶಿವನು ತನ್ನ ಬಾಣವೊಂದರಿಂದ ಮರ್ದನ ಮಾಡಿದ ಕಾರಣ ಅದೇ ಈ ಬೆಟ್ಟದ ಆಕಾರವನ್ನು ಧರಿಸಿತೆಂದು ಬಣ್ಣಿಸಲಾಗಿದೆ.

'ಅಣಮಲೈ'ನಲ್ಲಿ ನರಸಿಂಹನಿಗೆ ಅಂಕಿತಗೊಳಿಸಲಾಗಿರುವ ಗುಹಾಲಯವಿದೆ. ಇಲ್ಲಿನ ಗುಹೆಯೇ ಶಿಲ್ಪದ ಆಕಾರವನ್ನು ಧರಿಸಿದಂತಿರುವುದು ಸೋಜಿಗವೇಸರಿ. ಇದನ್ನು ಮಧುರಕವಿಯೆಂಬುವನು- ಈತ ನೆಡುಂಜುಡೈಯನ್ ಜಟಿಲ ಪರಾಂತಕನ ಮುಖ್ಯಮಂತ್ರಿಯಾಗಿದ್ದ- ನಿರ್ಮಿಸಿದನೆಂದು ಹೇಳುತ್ತಾರೆ. ಎರಡು ದೊಡ್ಡಗಾತ್ರದ ಕಂಬಗಳು ಇಲ್ಲಿನ ಆಲಯವನ್ನು ಎತ್ತಿಹಿಡಿದಿದೆ.

ಇಂತಹ ಗುಹಾಲಯದಲ್ಲಿ ಸಂಸ್ಕೃತ ಮತ್ತು ತಮಿಳು ಭಾಷೆಗಳ ಶಾಸನವನ್ನು ಗ್ರಂಥ ಮತ್ತು ವಟ್ರೆಳುತ್ತ ಲಿಪಿಯಲ್ಲಿ ಕೊರೆಯಲಾಗಿದೆ. ಅಣಮಲೈನ ಈ ಗುಹಾಲಯವು ನಮಗೆ ಆಂಧ್ರಪ್ರದೇಶದ ಉಂಡುವಲ್ಲಿ, ಕರ್ನಾಟಕದ ಬಾದಾಮಿ, ಮಹಾರಾಷ್ಟ್ರದ ಎಲ್ಲೋರ ದೇವಾಲಯಗಳನ್ನು ನೆನಪಿಗೆ ತರುವುದಾದರೆ ಆಶ್ಚರ್ಯವೇನಿಲ್ಲ.

# ಕೇರಳದ ನೃಸಿಂಹ ಕ್ಷೇತ್ರಗಳು

## ಮಂಜೇಶ್ವರ

ರೇಣುಕಾ ಮತ್ತು ಜಮದಗ್ನಿಯರ ಪುತ್ರ ಪರಶುರಾಮನ ಸೃಷ್ಟಿಯೆಂದು ಹೇಳಲಾದ ಕೇರಳ ರಾಜ್ಯದ ಕಣ್ಣಾನೂರು ಜಿಲ್ಲೆಯ ಕಾಸರಗೋಡು ತಾಲೂಕಿನಲ್ಲಿರುವ ಊರು ಮಂಜೇಶ್ವರ.

ಇಲ್ಲಿರುವ ಶ್ರೀ ಅನಂತ ಶೈಲ ದೇವಾಲಯವು ಶ್ರೀಮಧ್ವ ಮತಾನುಯಾಯಿಗಳಾದ ಗೌಡ ಸಾರಸ್ವತರದು. ಭದ್ರ ನರಸಿಂಹಸ್ವಾಮಿಯು ಇಲ್ಲಿನ ಪ್ರಧಾನವಾದ ದೇವರು. ಶಿವಲಿಂಗದಲ್ಲಿ ವಿಷ್ಣುವಿನ ಸನ್ನಿಧಾನವನ್ನು ನಂಬಿ ಆರಾಧಿಸಿಕೊಂಡು ಬರುತ್ತಿರುವ ಒಂದು ಶುದ್ಧ ವೈಷ್ಣವ ಕ್ಷೇತ್ರವಾಗಿ ಮಂಜೇಶ್ವರವನ್ನು ಗುರುತಿಸಬಹುದಾಗಿದೆ.

ನರಸಿಂಹಸ್ವಾಮಿಯ ಸಿಂಹಾಸನದ ಹಿಂದೆ ಇಡೀ ಗರ್ಭ ಗುಡಿಯನ್ನು ಆವರಿಸಿರುವ ಒಂದು ದೊಡ್ಡ ಹುತ್ತವಿದೆ. ವೈಶಾಖ ಶುಕ್ಲದಲ್ಲಿ ಐದು ದಿನ ನರಸಿಂಹಸ್ವಾಮಿಯ ಉತ್ಸವವು ಜರುಗುವುದು. ಹೇರಳವಾದ ಸಂಪತ್ತು ಇಲ್ಲಿ ತುಂಬಿ ತುಳುಕುತ್ತಿದೆ. ಈ ಕ್ಷೇತ್ರವು ಅನೇಕ ಸಲ ಲೂಟಿಗಳಿಗೆ ಒಳಗಾಗಿದ್ದರೂ ಮತ್ತೆ ಜೀರ್ಣೋದ್ಧಾರ ಆಗಿದೆ.

ಇಲ್ಲಿ ಸುಮಾರು ಒಂದು ನೂರಾ ನಲವತ್ತು ವರುಷಗಳ ಹಿಂದೆ ನಿರ್ಮಿತವಾದ ಬ್ರಹ್ಮರಥವಿದೆ. ಇದರ ಎತ್ತರ ಎಪ್ಪತ್ತೊಂದು ಅಡಿಗಳಷ್ಟಿದೆ. ದೇವಸ್ಥಾನದ ಹೊರಗೆ ಜೋಗಿ ದೈವದ ಕಲ್ಲು ಎಂಬುದಿದ್ದು ಇಲ್ಲಿ ಭೂತ-ಪ್ರೇತಗಳನ್ನು ಬಿಡಿಸುತ್ತಾರೆ ಎಂಬ ಪ್ರತೀತಿಯನ್ನು ಹೊಂದಿದೆ.

# ಮಹಾರಾಷ್ಟ್ರದ ನರಸಿಂಹಾಲಯಗಳು

## ಧೂಮಾ

ಮಹಾರಾಷ್ಟ್ರದ ಸತಾರಾ ಜಿಲ್ಲೆಗೆ ಸೇರಿರುವ ಧೂಮಾ ಕ್ಷೇತ್ರವು ಸತಾರಕ್ಕೆ ಸುಮಾರು ಐವತ್ತು ಕಿಲೋಮೀಟರ್ ದೂರದಲ್ಲಿದೆ. ಈ ಕ್ಷೇತ್ರವು ವಾಯಿ ಎಂಬಲ್ಲಿಗೆ ಹತ್ತು ಕಿಲೋಮೀಟರ್ ಸಮೀಪವಾಗಿದೆ. ಸಹ್ಯಾದ್ರಿಯ ಅಂಚಿನಲ್ಲಿರುವ ಇಲ್ಲಿ ಎರಡು ನರಸಿಂಹ ದೇವರ ಸನ್ನಿಧಾನಗಳಿವೆ. ಮಹಾದ್ವಾರಕ್ಕೆ ಎದುರಾಗಿ ಇರುವುದು ಉಗ್ರನರಸಿಂಹ ನಾದರೆ, ಅದರ ಹಿಂದುಗಡೆಗೆ ಲಕ್ಷ್ಮೀನರಸಿಂಹಸ್ವಾಮಿ. ಈ ಸ್ವಾಮಿಗೆ ಸಹ್ಯಾದ್ರಿಯ ಶ್ರೀ ಲಕ್ಷ್ಮೀನರಸಿಂಹನೆಂಬ ಹೆಸರೂ ಇದೆ.

ದೇವಸ್ಥಾನಕ್ಕೆ ಹೊಂದಿಕೊಂಡಂತಿರುವ ಬೆಟ್ಟಕ್ಕೆ ಪಾಂಡವ ಗಢವೆಂಬ ಹೆಸರಿದ್ದು ಇಲ್ಲಿಂದ ಕೃಷ್ಣಾನದಿಯು ಹರಿದು ಬರುತ್ತದೆ. ಇಲ್ಲಿನ ಪ್ರಾಕೃತಿಕ ಸೌಂದರ್ಯವು ವರ್ಣನೆಗೆ ಹೊರತಾದದ್ದು. ಈ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ನಿರ್ಮಿಸಲಾಗಿದ್ದು ಇದಕ್ಕೆ ಧೂಮಾ ಎಂಬುದಾಗಿ ನಾಮಕರಣ ಮಾಡಿದ್ದಾರೆ.

ಧೌಮ್ಯಮಹರ್ಷಿಗಳ ಕರಾರ್ಚಿತ ನಾರಸಿಂಹಸ್ವಾಮಿಯನ್ನು ಸ್ವಯಂಭೂ ವಿಗ್ರಹವೆಂದು ಹೇಳುತ್ತಾರೆ. ಸುಮಾರು ಎರಡಡಿ ಎತ್ತರವಿರುವ ಶಿಲ್ಪವು ಚತುರ್ಬಾಹುವಾಗಿದೆ. ಸನ್ನಿಧಿಗೆ ಹೋಗಬೇಕಾದರೆ ಎಚ್ಚರಿಕೆ ಅವಶ್ಯವಾದದ್ದು. ಇಲ್ಲಿನ ನರಸಿಂಹ ದೇವರ ಪೂಜಾದಿಗಳನ್ನು ಗುರವ ಸಮಾಜದ ಅರ್ಚಕರು ನೆರವೇರಿಸಿಕೊಂಡು ಬರುತ್ತಿದ್ದಾರೆ.

## ಕೋಲೆ

ಮಹಾರಾಷ್ಟ್ರದ ಸಾಂಗಲಿ ಜಿಲ್ಲೆಯಲ್ಲಿರುವ ಈ ಪ್ರಸಿದ್ಧ ಪುಣ್ಯಕ್ಷೇತ್ರವು ಪ್ರಾಚೀನತೆಯ ದೃಷ್ಟಿಯಿಂದಲೂ ಸಹ ಗಮನಾರ್ಹವಾದದ್ದು. ಕೋಲೆಯಲ್ಲಿರುವಂತಹ ಅಪೂರ್ವವಾದ ದೇವಸ್ಥಾನವು ಬೇರೊಂದಿಲ್ಲವೇನೊ ಎಂಬುವಷ್ಟರ ಮಟ್ಟಿಗೆ ಇದರ ಹಿರಿಮೆ ಹರಡಿಕೊಂಡಿದೆ. ನದೀತೀರದ ದೇವಾಲಯವಾಗಿರುವ ಇದು ಕೃಷ್ಣಾ ನದೀ ತೀರದಲ್ಲಿದೆ.

ಕೋಲೆಯಲ್ಲಿನ ದೇವಾಲಯವನ್ನು ಸುಮಾರು ಏಳುನೂರು ವರ್ಷಗಳ ಹಿಂದೆ ದೇವಗಿರಿಯ ಯಾದವ ರಾಯರ ಕಾಲದಲ್ಲಿ ನಿರ್ಮಿಸಿದಂತೆ ತಿಳಿದು ಬರುತ್ತದೆ. ದೇವಸ್ಥಾನದ

ಹೆಚ್ಚಿನ ಭಾಗವು ಒಳ್ಳೆಯ ಬೆಳಕು ಗಾಳಿಗಳಿಂದ ಕೂಡಿದ ನೆಲಮನೆಯಲ್ಲಿದೆ. ಅಪರಿಚಿತರಿಗೆ ಇಲ್ಲಿ ದೇವಾಲಯವಿದೆಯೆಂಬ ಕಲ್ಪನೆಯೂ ಉಂಟಾಗುವುದಿಲ್ಲ. ಮಾರ್ಗದರ್ಶಿಗಳ ಮೂಲಕ ವಾಗಲಿ, ವಿದ್ಯುತ್ ದೀಪದ ಸಹಾಯದಿಂದಾಗಲಿ ಈ ಆಲಯದ ಗರ್ಭಗುಡಿ ಮತ್ತು ಅಲ್ಲಿನ ಮೂರ್ತಿದರ್ಶನ ಮಾಡಬಹುದು. ಕೃಷ್ಣಾನದಿಯ ಹೊಡೆತದಿಂದ ಈ ಆಲಯವನ್ನು ರಕ್ಷಿಸಲು ಪೇಶ್ವೆಯವರ ಕಾಲದಲ್ಲಿ ಎತ್ತರ ಹಾಗೂ ಬಲವಾದ ಗೋಡೆಯನ್ನು ಕಟ್ಟಿಸಲಾಗಿದೆ.

ಇಲ್ಲಿರುವ ದೇವಾಲಯದ ಕಾರಣದಿಂದ ಇದಕ್ಕೆ 'ನರಸಿಂಹಪುರ'ವೆಂಬ ಮತ್ತೊಂದು ಹೆಸರಿರುವ ಹಾಗೆ ತಿಳಿಯಬರುತ್ತದೆ. ಇಲ್ಲಿನ ಸ್ವಾಮಿಯನ್ನು 'ಸ್ವಯಂಭು' ಎಂದು ಗುರುತಿಸಲಾಗಿದೆ. ಇತಿಹಾಸದಲ್ಲೂ ಹೀಗಿದೆ. ಹಿರಣ್ಯಕಶಿಪುವನ್ನು ಕೆಳಗಡೆ ಹಾಕಿಕೊಂಡು ತನ್ನ ಹದಿನಾರು ಕೈಗಳಿಂದ ಆತನ ಹೊಟ್ಟೆಯನ್ನು ಸೀಳುತ್ತಿರುವ ರುದ್ರರಮಣೀಯ ಭಂಗಿಯ ಶಿಲ್ಪವು ಅತ್ಯಂತ ಮನೋಜ್ಞವಾದದ್ದು.

ಈ ದೇವಸ್ಥಾನದ ಹಿನ್ನೆಲೆಯಲ್ಲಿ ಪೌರಾಣಿಕ ಕಥೆಯೊಂದು ಅಡಕವಾಗಿದೆ. ಪರಾಶರರಿಗೆ ನಮ್ಮ ಪುರಾಣಪ್ರಪಂಚದಲ್ಲಿ ವಿಶಿಷ್ಟಸ್ಥಾನವಿದೆಯಷ್ಟೆ! ಇವರ ಪ್ರಾರ್ಥನೆಯ ಮೇರೆಗೆ ನರಸಿಂಹದೇವರು ಈ ಸ್ಥಳದಲ್ಲಿ ಪ್ರತ್ಯಕ್ಷನಾಗಿರುತ್ತಾನೆ. ಸ್ವಯಂಭು ವಿಗ್ರಹದ ರೂಪದಲ್ಲಿ ಅವರಿಗೆ ದರ್ಶನವಿತ್ತಿರುತ್ತಾನೆ. ಪರಾಶರರು ಪರಮಾತ್ಮನ ದರ್ಶನದಿಂದ ತೃಪ್ತರಾಗಿ ಸ್ವಾಮಿಯ ವಿಗ್ರಹವನ್ನು ಕೃಷ್ಣನದಿಯಲ್ಲಿ ಇಟ್ಟರಂತೆ. ದೇವರ ವಿಗ್ರಹಗಳನ್ನು ರಕ್ಷಿಸಿಡಲು ನಮ್ಮ ಹಿಂದಿನವರು ಬಾವಿ-ತಟಾಕಗಳನ್ನು ಆರಿಸಿಕೊಂಡದ್ದು ವಿಧಿತವಾಗಿದೆ.

ಹೀಗೆ ಒಂದಾನೊಂದು ಕಾಲದಲ್ಲಿ ದೂರ್ವಾಸರು ರಕ್ಷಿಸಿ ಇಟ್ಟಿದ್ದ ಸ್ವಾಮಿಯ ವಿಗ್ರಹವನ್ನು ಇಲ್ಲಿಗೆ ಹತ್ತು ಮೈಲು ದೂರದಲ್ಲಿರುವ ಕುಂದಳ ಗ್ರಾಮದ ರಾಜನಾದ ಭೀಮನೆಂಬುವನು ಕೃಷ್ಣಾನದಿಯಿಂದ ತಂದು ಈಗಿರುವ ಸ್ಥಳದಲ್ಲಿ ಇಟ್ಟಿರುತ್ತಾನೆ. ತದನಂತರ ಈ ಸ್ಥಳದಲ್ಲಿ ಭಗವಂತನ ರಕ್ಷಣೆ ಮತ್ತು ಸಾಂಗವಾದ ಪೂಜೆ ಅರ್ಚನೆಗಳಿಗೆ ಆಶ್ರಯವಾಗಿ ದೇವಾಲಯವನ್ನು ನಿರ್ಮಿಸಲಾಗಿದೆ.

ಮೊದಲಿನಿಂದಲೂ ಮಹಾರಾಷ್ಟ್ರದ ಹಲವಾರು ಸಂತರು, ಜ್ಞಾನಿಗಳು ಈ ಪವಿತ್ರ ಕ್ಷೇತ್ರದಲ್ಲಿ ನೆಲೆಸುತ್ತ ಬಂದಿದ್ದಾರೆ. ಸಂತ ನಾಮದೇವರ ಪೂರ್ವಜರು, ಸಿದ್ಧೇಶ್ವರ ಮಹಾರಾಜರು, ಪಂ. ದಿಗಂಬರ ಶಾಸ್ತ್ರಿಗಳು ಮುಂತಾದವರು ಈ ಊರಿನವರೇ ಆಗಿದ್ದಾರೆ. ಇವರೇ ಅಲ್ಲದೆ ಪುಣೆಯ ನಾನಾ ಫಡ್ನವೀಸ, ಗ್ವಾಲ್ಹೇರದ ಮಹಾಜಿ ಶಿಂಧೆ, ಪುಣೆಯ ಪೇಶ್ವೆ ಮೋರೋಪಂತ ಮೊದಲಾದವರು ದೇವರ ದರ್ಶನಕ್ಕೆ ಮೇಲಿಂದ ಮೇಲೆ ಈ ಕ್ಷೇತ್ರಕ್ಕೆ ಬರುತ್ತಿದ್ದರು. ಇತಿಹಾಸದ ಕಾಲದಿಂದಲೂ ಪ್ರಸಿದ್ಧವಾದ ಈ ಕ್ಷೇತ್ರದಲ್ಲಿನ ದೇವಸ್ಥಾನಕ್ಕೆ ಛತ್ರಪತಿ ಶಾಹು ಮಹಾರಾಜರು ಹಾಗೂ ಇನ್ನಿತರರಿಂದ ಸನ್ನದುಗಳು ದೊರೆತಿದೆ. ಪರರಾಜರಾದ ಬಿಜಾಪುರದ ಅಹ್ಮದ್‌ಶಹಾ, ಆದಿಲ್‌ಶಹರಂಥ ಅರಸರೂ, ಬ್ರಿಟಿಷ್ ಸರ್ಕಾರದವರೂ ಈ ಕ್ಷೇತ್ರಕ್ಕೆ ಸನ್ನದು ನೀಡಿದ್ದಾರೆ. ಹೀಗೆ ಪೌರಾಣಿಕ-ಐತಿಹಾಸಿಕ ಕಾಲಗಳಿಂದಲೂ ಸಹ ನರಸಿಂಹರಾಜಪುರ ದೇವಸ್ಥಾನವು ಪ್ರಸಿದ್ಧಿ ಪಡೆದಿದೆ.

# ನೀರಾ ನರಸಿಂಹಪುರ

ಯತ್ರ/ಶ್ರೀಮಾನ್ನರಹರಿ ಕೈವಲ್ಯಾದ್ಯಖಿಲಾಥರ |
ಭಕ್ತಾನುಗ್ರಹವಾನಾಸ್ತೇ ಸ್ವರೂಪೋ ರೂಪವಾನಸಿ||

ಶ್ರೀನರಸಿಂಹಾವತಾರವನ್ನೆತ್ತಿ ದುಷ್ಟರ ವಧೆಯನ್ನು ಭಗವಂತನು ನೆರವೇರಿಸಿದ. ಇದರಿಂದ ಶಿಷ್ಟರಕ್ಷಣೆಯನ್ನೂ ಮಾಡಿದಂತಾಯಿತು. ಹಿರಣ್ಯಕಶಿಪುವಿಗೆ ಸೇರಿದ ರಾಜ್ಯವು ಪಾಕಿಸ್ತಾನದ ಮುಲ್ತಾನದಲ್ಲಿತ್ತೆಂದು ಹೇಳುತ್ತಾರೆ. ಅಲ್ಲಿಯೇ ನರಸಿಂಹ ಅವತಾರವಾಗಿ ಅವನ ವಧೆಯಾಯಿತಂತೆ. ಇಂತಹ ಹಿರಣ್ಯಕಶಿಪುವಿನ ವಧೆಗಾಗಿಯೇ ನೀರಾ ನರಸಿಂಹ ಕ್ಷೇತ್ರವು ಪ್ರಸಿದ್ದವಾಗಿದೆ.

ಶ್ರೀ ನರಸಿಂಹ ದೇವಸ್ಥಾನವಿರುವ ಈ ಕ್ಷೇತ್ರದ ಒಂದು ಪಕ್ಕದಲ್ಲಿ ನೀರಾ ನದಿಯೂ ಮತ್ತೊಂದು ಪಕ್ಕದಲ್ಲಿ ಭೀಮಾ ನದಿಯೂ ಇರುವುದಾಗಿದೆ. ಆದ್ದರಿಂದಲೇ ಇದಕ್ಕೆ ನೀರಾಕ್ಷೇತ್ರವೆಂದು ಹೆಸರುಬಂದಿದೆ. ಈ ಎರಡು ದ್ವೀಪ ಮಧ್ಯವಲ್ಲಿ ಸ್ವಾಮಿಯ ನೆಲೆ ಇದೆ. ಈ ದೇವರು ಮಹಾರಾಷ್ಟ್ರ ಮೈಸೂರು ಹಾಗೂ ಮಧ್ಯಪ್ರದೇಶಗಳ ಕುಲ ಸ್ವಾಮಿಯೆಂದು ಹೇಳುವರು.

ಋಗ್ವೇದದಲ್ಲಿ ಪ್ರಥಮಾಷ್ಟಕೀ ಸಪ್ತಮಾಧ್ಯಾನೀ ಎರಡನೇ ವರ್ಗದಲ್ಲಿ 'ದ್ವೇವಿರೂಪೇ ಚರಿತಃ' ಎಂದು ಸೂಕ್ತ ಆರಂಭಿಸಿ ನರಸಿಂಹ ಮಂತ್ರರಾಜ ಪದಗಳ ಸಂಬಂಧವೇ ನೀರಾ ನರಸಿಂಹಪುರವಾಗಿದೆ. ಶ್ರೀವಿಷ್ಣುವು ಸಮುದ್ರಾಸನನಾದಾಗ ನಾಭಿ ಮುಖಾಂತರ ಕಮಲ ರೂಪವಾಗಿ ಬ್ರಹ್ಮದೇವನ ಜನನವಾಯಿತು. ಅನಂತರ ಬ್ರಹ್ಮನ ತಪಸ್ಸಿನ ಫಲವಾಗಿ ವಿಷ್ಣುವು ಗುಹ್ಯಜ್ಞಾನವನ್ನು ಹೇಳಿ ಅನುಗ್ರಹಿಸಿದನು. ಆ ಸ್ಥಳವೇ ನೀರಾ ನರಸಿಂಹ ಕ್ಷೇತ್ರವಾಗಿದೆ. ವಿಷ್ಣುವಿನ ವಾಸ್ತವ್ಯ ಪ್ರದೇಶವೇ ನೀರಾ ನರಸಿಂಹಪುರ ವಾಗಿತ್ತು. ನೃಸಿಂಹ ಸ್ವರೂಪಮೂರ್ತಿ ಮಾಡಿ ಆ ಮೂರ್ತಿಯನ್ನು ನಿತ್ಯ ವಾಸ್ತವ್ಯಕ್ಕಾಗಿ ಶ್ರೀವಿಷ್ಣುವನ್ನು ಪ್ರಾರ್ಥಿಸಿದನು. ಆದ್ದರಿಂದ ವಿಷ್ಣುವು ಅಂತರ್ಧಾನನಾದನು. ಈ ನೃಸಿಂಹ ದೇವರಿಗೆ ಎರಡು ಪ್ರಮುಖ ಮೂರ್ತಿಗಳಿವೆ. ಒಂದು ಬ್ರಹ್ಮಕೃತ ದೇವ ಪ್ರಹ್ಲಾದಕೃತಿ ಮೂರ್ತಿ ರಾಮರಾಜನೆಂದೂ, ಕಲ್ಲಿನಿಂದಾಚೆ ಎಡಪಕ್ಕಕ್ಕೆ ಇನ್ನೊಂದು ಪ್ರಹ್ಲಾದ ನರಸಿಂಹ ಮೂರ್ತಿಯೂ ಇರುತ್ತದೆ.

ಮಹರ್ಷಿ ನಾರದರ ಆಶ್ರಮ ನರಸಿಂಹಪುರ ಭೀಮಾ ದಡದ ಕೋಟಿತೀರ್ಥದ ಮೇಲಿತ್ತು. ಸತಿ ಕಯಾಧು ಪ್ರಸೂತಳಾದಳು. ಮಹಾನ್ ಭಗವದ್ಭಕ್ತ ಪ್ರಹ್ಲಾದನು ಜನ್ಮವೆತ್ತಿದನು. ನಾರದರು ನೀರಾ-ಭೀಮಾ ನದಿಗಳ ಸಂಗಮದಲ್ಲಿ 'ಓಂ ನಮೋ ನಾರಾಯಣಾಯ' ಮಂತ್ರೋಪದೇಶ ಮಾಡಿ ಗುಹ್ಯಜ್ಞಾನ ಹೇಳಿದರು. ಪ್ರಹ್ಲಾದನು ನವ ವಿಧ ಭಕ್ತಿಗಳನ್ನು ಪ್ರದರ್ಶಿಸಿದನು. ಇಂತಹ ಪಾವನಕ್ಷೇತ್ರವಾದ ನೀರಾ ನರಸಿಂಹಪುರವು ಮಹಾರಾಷ್ಟ್ರದ ಪುಣೆ ಜಿಲ್ಲೆಯ ಅಕ್ಲೂಜಿ ತಾಲೂಕಿನಲ್ಲಿದೆ.

# ಎಲ್ಲೋರ



**ದಶಾವತಾರ ಗುಹೆಯಲ್ಲಿ ಹಿರಣ್ಯಕಶಿಪುವಿನೊಡನೆ ಸೆಣಸುತ್ತಿರುವ ನರಸಿಂಹನ ಭವ್ಯಶಿಲ್ಪ**

ಮಹಾರಾಷ್ಟ್ರದಲ್ಲಿನ ಔರಂಗಾಬಾದ್‌ಗೆ ಸಮೀಪವಿರುವ ಎಲ್ಲೋರದ ದೇವಾಲಯವು ವಿಶ್ವಪರಂಪರೆಯಲ್ಲಿ ಉನ್ನತ ಸ್ಥಾನವನ್ನು ಪಡೆದಿರುತ್ತದೆ. ಇಲ್ಲಿನ ಕೈಲಾಸನಾಥ ಆಲಯವನ್ನು ರಾಷ್ಟ್ರಕೂಟ ಅರಸರ ಬೃಹನ್ ನಿರ್ಮಿತಿಯೆಂದು ತಿಳಿಯಬಹುದಾಗಿದೆ. ಒಂದು ಬೆಟ್ಟವನ್ನೇ ಕಡೆದು ಕಟ್ಟಲಾಗಿರುವ ಇಂತಹುದೊಂದು ವಿಶ್ವ ಸ್ಮಾರಕವು ತನ್ನಲ್ಲಿ ಅಪಾರ ಕಲೆ, ಶಿಲ್ಪಿಯ ಕುಶಲತೆ, ಮಾನವ ಸಂಪನ್ಮೂಲದ ಬಳಕೆಯಾಗಿರುವುದನ್ನು ಗಮನಿಸಬಹುದು.

ಎಲ್ಲೋರದ ದಶಾವತಾರ ಗುಹೆಯು ಮುಖ್ಯವಾದ ಗುಹೆಗಳಲ್ಲೊಂದು. ಇದರ ನಿರ್ಮಾಣದಲ್ಲಿ ರಾಷ್ಟ್ರಕೂಟ ಅರಸರ ಔದಾರ್ಯ ಘನತೆಗಳ ಕಾಣಬಹುದು. ರಾಷ್ಟ್ರಕೂಟ ವಂಶದ ರಾಜ ದಂತಿದುರ್ಗನು ಈ ಆಲಯದ ಆರಂಭೋತ್ಸವದಲ್ಲಿ ಭಾಗವಹಿಸಿದ್ದಿರಬೇಕು. ಆತನು ಭೇಟಿ ನೀಡಿದ ವಿಚಾರವು ಸುಮಾರು ಎಂಟನೇ ಶತಮಾನದ ದಾಖಲೆಯಾಗಿರುತ್ತದೆ.

ಇಲ್ಲಿರುವ ಮುಖ್ಯವಾದೊಂದು ಪಟ್ಟಿಕೆಯು ಉಳಿದೆಲ್ಲವುದಕ್ಕಿಂತ ಶಿಲ್ಪಿಯ ಪ್ರತಿಭಾಗುಣ ಸಂಪನ್ನತೆಯನ್ನು ಎತ್ತಿ ಹೇಳುವಂತಿದೆ. ನರಸಿಂಹಸ್ವಾಮಿಯಯ ಮತ್ತು ರಕ್ಕಸ ಹಿರಣ್ಯಕಶ್ಯಪನ ಕಾಲುಗಳು ಒಂದರೊಡನೊಂದು ಸೇರಿಕೊಂಡಿರುವ ಚಿತ್ರ ಮನೋಜ್ಞ ವಾಗಿದೆ. ಹೋರಾಟದ ತೀವ್ರತೆಯನ್ನು ಇದು ನೆನಪಿಸುವಂತಿದೆ. ಇಂತಹ ಕಲಾಕೃತಿಗಳನ್ನು ಇನ್ನೂ ಹಲವೆಡೆಗಳಲ್ಲಿ ಗುರುತಿಸುವಂತಿರುವುದಾದರೂ ಪಟ್ಟದಕಲ್ಲಿನ ಏಕರ್ನಾಟಕವು ವಿರೂಪಾಕ್ಷ ದೇವಾಲಯದಲ್ಲಿನ ದಕ್ಷಿಣ ದಿಕ್ಕಿನ ಮಂಟಪದಲ್ಲಿ ಇಂತಹುದೇ ಯುದ್ಧ ದೃಶ್ಯವೊಂದನ್ನು ಕಲ್ಲಿನಲ್ಲಿ ಕಂಡರಿಸಿರುವುದು ಗಮನಾರ್ಹ.

# ಇತರ ಭಾರತೀಯ ರಾಜ್ಯಗಳು

## ಬಿಹಾರದ ಮಂದರ ಪರ್ವತ

ಮಂದರ ಪರ್ವತವೆಂಬುದು ಬಿಹಾರ ರಾಜ್ಯದ ಭಾಗಲ್ಪೂರ ಜಿಲ್ಲೆಯಲ್ಲಿರುವ ಪ್ರಸಿದ್ಧವಾದ ಬೆಟ್ಟವಾಗಿದೆ. ಭಾಗಲ್ಪೂರದಿಂದ ದಕ್ಷಿಣ ದಿಕ್ಕಿಗೆ ಸುಮಾರು ನಲವತ್ತೈದು ಕಿಲೋಮೀಟರ್ ದೂರದಲ್ಲಿರುವ ಈ ಸುಪ್ರಸಿದ್ಧವಾದ ಪರ್ವತ ಭಾಗವು ಸುಮಾರು ಏಳುನೂರು ಅಡಿಗಳಷ್ಟು ಎತ್ತರವಾಗಿದೆ. ಹಿಂದೂಗಳು ಹಾಗೂ ಬೌದ್ಧರಿಗೆ ಈ ಬೆಟ್ಟವು ಪವಿತ್ರ ಯಾತ್ರಾಸ್ಥಳವಾಗಿದ್ದು ಸಾಕಷ್ಟು ಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸುತ್ತಿದೆ.

ಮಂದರ ಪರ್ವತವು ಪೌರಾಣಿಕ- ಐತಿಹಾಸಿಕ ಕತೆಗಳಿಂದಲೂ ಪ್ರಸಿದ್ಧವಾಗಿದೆ. ನಮ್ಮ ಧಾರ್ಮಿಕ ಜಗತಿನಲ್ಲಿ ಸಮುದ್ರಮಂಥನಕ್ಕೆ ವಿಶಿಷ್ಟವಾದ ಸ್ಥಾನವಿದೆ. ಈ ಕಾರ್ಯಕ್ಕೆ ಮಂದರ ಪರ್ವತವನ್ನು ಕಡೆಗೋಲಾಗಿ ಬಳಸಲಾಯಿತು. ಆದಿಶೇಷನನ್ನು ಇದರ ಹಗ್ಗವಾಗಿ ಬಳಸಲಾಗಿತ್ತು. ಇದಕ್ಕೆ ನಿದರ್ಶನವಾಗಿ ಎಂಬಂತೆ ಈ ಪರ್ವತದ ಸುತ್ತಲಿರುವ ಎರಡು ದಪ್ಪನಾದ ಗೆರೆಗಳನ್ನು ತೋರಿಸಲಾಗುತ್ತದೆ. ಇದು ಅತ್ಯಂತ ಸ್ಪಷ್ಟವಾಗಿ ಕಾಣುತ್ತವೆ. ಬೆಣಚುಕಲ್ಲಿನ ಇಳಿಜಾರಾದ ಬೆಟ್ಟದ ಪೂರ್ವದಲ್ಲಿ ಏರಿಬಂದು ನಿಂತು ಇಂತಹ ಗೆರೆಗಳನ್ನು ಹಾಕುವುದು ಮಾನವಮಾತ್ರರಿಗೆ ಸಾಧ್ಯವಾಗದು. ಈ ಕಾರ್ಯಕ್ಕೆ ಆಧುನಿಕ ಉಪಕರಣವನ್ನು ಬಳಸಿರಬಹುದೆಂಬ ಸಂದೇಹ ಮೂಡುವುದಾದರೂ ಅಷ್ಟೊಂದು ಮುನ್ನಡೆ ಸಾಧಿಸಿದ ತಂತ್ರಜ್ಞಾನವಿತ್ತೆಂದು ಹೇಳಲು ಬರುವುದಿಲ್ಲ. ಹೀಗಾಗಿ ಇದು ಸಹಜವಾದದ್ದೇ ಇದ್ದಿರಬೇಕು.

ಮಂದರಪರ್ವತದ ಮೇಲೆ ಮಹಾ ಕಾಳಭೈರವ ಮೂರ್ತಿಯಿದ್ದು, ಇದನ್ನು ನೋಡಲು ಹೆಚ್ಚಾದ ಪರಿಶ್ರಮ ಅಗತ್ಯವಾದೀತು. ಇಲ್ಲಿಗೆ ತಲುಪಲು ಅತಿ ಕಡಿದಾದ ಮತ್ತು ಇಳಿಜಾರಾದ ಪಾವಟಿಗೆಗಳನ್ನು ಬಳಸಬೇಕಾದೀತು. ಈ ಮೂರ್ತಿಯ ಸಮೀಪ ಶಿಲಾಬರಹವೊಂದಿದ್ದು ಅದು ಅಸ್ಪಷ್ಟವಾಗಿದೆ. ಇದರ ಸಮೀಪ ಸರಸ್ವತಿ ವಿಗ್ರಹವಿದ್ದು

ಈ ವಿಗ್ರಹದ ಮೇಲಕ್ಕೆ ಎರಡು ದಾರಿಗಳು ಹೋಗಿವೆ. ಈ ಎರಡು ಮಾರ್ಗಗಳ ಮೂಲಕವಾಗಿಯೂ ಸಹ 'ನರಸಿಂಹ ಗುಹೆ' ಯನ್ನು ತಲುಪಬಹುದಾಗಿದೆ.

ನರಸಿಂಹ ಗವಿಯ ಸಮೀಪದಲ್ಲಿಯೇ 'ಸೀತಾಕುಂಡ'ವೆಂಬ ಸ್ಥಾನಕೊಳವಿದೆ. ಸಹಸ್ರಾರು ಯಾತ್ರಿಕರು ಈ ಕುಂಡದಲ್ಲಿ ಮಿಂದು ಶುಚಿರ್ಭೂತರಾಗುತ್ತಾರೆ. ನೃಸಿಂಹನ ಗುಹಾ ದೇವಾಲಯವು ಪರ್ವತದಿಂದ ಹೊರಗೆ ವಕ್ರಾಕಾರವಾಗಿದೆ. ಈ ಆಲಯದ ಚಾವಣಿಯ ಭಾಗವು ತುಂಬಾ ಕೆಳಗಿದ್ದು ನಿಂತು ದರ್ಶನ ಮಾಡುವುದು ಅಸಾಧ್ಯವಾಗುತ್ತದೆ. ಯಾತ್ರಿಕರು ತುಂಬಾ ಬಗ್ಗಿ ದೇವರ ದರ್ಶನ ಮಾಡಬೇಕಾಗುತ್ತದೆ. ಇಲ್ಲಿಯೇ ಸಮೀಪದಲ್ಲೊಂದು ಪಾಳುಬಿದ್ದ ಕಟ್ಟಡವಿದೆ. ಇದನ್ನು ಕಲ್ಲು ಹಾಗೂ ಇಟ್ಟಿಗೆಗಳಿಂದ ಕಟ್ಟಿರುತ್ತಾರೆ. ಮುಂಚೆ ಇಲ್ಲಿ ವಾನಪ್ರಸ್ಥಾಶ್ರಮದಿಂದ ತಮ್ಮ ಬಾಳು ಕಳೆದ ಆಶ್ರಮವಾಸಿಗಳು ಇದ್ದಿರಬೇಕು.

ಪರ್ವತದ ಮೇಲಿಂದ ನೋಡುವ ದೃಶ್ಯ ಆಶ್ಚರ್ಯಜನಕವಾದದ್ದು. ಹಾಗೆ ನೋಡಿದರೆ ಯಾವುದೇ ಬೆಟ್ಟದ ಮೇಲೆ ಹತ್ತಿ ನಾವು ನಯನ ಮನೋಹರವಾದ ಪ್ರಕೃತಿ ಸೌಂದರ್ಯವನ್ನು ಕಾಣಬಹುದು. ಮಂದರ ಪರ್ವತದ ಮೇಲಿಂದ ಹೊಲಗದ್ದೆಗಳು, ಕೆರೆಗಳು ಕಾಣುವುದಲ್ಲದೆ ಎರಡು ನದಿಗಳು - ಚಿರ್ ಹಾಗೂ ಚಂದನ್ - ಹರಿಯುವ ರಮಣೀಯವಾದ ದೃಶ್ಯವನ್ನು ಕಾಣಬಹುದಾಗಿದೆ.

ಪುರಾಣಕತೆಯೊಂದರ ಪ್ರಕಾರ ಮಧು-ಕೈಟಭರೆಂಬ ಅತ್ಯಂತ ಕುಪ್ರಸಿದ್ಧರಾದ ರಾಕ್ಷಸರನ್ನು ಭಗವಾನ್ ವಿಷ್ಣುವು ಈ ಪರ್ವತದಿಂದೊಡಗೂಡಿ ಸುಮಾರು ಹತ್ತು ಸಾವಿರ ವರ್ಷ ಕಾದಾಡಿ ಸೋಲಿಸಿದನೆಂದು ಹೇಳುತ್ತಾರೆ. ಈ ದುರುಳರ ಮೇಲೆ ಪರ್ವತವನ್ನು ಇರಿಸಲಾದ ಕಾರಣ ಅವರು ಮತ್ತೆ ಭೂಸುರರಿಗೆ ತೊಂದರೆ ಕೊಡಲಿಲ್ಲವೆಂದು ಈ ಕಥೆ ತಿಳಿಸುತ್ತದೆ. ಮಹಾಭಾರತದಲ್ಲಿಯೂ ಸಹ ಈ ಕತೆ ಪ್ರಸಿದ್ಧವಾಗಿದೆ.

ಇತಿಹಾಸದ ಪ್ರಕಾರವಾಗಿ ನೋಡುವುದಾದರೆ, ಗುಪ್ತ ಸಾಮ್ರಾಜ್ಯವು ಒಡೆದ ಮೇಲೆ ಮಂದರ ರಾಜ್ಯದ ಗುಪ್ತರು ಮಗಧರ ಮೇಲೆ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿದರು. ಮಾಧವಗುಪ್ತನ ಮಗನಾದ ಆದಿತ್ಯಸೇನನು ಈ ಪರಂಪರೆಯಲ್ಲಿ ತಾನೇ ರಾಜನಾಗಿ, ಉತ್ತಮ ಆಡಳಿತಗಾರನೆಂದೂ ಸಹ ಹೆಸರು ಪಡೆದಿದ್ದನು. ಈ ಪರ್ವತದ ಮೇಲೆ ಈತನ ಶಾಸನವೊಂದಿದೆ. ಇದು ಈತನಿಗೂ ಮತ್ತು ಈತನ ಇವರಿಬ್ಬರು ಮಹಾವಿಷ್ಣುವಿನ ಅವತಾರನಾದ ನೃಸಿಂಹ ಸ್ವಾಮಿಯನ್ನು ಪರ್ವತದ ಮೇಲೆ ಪ್ರತಿಷ್ಠೆ ಮಾಡಿದರೆಂದು ಇದರಿಂದ ತಿಳಿದುಬರುತ್ತದೆ. ಮಂದರ ಪರ್ವತದಲ್ಲಿನ ನರಸಿಂಹದೇವರು ಸುಮಾರು ಮೂರು ಅಡಿ ಎತ್ತರವಾಗಿದ್ದು ನೋಡಲು ಆಕರ್ಷಕವಾಗಿದೆ. ಬಿಹಾರ ರಾಜ್ಯದಲ್ಲಿ ದೊರೆತಿರುವ ಏಕೈಕ ಗುಹಾದೇವಾಲಯವೆಂಬ ಪ್ರಖ್ಯಾತಿಗಳಿಂದಲೂ ಸಹ ಇಲ್ಲಿನ ದೇವಾಲಯವು ಪಾತ್ರವಾಗಿದೆ. ಹೀಗೆ ನೆರೆರಾಜ್ಯಗಳಲ್ಲಿ ದೊರೆತ ನರಸಿಂಹ ಆರಾಧನೆಗೆ ಮಂದರ ಪರ್ವತ ನರಸಿಂಹನ ನೆಲೆ ನಿದರ್ಶನವಾದೀತು.

## ಉತ್ತರ ಪ್ರದೇಶ

# ದೇವಗರ್



ದೇವಗರ್‌ನ ಗುಪ್ತರ ಕಾಲದ ದೇಗುಲದಲ್ಲಿರುವ ನರಸಿಂಹಸ್ವಾಮಿ

ಉತ್ತರಪ್ರದೇಶದ ಲಲಿತ್‌ಪುರಕ್ಕೆ ಇಪ್ಪತ್ತು ಮೈಲಿಗಳ ಅಂತರದಲ್ಲಿದೆ ದೇವಗರ್. ಇಲ್ಲಿನ ದಶಾವತಾರ ದೇವಾಲಯವು ಗುಪ್ತರ ಕಾಲಕ್ಕೆ ಸೇರಿದ್ದಾಗಿದೆ. ಇದರ ಕಾಲ ಕ್ರಿ.ಶ. ಐದನೇ ಶತಮಾನ. ಬೇಟ್ವಾ ನದಿಯ ದಂಡೆಯಲ್ಲಿರುವ ಈ ವಿಷ್ಣುದೇವಾಲಯದಲ್ಲಿ ನರಸಿಂಹನ ವಿಶಿಷ್ಟವಾದ ಶಿಲ್ಪವಿದೆ.

ಇದರ ವಿವರಣೆಯು ಹೀಗಿರಬಹುದು. ಅರಳಿದ ತಾವರೆಯಲ್ಲಿ ಸ್ವಾಮಿಯು ಅರ್ಧ ಪರ್ಯಂಕಾಸನದಲ್ಲಿ ಕುಳಿತಿದ್ದಾನೆ. ಬಲಗಡೆಯ ಮೇಲಿನ ಕೈಯಲ್ಲಿ ಗದೆಯಿದ್ದು, ಕೆಳಗಿನ ಕೈ ಚಕ್ರಾಯುಧವನ್ನು ಹೊಂದಿದೆ. ಈ ಹಸ್ತವು ಬಲ ಮೊಣಕಾಲಿನ ಮೇಲೆ ಅವಲಂಬಿತವಾಗಿದೆ. ಎಡಗಡೆಯ ಮೇಲ್ಭಾಗದ ಹಸ್ತದಲ್ಲಿ ಶಂಖವಿದ್ದು, ಕೆಳಗಡೆ ಕೈಯನ್ನು ಎಡತೊಡೆಯ ಮೇಲೆ ಊರಿಕೊಂಡಿದೆ. ಉಗ್ರವಾದ ಮುಖವನ್ನು ಹೊಂದಿ, ಭುಜಗಳ ಮೇಲೆ ಹರಡಿರುವ ದಟ್ಟವಾದ ಕೂದಲುಗಳಿಂದ ಕೂಡಿರುವ ಶಿಲ್ಪದ ಹಿಂಭಾಗದಲ್ಲಿ ಬಿಡಿಸಲಾಗಿರುವ ಪ್ರಭಾಮಂಡಲವು ತೇಜೋಪುಂಜ ಜ್ವಾಲೆಗಳಂತೆ ಕಂಡುಬರುತ್ತದೆ ಮೂರ್ತಿಯ ಎಡಭಾಗದಲ್ಲಿ ಅಂಜಲೀಮುದ್ರೆಯಲ್ಲಿರುವ ಭಕ್ತನನ್ನು ಚಿತ್ರಿಸಲಾಗಿದೆ.

# ಲಕ್ನೋ



ಉತ್ತರಪ್ರದೇಶದ ಲಕ್ನೋ ಸಂಗ್ರಹಾಲಯದಲ್ಲಿರುವ ಅಷ್ಟಭುಜ ನೃಸಿಂಹ ಮೂರ್ತಿ ಶಿಲ್ಪಶಾಸ್ತ್ರದ ದೃಷ್ಟಿಯಿಂದ ತುಂಬ ಕುತೂಹಲವಾದದ್ದಾಗಿ ಕಂಡು ಬರುತ್ತಿದೆ. ಈ ಮೂರ್ತಿಯನ್ನು ಕಡೆಯುವಲ್ಲಿ ಶಿಲ್ಪಿಯು ತೋರಿರುವ ಅದ್ಭುತವಾದ ಪ್ರತಿಮಾ ಚಮತ್ಕಾರ ಮತ್ತು ಉತ್ಕೃಷ್ಟ ಕಲಾತ್ಮಕ ಗುಣಗಳು ಇದನ್ನೊಂದು ಮೇಲು ದರ್ಜೆಯ ಶಿಲ್ಪಗಳ ಗುಂಪಿಗೆ ಸೇರಿಸುತ್ತದೆ. ಇದರ ಕಾಲವನ್ನು ಒಂಬತ್ತನೆ ಶತಮಾನವೆಂದು ಹೇಳಬಹುದು. ಮೇಲಿನ ಎರಡು ಕೈಗಳಲ್ಲಿ ನಾಗಪಾಶವಿದೆ. ಎಡಗೈನ ನಾಗಪಾಶದ ತುದಿಯಲ್ಲಿ, ಗುರಾಣಿಯನ್ನು ಹಿಡಿದಂತೆ ಕಂಡು ಬರುತ್ತದೆ. ಇನ್ನೊಂದು ಜೋಡಿಯ ಕೈಗಳಲ್ಲಿ ಶಂಖ-ಚಕ್ರಗಳಿವೆ. ಮೂರನೆಯ ಜೋಡಿ ಕೈಗಳು ಮುರಿದುಹೋಗಿವೆ. ನಾಲ್ಕನೆಯ ಕೈಗಳ ಜೊತೆಯೊಂದು ದುರುಳನ ವಿದಾರಣ ಕ್ರಿಯೆಯಲ್ಲಿ ತೊಡಗಿರುವುದು ಕಾಣುತ್ತವೆ.

ನರಸಿಂಹನ ಬಲತೊಡೆಯ ಮೇಲೆ ಹಿರಣ್ಯಕಶ್ಯಪನ ಶರೀರವಿದ್ದು, ಪಾದದ ಕೆಳಗೆ ಸೋತುಬಿದ್ದ ರಕ್ಕಸನ ರೂಪವನ್ನು ಕಾಣಬಹುದಾಗಿದೆ. ತಾವರೆಯನ್ನು ಬಲಗೈಲಿ ಹಿಡಿದ ದೇವಿಯು ನರಸಿಂಹನ ಬಲಭಾಗದಲ್ಲಿ ನಿಂತಿದ್ದಾಳೆ. ಈಕೆ ಲಕ್ಷ್ಮಿಯಿರಬಹುದು. ತನ್ನ ಕೈಯಲ್ಲಿ ಹಾವನ್ನು ಹಿಡಿದಿರುವ ಸೇವಕನನ್ನು ಎಡಭಾಗದಲ್ಲಿ ಬಿಡಿಸಲಾಗಿದೆ. ನೃಸಿಂಹಶಿಲ್ಪದ ಮೇಲ್ಭಾಗದಲ್ಲಿ ಬ್ರಹ್ಮ ಮತ್ತು ಶಿವರ ಚಿತ್ರಗಳನ್ನು ಬಿಡಿಸಲಾಗಿದೆ. ಈ ಶಿಲ್ಪದಲ್ಲಿರುವ ನಾಗಪಾಶದಿಂದ ನೃಸಿಂಹ ಪಂಥವು ಶೈವ ಇಲ್ಲವೆ ತಾಂತ್ರಿಕ ಆರಾಧನೆಯ ಪ್ರಭಾವ ಒಳಗಾಗಿರುವುದನ್ನು ತಿಳಿಸುವಂತಿದೆ. ಇದರ ವಿವರಣೆಯನ್ನು ಪರಾಶರ ಸಂಹಿತೆಯಲ್ಲಿ ಕಾಣಬಹುದು.

# ನೈಮಿಷಾರಣ್ಯ

ಶ್ರೀಮದ್ ಭಾಗವತವು ನಮ್ಮ ಧಾರ್ಮಿಕ ಸಾಹಿತ್ಯ ಭಂಡಾರದಲ್ಲಿ ಅತ್ಯಂತ ಶ್ರೇಷ್ಠವಾದದ್ದೆಂದು ನಾವಿಂದು ಭಾವಿಸಿಕೊಂಡು ಬಂದಿದ್ದೇವೆ. ಸೂತ ಪುರಾಣಿಕರು ಶೌನಕ ಮೊದಲಾದ ಋಷಿಗಳಿಗೆ ಭಾಗವತ ಪುರಾಣವೇ ಮೊದಲಾದ ಪುರಾಣಗಳನ್ನು ಹೇಳುವ ಪೂರ್ವದಲ್ಲಿ, ಭೂತ-ಪ್ರೇತ ರಾಕ್ಷಸರಿಂದ ಭಾಧೆಯಾಗಬಾರದೆಂಬ ಕಾರಣದಿಂದ, ಸಕಲ ವಿಘ್ನವನ್ನು ದೂರ ಮಾಡುವವನಾದ, ಮಹಾಬಲಶಾಲಿಗಳಾದ ಅಸುರರನ್ನು

ಯಿಸಿದವನಾದ ಸಕಲದೇವತೆಗಳಿಂದ ವಂದ್ಯನಾದ ಶ್ರೀ ಲಕ್ಷ್ಮೀನರಸಿಂಹನನ್ನು ಇಲ್ಲಿ ಸ್ಥಾಪಿಸಲಾಗಿದೆಯೆಂದು ಪುರಾಣೋಕ್ತವಾದ ಸಂಗತಿಯಾಗಿದೆ.

ನೈಮಿಷಾರಣ್ಯವು ಉತ್ತರ ಪ್ರದೇಶದಲ್ಲಿದೆ. ಇದು ಲಖನೌಗೆ ಸುಮಾರು ಅರವತ್ತೈದು ಕೋಮೀಟರ್ ದೂರದಲ್ಲಿದೆ. ಗೋಮತಿ ನದೀತೀರದಲ್ಲಿರುವ ಇದಕ್ಕೆ ಈಗ ಬೇರೆ ಸರನ್ನಿಡಲಾಗಿದೆ. ಇಂದು ಇದು ನಿಮ್‌ಬಾರ್ ಅಥವಾ ನಿವರ್‌ಗಾರ್ ಎಂದಾಗಿದೆ. ಶ್ರೀ ಷ್ಣು ಪರಮಾತ್ಮನು ದಾನವರ ಸೈನ್ಯವನ್ನೆಲ್ಲ ನಿಮಿಷಮಾತ್ರದಲ್ಲಿ ನಾಶಮಾಡಿದ ಕಾರಣಕ್ಕೆ ಮ ನೈಮಿಷಾರಣ್ಯವೆಂದು ಕರೆಸಿಕೊಂಡಿತೆಂಬ ವಿಚಾರ ವರಾಹಪುರಾಣದಲ್ಲಿ ಉಕ್ತವಾಗಿರು ದೆ. ನೈಮಿಷಾರಣ್ಯವೆಂಬ ಇದರ ಉತ್ತರ ರೂಪವೇ ತಿಳಿಸುವಂತೆ ಇಲ್ಲಿನ ವನಸಿರಿಯು ಕೋಹಾರಿಯಾದದ್ದು. ಇಲ್ಲಿ ಹರಿಯುವ ಗೋಮತಿಯು ಯಾರು ಪುರಾಣ ಶ್ರವಣ ಡುವವರೋ ಅಂತಹ ಋಷಿಗಳ ಚಿತ್ತವನ್ನು ಸಹ ಸತ್‌ಚಿತ್‌ನ ಕಡೆಗೆ ಹೊರಳಿಸುವವಳಾಗಿ ಳೆ.

ನೈಮಿಷಾರಣ್ಯದಲ್ಲಿ ಷಟ್ಕೋನಾಕಾರದ ಚಕ್ರತೀರ್ಥವಿದೆ. ತೀರ್ಥದ ಸುತ್ತಲೂ ವಾರು ದೇವಾಲಯಗಳಿವೆ. ಇವುಗಳ ಮಧ್ಯೆ ಧ್ರುವತಾರೆಯಂತೆ ಲಕ್ಷ್ಮೀನರಸಿಂಹ ಾಲಯವು ಶೋಭಿಸುತ್ತಿದೆ. ಇದೊಂದು ಸ್ವಯಂಭು ವಿಗ್ರಹವೆಂದು ಹೇಳುತ್ತಾರೆ. ಕರಾರ್ಚಿತವಾದದ್ದೆಂದು ಇದನ್ನು ಪವಿತ್ರವಾಗಿ ಭಾವಿಸುತ್ತಾರೆ. ಈ ದೇವರ ಉತ್ಸವಗಳು ್ಗುಣ ಮಾಸದಲ್ಲಿ ನೆರವೇರುತ್ತವೆ.

ಪೂರ್ವರೈಲ್ವೆಯ ಪಲವಟಮತ್ತರ ಮತ್ತು ಸೀತಾಪುರ ಮಧ್ಯದಲ್ಲಿ ಸಿಂಸಾರ್ ಲ್ದಾಣದಿಂದ ಒಂದು ಮೈಲಿ. ನಿಲ್ದಾಣದಲ್ಲಿ ಎತ್ತಿನ ಗಾಡಿಗಳಿವೆ. ಎಲ್ಲ ಸೌಕರ್ಯ ಇವೆ. ಸಾಮಾನ್ಯವಾಗಿ ಯಾತ್ರಾರ್ಥಿಗಳು ಬದರಿಕಾಶ್ರಮದಿಂದ ಹಿಂದಿರುಗುವಾಗ ್ಸುತ್ತಾರೆ. ಇಲ್ಲಿನ ದೇವಾಲಯದಲ್ಲಿ ದಕ್ಷಿಣದೇಶದ ಸಂಪ್ರದಾಯದಲ್ಲಿ ಎಲ್ಲ ಗಳೂ ನಡೆಯುವುದು. ಯಾತ್ರಾರ್ಥಿಗಳು ಇಲ್ಲಿ ಮೊದಲ ಚಕ್ರತೀರ್ಥದಲ್ಲಿ ಾಡಿ ಆಮೇಲೆ ಗೋಮತೀನದಿಯಲ್ಲಿ ಸ್ನಾನ ಮಾಡುತ್ತಾರೆ. ಮುಂದಿರುವ ಅರಣ್ಯಕ್ಕೆ ಸಮರ್ಪಣೆ ಮಾಡುತ್ತಾರೆ.

# ಒರಿಸ್ಸಾದ ಕಳಿಂಗ ಪಟ್ಟಣಂ

ಇದು ಒರಿಸ್ಸಾ ರಾಜ್ಯದಲ್ಲಿದೆ. ಐದನೇ ಶತಮಾನದವರೆಗೆ ಇದಕ್ಕೆ ಕಳಿಂಗ ಂದು ಹೆಸರಿದ್ದ ಹಾಗೆ ತಿಳಿದು ಬರುತ್ತದೆ. ಈಗಿನ ಒರಿಸ್ಸಾ ರಾಜ್ಯದ ಗುಂಜಾಂ ್ಲಿರುವ ಮುಖಲಿಂಗಂ ಪಟ್ಟಣವೇ ಪ್ರಾಚೀನ ಕಳಿಂಗ ರಾಜ್ಯವೆಂದು ಇತಿಹಾಸಕಾರರು ಡಿದ್ದಾರೆ. ಗಂಗ ಅರಸರ ಮೂಲಪುರುಷನಾದ ಒಂದನೆಯ ಆರನೆಯ ಐದನೆಯ ದ ಕಡೆಯ ಭಾಗದಿಂದ ಆರನೆಯ ಶತಮಾನದ ನಾಲ್ಕನೆ ದಶಕದವರೆಗೆ ಕಳಿಂಗ

ಅಧಿಪತಿಯಾಗಿ ಇದ್ದನು. ಕೆಲವು ವರ್ಷಗಳ ಅನಂತರ ಒಂದನೆಯ ನರಸಿಂಹನು ತನ್ನ ಪರಾಕ್ರಮದಿಂದ ಬಂಗಾಲ ರಾಜ್ಯದ ಅನೇಕ ಭಾಗಗಳನ್ನು ಗೆದ್ದುಕೊಂಡನು. ಒರಿಸ್ಸಾ ರಾಜ್ಯದ ಸುಪ್ರಸಿದ್ಧವಾದ ಸೂರ್ಯ ದೇವಾಲಯವನ್ನು ಕೊನಾರ್ಕದಲ್ಲಿ ಈತ ನಿರ್ಮಿಸಿರುತ್ತಾನೆ. ನಂತರ ಈತನ ಮಗನಾದ ಭಾನುದೇವನು ಪಟ್ಟಕ್ಕೆ ಬರುತ್ತಾನೆ.

ನರಹರಿತೀರ್ಥರು ತಮ್ಮ ಗುರುಗಳಾದ ಮಧ್ವಾಚಾರ್ಯರ ಆದೇಶದಂತೆ ಭಾನುದೇವನಿಗೆ ರಾಜ್ಯಕಾರ್ಯದಲ್ಲಿ ನೆರವಾಗಲಿಕ್ಕಾಗಿ ಕಳಿಂಗದೇಶಕ್ಕೆ ಆಗಮಿಸುತ್ತಾರೆ. ಒರಿಸ್ಸಾದ ಶ್ರೀಕೂರ್ಮದಲ್ಲಿ ಯೋಗಾನರಸಿಂಹ ದೇವಾಲಯವನ್ನು ಇವರು ಕಟ್ಟಿಸುತ್ತಾರೆ ಭಾನುದೇವರ ನಂತರ ಎರಡನೆಯ ನರಸಿಂಹನು ರಾಜ್ಯಭಾರಕ್ಕೆ ಬರುತ್ತಾನೆ. ಈತನು ನರಹರಿತೀರ್ಥರ ಪರಮಾನುಗ್ರಹಕ್ಕೆ ಪಾತ್ರನಾಗಿ ಪ್ರಜಾಹಿತನಾಗಿ ತನ್ನ ಆಡಳಿತವನ್ನು ನಡೆಸುತ್ತಾನೆ. ಅನಂತರ ನರಹರಿತೀರ್ಥರು ರಾಜ್ಯ ಭಂಡಾರದಲ್ಲಿದ್ದ ಶ್ರೀರಾಮ-ಲಕ್ಷ್ಮಣ-ಸೀತೆಯರ ವಿಗ್ರಹಗಳನ್ನು ತಮ್ಮ ಗುರುಗಳ ಆಜ್ಞೆಯಂತೆ ಎರಡನೆ ನರಸಿಂಹನಿಂದ ಪಡೆದುಕೊಂಡು ಉಡುಪಿಗೆ ಆಗಮಿಸುತ್ತಾರೆ. ನರಹರಿತೀರ್ಥರು ಪ್ರತಿಷ್ಠೆ ಮಾಡಿದ್ದ ನರಸಿಂಹದೇವರು ಮತ್ತು ಆ ಕಾರಣವಾಗಿ ಕಳಿಂಗದ ರಾಜರು ನರಸಿಂಹನನ್ನು ತಮ್ಮ ಕುಲದೈವವನ್ನಾಗಿ ಸ್ವೀಕರಿಸಿ, ಆರಾಧಿಸಿಕೊಂಡು ಬರುತ್ತಿದ್ದಾರೆ.

## ಅಸ್ಸಾಂನ ಹಾಜೋ

ಹಾಜೋ ಎಂಬುದು ಅಸ್ಸಾಂ ರಾಜ್ಯದ ಕಾಮರೂಪ ಜಿಲ್ಲೆಯಲ್ಲಿದೆ. ಇಲ್ಲಿದ್ದ ಹಯಗ್ರೀವ ಮಾಧವ ದೇವಸ್ಥಾನವನ್ನು ಕಾಲಾಪಹಾರ ಎಂಬುವನು ನಾಶಪಡಿಸಿದನು. ಕ್ರಿಶ. ಒಂದು ಸಾವಿರದ ಐದುನೂರಾ ಎಂಬತ್ಮೂರರಲ್ಲಿ ಶುಕ್ಲದೇವ ರಾಜನ ಮಗನಾದ ರಘುದೇವ ನಾರಾಯಣನು ಕಟ್ಟಿಸಿದನು. ಇದರಲ್ಲಿ ಅನೇಕ ಭಕ್ತರ ಸೇವೆಯು ಸೇರಿದೆ. ರಾಜನು ಅನೇಕ ದತ್ತಿಗಳನ್ನು ಹಾಕಿ ಕೊಟ್ಟಿರುವುದು ಇಲ್ಲಿನ ಶಿಲಾಲೇಖದಿಂದ ತಿಳಿಯುತ್ತದೆ.

ಮೂಲವಿಗ್ರಹವು ಹಯಗ್ರೀವ ದೇವರದು ಇರಬೇಕಾಗಿತ್ತು. ಆದರೆ ಅಲ್ಲಿ ನೃಸಿಂಹ ಪ್ರತಿಮೆ ಇರುವುದು. ದೇವಸ್ಥಾನವು ಸುಂದರವಾಗಿದೆ. ಇದನ್ನು ಹಯಗ್ರೀವ ದೇವರೆಂದೂ ಕರೆಯುವ ರೂಢಿಯಿರುತ್ತದೆ.

## ಹಿಮಾಚಲ ಪ್ರದೇಶದ ಚಂಧಾ

ಹಿಮಾಚಲ ಪ್ರದೇಶದ ಚಂದಾದ ಹರಿರಾಜ ದೇವಸ್ಥಾನದ ವೈಕುಂಠ ಚತುರ್ಮುಖ ವಿಷ್ಣುವಿನ ನಯನ ಮನೋಹರ ಕಂಚಿನ ವಿಗ್ರಹ ಹದಿನೈದು ಹದಿನಾರು ಶತಮಾನಗಳ ಪ್ರಾಚೀನ. ಐದು ಅಡಿ ಎತ್ತರ ಸುಮಾರು ನಾಲ್ಕುನೂರು ಕಿಲೋ ತೂಕದ ನರಸಿಂಹನ ಪ್ರತೀಕವಾದ ಸಿಂಹ,ವರಾಹ, ಕಪಿಲ ವಿಷ್ಣು, ಇವು ಚತುರ್ಮುಖಗಳು. ಮೇಲಿನ ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಶಂಖ, ಕೆಳಗಿನ ಬಲಗೈಯಲ್ಲಿ ಗದಾದೇವಿ, ಎಡಗೈಯಲ್ಲಿ ಚಕ್ರಪುರುಷ, ಎರಡು ಕಾಲಿನ ಮಧ್ಯದಲ್ಲಿ ಪೃಥ್ವಿಯಿರುವಂತೆ ಬಿಡಿಸಲಾಗಿದೆ.

# ಉಪಸಂಹಾರ

ನೂರು ಮಾತಿನಲ್ಲಿ ಹೇಳಲಾರದ್ದನ್ನು ಒಂದು ಕೃತಿ ಸಾಧಿಸಬಲ್ಲದು. ಹತ್ತಾರು ಓದಿಗಿಂತ ಒಂದು ಸಾರಿಯ ಬರಹ ವಿಷಯದ ಮನನಕ್ಕೆ ಮಾರ್ಗವಾಗಬಲ್ಲುದು. ತತ್ತ್ವದ ವಿಚಾರದಲ್ಲೂ ಈ ಅಭಿಪ್ರಾಯ ಸಮ್ಮತವಾಗಬಹುದೆಂದು ಭಾವಿಸ ಉಪನಿಷತ್ತು-ಪುರಾಣ-ಸಂಹಿತೆ- ಇತಿಹಾಸಗಳಂತಹ ಹತ್ತು ಹಲವು ಜಟಿಲ ಂಥಗಳು ವಿವರಿಸಲಾಗದ ಗಹನವಾದ ಸಂಗತಿಗಳನ್ನು ಅದರ ಪ್ರತಿಮಾರೂಪಗಳಂತಹ ಳಿಂದ ಸಾಧ್ಯವಾದಷ್ಟು ಸ್ಪಷ್ಟಗೊಳಿಸಿಕೊಳ್ಳಲು ಸಾಧ್ಯವಾಗಬಹುದು. ಇದಕ್ಕೆ ಈ ದಾರಿತೋರಿಸಿರುವ ನೂರೆಂಟು ನೆಲೆಗಳಲ್ಲಿ ಪ್ರಕಟಗೊಂಡಿರುವ ಭಗವಂತನ ಕಾರಗಳು, ರೂಪಕಲ್ಪನೆಗಳು, ಅದರ ಪರಿಣಾಮಗಳು ಸಾಕ್ಷಿಯಾಗಿದೆಯೆಂದು ಳ್ಳಬಹುದು.

ಇಲ್ಲಿ ವಿವರಿಸಲಾಗಿರುವ ದೇವಾಲಯಗಳಲ್ಲಿ ಹಲವಾರು, ತಮ್ಮ ರಚನೆಯನ್ನು ಕಲಾವೈಭವಗಳಿಂದ ಇಂದು ವಂಚಿತವಾಗಿರಬಹುದು. ಪೂಜೆ,ಅರ್ಚನೆ, ಆಗಮ ಂದ ದೂರವಾಗಿರಬಹುದು. ಇವುಗಳ ಹೆದ್ದಾರಿಯಲ್ಲಿ ಕಲ್ಲು-ಮುಳ್ಳುಗಳೇ ಹುದು. ಇಲ್ಲಿನ ಮೂರ್ತಿಗಳು ಬದಲಾಗಿರಬಹುದು. ಮೂಲರಚನೆಗಳು ಮುಕ್ಕಾಗಿ ಳು ನಮ್ಮನ್ನು ಅಣಕಿಸುತ್ತಿರಬಹುದು. ಕಾಲ-ದೇಶ-ಜನಗಳ ಪರಿವರ್ತನೆಯಿಂದ ಭಾವನೆಗಳ ಸೇರಿಕೊಂಡು ಪ್ರಬಲವಾದೊಂದು ಹಿನ್ನಡೆ ಉಂಟಾಗಿರಬಹುದು. ಕೊರತೆಗಳನ್ನು ಸುಧಾರಿಸಿಕೊಳ್ಳುವ ಒಂದೇ ಒಂದು ಪರಿಹಾರವೆಂದರೆ ಅವು ಾಲ, ಹೇಗಿವೆಯೋ ಹಾಗೆಯೇ ಅವುಗಳನ್ನು ಕಾಣುವ ಅರ್ಥೈಸಿಕೊಳ್ಳುವ ಕಲ್ಲಿ ನಿರತರಾಗುವುದೇ ಆಗಿದೆ. ಅದರ ಅನುಕ್ರಮದಲ್ಲಿ ಇಲ್ಲಿ ಸಾಗಲಾಗಿದೆ.

ದೇವಾಲಯಗಳು ಮನುಷ್ಯಜೀವನದ ಅವಿಭಾಜ್ಯ ಅಂಗದಂತೆ ಬೆರೆತುಹೋಗಿವೆ. ರ ಮನಸ್ಸಿನಲ್ಲಿ ಪುರಾಣೇತಿಹಾಸಗಳನ್ನು ಜೀವಂತ ಉಳಿಸುವ ಸಾಧನಗಳಾಗಿವೆ. ಜಂಜಾಟದಿಂದ ಜಡವಾದ ಮನಸ್ಸಿಗೆ ಶಾಂತಿ, ಸಮಾಧಾನಗಳನ್ನು ದೇವಾಲಯಗಳು ವೆ. ನಾವು ಯಾವುದರಿಂದ ಸಮಾಧಾನರಾಗುತ್ತೇವೆಯೋ, ಪರಿಶುದ್ಧರಾಗುತ್ತೇ ಅಂತಹ ನೆಲೆಗಳನ್ನು ಸುರಕ್ಷಿತವಾಗಿ ಸುಸ್ಥಿತಿಯಲ್ಲಿಟ್ಟುಕೊಳ್ಳಬೇಕಾದುದು ಅನಿ ದೇವಾಲಯವಿಲ್ಲದ ಊರಿನಲ್ಲಿ ವಾಸಿಸಬಾರದೆಂಬ ತಮಿಳು ನಾಣ್ಣುಡಿಗೆ ವಾಗಿ ನಾವಿರುವ ಊರಿನಲ್ಲಿ ಇರುವ ದೇವಾಲಯವನ್ನು ಪೂಜಾದಿಗಳಿಂದ ಗದಂತೆ ನೋಡಿಕೊಳ್ಳೋಣ. ದೇವಾಲಯವೇ ಇಲ್ಲದ ಊರಿನಲ್ಲಿ ಆಗಮ, ಗಳಿಗೆ ಅನುಗುಣವಾಗಿ ಅಂಥದ್ದೊಂದು ಪೂಜಾಮಂದಿರವನ್ನು ನಿರ್ಮಿಸಿಕೊಂಡು ದಿಗಳ ಜೀವನಕ್ಕೆ ನಾಂದಿಹಾಕೋಣ. ಮಾನವನಿರುವವರೆಗೆ ಒಂದಲ್ಲ ಒಂದು ದೇವಾಲಯಗಳಿದ್ದೇ ಇರುತ್ತವೆ ಎಂಬುದಂತೂ ಸತ್ಯವಾಕ್ಕು.

# ಗ್ರಂಥ ಋಣ


೦೧. ವಾದಿರಾಜತೀರ್ಥ ಪ್ರಬಂಧ - ಅನು: ಪ್ರೊ. ವಿ.ಪ್ರಭಂಜನಾಚಾರ್ಯ

೦೨. ಮೂರ್ತಿಶಿಲ್ಪ ನೆಲೆ-ಹಿನ್ನೆಲೆ - ಪ್ರೊ. ಎಸ್.ಕೆ. ರಾಮಚಂದ್ರರಾವ್

೦೩. ನರಸಿಂಹ ದರ್ಶನ
ರಜತ ಮಹೋತ್ಸವ ಸ್ಮರಣ ಸಂಚಿಕೆ - ಶ್ರೀಕ್ಷೇತ್ರ ತೊರವಿ

೦೪. ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ-೩ - ಕರ್ನಾಟಕ ರಾಜ್ಯ ಸರ್ಕಾರ

೦೫. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ - ಮೈ.ವಿ.ವಿ.ಪ್ರ.ಸಂ. ಡಾ|| ಹಾ.ಮಾ.ನಾ

೦೬. ಸಪ್ತಗಿರಿ ಮಾಸಿಕದ ಬಿಡಿ ಲೇಖನಗಳು - ವಿವಿಧ ಲೇಖಕರು

೦೭. ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶಿನಿ - ಡಾ|| ಎನ್.ಎಸ್. ಅನಂತರಂಗಾಚಾರ್

೦೮. ಆಂಧ್ರಪ್ರದೇಶಂಲೋನಿ ಪ್ರಸಿದ್ಧ ಪುಣ್ಯಕ್ಷೇತ್ರಾಲು - ಡಾ|| ಜಿ.ಎಸ್. ಮೋಹನ್

೦೯. ಆಂಧ್ರಪ್ರದೇಶಂಲೋನಿ ಸುಪ್ರಸಿದ್ಧ ನರಸಿಂಹ ಕ್ಷೇತ್ರಾಲು- ಬಿ.ಎಂ.ಡಿ. ಖಾಜಾ

೧೦. ಹೊಯ್ಸಳ ವಾಸ್ತುಶಿಲ್ಪ - ಡಾ|| ಎಸ್. ಶ್ರೀಕಂಠಶಾಸ್ತ್ರಿ

11. Mysore Gazetter Vol-5 - Ed. By C. HayavadanRao

12. Mysore Gazetter - Kolar Dist. (1968)

13. Elements of Hindu Iconography - T.A. Gopinatha Rao

14. Vishnu-Kosha -Pr.S.K. RamachandraRao

15. 108 Vaishnavite Divya Deshams
Vol 1 & 6 - Miss. M.S. Ramesh

16. Vishnu Mayam Jagath - Pr. K.K. Murthy

17. A Hand book of South Indian
Images - T.N. Srinivasan

18. Iconography of Vishnu - Kalpana S. Desai

19. Art of India - C. Shivarama Murthy








